೧೩ನೆಯ ವರ್ಷದ ೩ನೇ ಕುಡಿಯು

# ಬ್ಯಾಂಕ ವ್ಯವಸಾಯದ ಕೈಪಿಡಿ

# A HAND-BOOK ON BANKING

ಲೇಖಕರು:

ಬಿಂದುರಾವ ರಾಘವೇಂದ್ರರಾವ ಕೆಂಭಾವಿ

ಬಿ. ಎ. (ಆನರ್ಸ)



ಮೇ ೧, ೧೯೫೧

ಮಿಂಚಿನಬಳ್ಳಿ ಕಾರ್ಯಾಲಯ,
ಧಾರವಾಡ

ಬೆಲೆ:

ಸಾದಾ ಪ್ರತಿ ೨-೦-೦

ಉತ್ತಮ ಪ್ರತಿ ೨-೮-೦

[illegible]



ಶ್ರೀ. ಕೌಜಲಗಿ ಹನುಮಂತರಾಯರ

# ಹಾಸ್ಯ ಪ್ರಬಂಧಗಳು

ಅರ್ಥಾತ್

ನಾಟ್ಯಛಟ, ಲೇಖ ಮೊದಲಾದವು

ಅವರ ಅಲ್ಪ ಚರಿತ್ರೆಯೊಡನೆ.



ಇದೇ ಜೂನ ತಿಂಗಳಲ್ಲಿ ಪ್ರಕಟವಾಗುವದು

**ಬೆಲೆ ಎರಡೇ ರೂಪಾಯಿ**

ಚಂದಾದಾರರು, ಜೂನ ತಿಂಗಳದ ೧ನೇ ತಾರೀಖಿನ ಒಳಗಾಗಿ ಮುಂಗಡ ಹಣ ಕಳಿಸಿದರೆ, ಅವರಿಗೆ ೧—೧೨—೦ ಗಳಿಗೆ ಕಳಿಸಲಾಗುವದು. ವ್ಹಿ. ಪಿ. ಯಿಂದಲೂ, ರಜಿಸ್ಟರದಿಂದಲೂ ಅಪೇಕ್ಷಿಸುವವರು ವ್ಹಿ. ಪಿ. ಹಾಗು ರಜಿಸ್ಟರದ ವೆಚ್ಚವನ್ನು ಕೊಡಬೇಕಾಗುವದು. ಇಂತಹ ಚಂದಾದಾರರಿಗೆ ಸಾದಾ ಅಂಚೆಯ ವೆಚ್ಚ ಮಾತ್ರವಿಲ್ಲ.

ಬೇಗನೆ ಪತ್ರ ಬರೆದು ಹಣ ಕಳಿಸಿ ನಿಮ್ಮ ಹೆಸರನ್ನು ನೊಂದಾಯಿಸಿರಿ.

ಮಿಂಚಿನಬಳ್ಳಿ ಕಾರ್ಯಾಲಯ,
ಧಾರವಾಡ

ಮುದ್ರಕರು:
ಎಸ್. ಎಸ್. ಹಂಗೇಲ.
ವಿಜಯ ಮುದ್ರಾಲಯ,
ಧಾರವಾಡ

ಪ್ರಕಾಶಕರು:
ಬಿಂದುಮಾಧವ ಬುರ್ಲಿ,
ಮಿಂಚಿನಬಳ್ಳಿ ಕಾರ್ಯಾಲಯ,
ಧಾರವಾಡ

# ಒಂದೆರಡು ಮಾತುಗಳು

**ಬ್ಯಾಂಕ್ ವ್ಯವಸಾಯದ ಕೈಪಿಡಿಯು** ಈ ವರುಷದ ೩ನೆಯ ಕುಡಿಯು. **ತಕ್ಕಡಿಯ** ನಂತರ ಬಳ್ಳಿಯಲ್ಲಿ ಆರ್ಥಿಕ ಜೀವನವನ್ನು ಕುರಿತು ಇದು ಎರಡನೆಯ ಗ್ರಂಥವು. ಬಳ್ಳಿಯ ಪ್ರಚಾರಕ್ಕಾಗಿ ಹೋದಾಗ ಅನೇಕ ಮಿತ್ರರು ಈ ವಿಷಯವನ್ನು ಕುರಿತು ಗ್ರಂಥ ಬರೆಯಿಸಲು ಸೂಚಿಸಿದ್ದರು. ಈ ಬಗ್ಗೆ ಆಲೋಚಿಸುತ್ತಿರುವಾಗ, ಶ್ರೀ. ಕೆಂಭಾವಿಯವರು, ಸ್ವಯಂ ಸ್ಫೂರ್ತಿಯಿಂದ ತಮ್ಮ ಜ್ಞಾನದ ಹಾಗು ಅನುಭವದ ಲಾಭವು ಕನ್ನಡ ಜನಾಂಗಕ್ಕೆ ಆಗಬೇಕೆಂಬ ಸೇವಾಬುದ್ಧಿಯಿಂದ ಈ ಗ್ರಂಥವನ್ನು ಬರೆದು ಸಿದ್ಧಗೊಳಿಸಿದ್ದ ಸಂಗತಿಯು ನನಗೆ ನನ್ನ ಮಿತ್ರರಾದ ಶ್ರೀ. ಕೌಜಲಗಿ ಮಧ್ವರಾಯರಿಂದ ತಿಳಿಯಿತು. ಶ್ರೀ. ಕೆಂಭಾವಿಯವರಿಗೆ ಈ ಗ್ರಂಥವನ್ನು ಬಳ್ಳಿಗೆ ಕೊಡಲು ಬಿನ್ನವಿಸಿಕೊಂಡೆ. ಅವರು ಸಂತೋಷದಿಂದ ಕೊಟ್ಟದ್ದಕ್ಕಾಗಿ ನಾನು ಅವರಿಗೆ ತುಂಬಾ ಋಣಿಯಾಗಿದ್ದೇನೆ.

ಶ್ರೀ. ಕೆಂಭಾವಿ ಬಿಂದುರಾಯರು. ಒಳ್ಳೇ ಕುಶಾಗ್ರಬುದ್ಧಿಯವರು, ಪ್ರತಿಭಾಶಾಲಿಗಳು, ಬ್ಯಾಂಕಿಂಗ್ ಲೋಕದಲ್ಲಿ ಕೀರ್ತಿ ಪಡೆದವರು. ಇವರು ಹಿಂದುಸ್ತಾನದಲ್ಲಿ ಶ್ರೇಷ್ಠ ಬ್ಯಾಂಕುಗಳಲ್ಲಿ ಒಂದಾದ **ಬ್ಯಾಂಕ್ ಆಫ್ ಇಂಡಿಯಾ**ದಲ್ಲಿ ೧೫ ವರ್ಷ ಕೆಲಸ ಮಾಡಿದವರು. ಇವರ ಅನುಭವವನ್ನೂ ಕುಶಾಗ್ರಬುದ್ಧಿಯನ್ನೂ ಅವರು ಕಂಡು ಪುಣೆ ಶಾಖೆಗೆ ಇವರನ್ನು ಮ್ಯಾನೇಜರರನ್ನಾಗಿ ಮಾಡಿದರು. ಇವರ ಕೆಲಸವು ಬ್ಯಾಂಕಿನವರಿಗೆ ಒಳ್ಳೇ ತೃಪ್ತಿಕರವಾಗಿ ಕಂಡದ್ದರಿಂದ ಅವರು ಇವರನ್ನು ತಮ್ಮ ವೆಚ್ಚದಿಂದಲೇ ಬ್ಯಾಂಕಿಂಗ ವ್ಯವಸಾಯದ ಹೆಚ್ಚಿನ ಅಭ್ಯಾಸಕ್ಕಾಗಿ ೬ ತಿಂಗಳ ಇಂಗ್ಲಂಡಕ್ಕೆ ಕಳಿಸಿದರು. ಅಲ್ಲಿ ಇವರು ಪರದೇಶದ ಬ್ಯಾಂಕುಗಳ ಆಡಳಿತೆ ಹಾಗು ವ್ಯವಹಾರವನ್ನು ಅಭ್ಯಸಿಸಿಕೊಂಡು ಮರಳಿದರು. ಮುಂದೆ ಕೆಲಕಾಲದ ನಂತರ **ಡಿಸ್ಕೌಂಟ್ ಬ್ಯಾಂಕ್ ಆಫ್ ಇಂಡಿಯಾ**ದವರು, ಪುಣೆಯಲ್ಲಿ ತಮ್ಮದೊಂದು ಹೊಸ ಶಾಖೆಯನ್ನು ತೆಗೆದು ಅದರ ಸಂಪೂರ್ಣ ಹೊಣೆಯನ್ನು ಹೊರಲು, ಶ್ರೀ. ಕೆಂಭಾವಿಯವರನ್ನು ಬಿನ್ನವಿಸಿಕೊಂಡರು. ಇಂತಹ ಅನುಭವಶಾಲಿಗಳು ಬರೆಯಲುದ್ಯುಕ್ತರಾದುದು ನಮ್ಮ ನಾಡಿನ ಏಳ್ಗೆಯ ಲಕ್ಷಣವೆಂದೇ ನಾನು ಬಗೆಯುತ್ತೇನೆ.

ಈ ವಿಷಯವು ವಿದೇಶೀಯರಿಂದ ಬೆಳೆಸಲ್ಪಟ್ಟಿದ್ದು ಅವನ್ನು ಸಾಪ್ರ ಅನುಕರಿಸಿದ ಮೂಲಕ; ಅನೇಕ ಪಾರಿಭಾಷಿಕ ಶಬ್ದಗಳನ್ನು ಬಳಸುವ ಪ್ರಸಂಗವು ಅನಿವಾರ್ಯವೆಂಬುದನ್ನು ವಾಚಕರಿಗೆ ಬೇರೆ ಹೇಳಬೇಕಾಗಿಲ್ಲ. ಅಲ್ಲದೆ. ಶ್ರೀಮಾನ್ ಕೆಂಭಾವಿಯವರ ಆಯುಷ್ಯದ ಬಹುಭಾಗವು ಮಹಾರಾಷ್ಟ್ರದ ಮಧ್ಯದಲ್ಲಿ ಹೋಗಿದೆ. ಆದುದರಿಂದ ಅವರ ಬರವಣಿಗೆಯಲ್ಲಿ ಮಹಾರಾಷ್ಟ್ರದ ಛಾಯೆ ಅಲ್ಲಲ್ಲಿ ಕಾಣಬಹುದು. ವಾಚಕರು ಸಹೃದಯತೆಯಿಂದ ಈ ಕಡೆಗೆ ನೋಡಬೇಕೆಂದು ನನ್ನ ನಮ್ರ ಬಿನ್ನಹ.

ಶ್ರೀ ಕೆಂಭಾವಿಯವರು, ವಿಷಯವನ್ನು ಅತ್ಯಂತ ಸುಲಭ ಭಾಷೆಯಲ್ಲಿ ಸಾಮಾನ್ಯರಿಗೂ ತಿಳಿಯುವಂತೆ ಬರೆಯಲು ಯತ್ನಿಸಿದ್ದಾರೆ. ಈ ಪುಸ್ತಕವು ಈ ವ್ಯವಹಾರಕ್ಕೆ ಬೇಕಾಗುವ ಸಾಮಾನ್ಯ ಜ್ಞಾನವನ್ನು ಒದಗಿಸಿ ಕೊಟ್ಟು, ನಮ್ಮ ಬೆಳವಣಿಗೆಗೆ ಅನುಕೂಲವಾಗುವದೆಂದು ಇದನ್ನು ಓದಿದವರಿಗೆಲ್ಲ ಅನಿಸದೆ ಇರದೆಂದು ನಮಗೆ ಅನಿಸುತ್ತದೆ. ಇದರಲ್ಲಿ ಸೂಚಿಸಿದ ಕೆಲ ಸೂಚನೆಗಳು, ಬ್ಯಾಂಕಿನ ಜೀವನದಲ್ಲಿ ಬಂದರೆ, ನಮ್ಮ ಉದ್ಯೋಗಗಳಿಗೆ ಹೊಸ ಕಳೆ ಬರುವುದರಲ್ಲಿ ಸಂಶಯವಿಲ್ಲ. ಕನ್ನಡ ವಾಚಕರೂ, ವ್ಯಾಪಾರಿಗಳೂ. ಬ್ಯಾಂಕ ವ್ಯವಸಾಯಗಾರರೂ, ಇದರ ಯೋಗ್ಯ ಉಪಯೋಗ ಮಾಡಿಕೊಳ್ಳಬೇಕೆಂದು ಬಿನ್ನವಿಸುತ್ತೇನೆ.

ನ್ಯಾಯಮೂರ್ತಿ ಶ್ರೀ. ಲೋಕೂರ ನಾರಾಯಣರಾಯರು, ಮುನ್ನುಡಿಯನ್ನು ಬರೆದು, ಈ ಪುಸ್ತಕಕ್ಕೆ ಕಳೆಕಟ್ಟಿದ್ದಾರೆ. ಅವರಿಗೆ ಬಳ್ಳಿಯು ಇದಕ್ಕಾಗಿ ಧನ್ಯವಾದಗಳನ್ನು ಅರ್ಪಿಸುತ್ತದೆ.

ಶ್ರೀ. ಕೆಂಭಾವಿ ಬಿಂದೂರಾಯರು ಅತ್ಯಂತ ಶ್ರಮವನ್ನು ವಹಿಸಿ. ಈ ಗ್ರಂಥ ಬರೆದು ಬಳ್ಳಿಗೆ ಕೊಟ್ಟಿದ್ದಕ್ಕಾಗಿ ಇನ್ನೊಮ್ಮೆ ಅವರಿಗೆ ಧನ್ಯವಾದಗಳನ್ನು ಅರ್ಪಿಸುವೆ. ದೇವರು ಅವರಿಗೆ ಆಯುರಾರೋಗ್ಯಗಳನ್ನು ಕೊಟ್ಟು ಇದೇ ಬಗೆಯಾಗಿ ನಾಡಿನ ಸೇವೆಗೈಯ್ಯುವ ಪ್ರೇರಣೆಯನ್ನು ಮಾಡಲೆಂದು ಪ್ರಾರ್ಥಿಸುತ್ತೇನೆ.

ಜ್ಯೈ. ಶು. ೧೫
೧೮೭೩ ಖರಸಂವತ್ಸರ

ತಮ್ಮ ಸೇವಕ
**ಬಳ್ಳಿ ಬಿಂದು ಮಾಧವ.**

# ಮುನ್ನುಡಿ

●

ದೇಶದ ಸಾಂಪತ್ತಿಕ ಸ್ಥಿತಿಯು ಸುಧಾರಿಸಬೇಕಾದರೆ ಅಲ್ಲಿಯ ಉತ್ಪಾದನ ಶಕ್ತಿಯೂ ವ್ಯಾಪಾರ ಉದ್ದಿಮೆಗಳೂ ದಿನದಿನಕ್ಕೆ ಬೆಳೆಯುತ್ತ ಹೋಗಬೇಕು. ಅವುಗಳ ಬೆಳವಣಿಗೆಗೆ ಸಮೃದ್ಧ ಮತ್ತು ಕಾರ್ಯಕ್ಷಮವಾದ ಬ್ಯಾಂಕುಗಳ ಉಪಯೋಗವು ಎಷ್ಟು ಇದೆ ಎಂಬದನ್ನು ಹೇಳಬೇಕಾಗಿಲ್ಲ. ವ್ಯಾಪಾರ ಉದ್ಯೋಗಗಳ ವಿಕಾಸವು ಬ್ಯಾಂಕುಗಳ ಹಣದ ಸಹಾಯ ವಿಲ್ಲದೆ ದೊಡ್ಡ ಪ್ರಮಾಣದ ಮೇಲೆ ಆಗುವದು ಶಕ್ಯವಿಲ್ಲವೆಂಬದನ್ನು ಸಾಮಾನ್ಯ ಜನತೆಯು ಇನ್ನೂ ಮನಗಂಡಿಲ್ಲ. ವಿಶೇಷತಃ ಕನ್ನಡಿಗರಲ್ಲಿ ಬ್ಯಾಂಕುಗಳ ಪ್ರಸಾರವು ಎಷ್ಟು ಆಗಬೇಕೋ ಅಷ್ಟು ಆಗಿಲ್ಲ. ಅವರಿಗೋಸ್ಕರ ಬ್ಯಾಂಕುಗಳ ಇತಿಹಾಸ, ರಚನೆ, ಉಪಯೋಗ, ವ್ಯವಹಾರ, ಗುಣದೋಷ ಮುಂತಾದವುಗಳನ್ನು ಅವರ ಮಾತೃಭಾಷೆಯಲ್ಲಿ ತಿಳಿಸಿ ಹೇಳುವದು ಅಗತ್ಯ ವಿದ್ದು, ಶ್ರೀಯುತ ಕೆಂಭಾವಿಯವರು ಇಂಥ ಕೈಪಿಡಿಯನ್ನು ಕನ್ನಡದಲ್ಲಿ ಬರೆದು ಕನ್ನಡಿಗರನ್ನು ಋಣಿಯಾಗಿ ಮಾಡಿದ್ದಾರೆ. ಬೇರೆ ಭಾಷೆಗಳಲ್ಲಿ ಬ್ಯಾಂಕುಗಳ ವಿಷಯವಾಗಿ ಅನೇಕ ಚಿಕ್ಕದೊಡ್ಡ ಗ್ರಂಥಗಳನ್ನು ನಾನು ನೋಡಿದ್ದೇನೆ. ಆದರೆ ಕನ್ನಡದಲ್ಲಿಯ ಆ ಕೊರತೆಯನ್ನು ಈ ಕೈಪಿಡಿಯು ದೂರ ಮಾಡಿ ಸಾಮಾನ್ಯ ವ್ಯವಹಾರಗಳಲ್ಲಿ ಬೇಕಾಗುವ ತಕ್ಕ ಜ್ಞಾನವನ್ನು ಮಾಡಿಕೊಡಲಿಕ್ಕೆ ಸಾಕಷ್ಟು ವಿವೇಚನೆಯು ಇದರಲ್ಲಿ ಉಂಟು.

ಬೇರೆ ಬೇರೆ ದೇಶಗಳಲ್ಲಿಯ ಬ್ಯಾಂಕುಗಳ ಇತಿಹಾಸವು ಬಹಳ ಮನೋರಂಜಕವಿದೆ. ಇಂಗ್ಲಂಡದಲ್ಲಿ ಈಗಿನ ತರದ ಬ್ಯಾಂಕಿನ ವ್ಯವಹಾರವು ಸನ್ ೧೬೯೪ನೆಯ ಇಸವಿಯಲ್ಲಿ "ದಿ ಬ್ಯಾಂಕ್ ಅಫ್ ಇಂಗ್ಲಂಡ"ದ ಸ್ಥಾಪನೆಯಿಂದ ಪ್ರಾರಂಭವಾಯಿತು. ಮುಂದೆ ೧೮ನೆಯ ಶತಮಾನದಲ್ಲಿ ಎಷ್ಟೋ ಖಾಸಗಿ ಬ್ಯಾಂಕುಗಳ ಸ್ಥಾಪನೆಯಾಗಿ, ೧೮೪೪ನೆಯ ಇಸವಿಯಲ್ಲಿ

**"ದಿ ಬ್ಯಾಂಕ್ ಚಾರ್ಟರ್ ಆ್ಯಕ್ಟ್"** ಎಂಬ ಕಾಯದೆಯು ಆದಂದಿನಿಂದ ಇಂಗ್ಲೆಂಡಿನ ಬ್ಯಾಂಕುಗಳ ಸ್ಥಿತಿ ಬಹಳವಾಗಿ ಸುಧಾರಿಸುತ್ತ ಹೋಯಿತು. ಹಿಂದುಸ್ಥಾನದಲ್ಲಿಯಾದರೂ ೧೮ನೆಯ ಮತ್ತು ೧೯ನೆಯ ಶತಮಾನಗಳಲ್ಲಿ ಕಲಕತ್ತಾ ಮುಂಬಯಿ ಶಹರಗಳಲ್ಲಿ **"ಏಜನ್ಸಿ ಹೌಸ್"**ಗಳಿಂದ ಪ್ರಾರಂಭವಾಗಿ, ಎಷ್ಟೋ ಬ್ಯಾಂಕುಗಳು ಸ್ಥಾಪಿತವಾಗಿ, ಪ್ರತಿ ವರ್ಷ ಅವುಗಳ ಸಂಖ್ಯೆಯು ಹೆಚ್ಚುತ್ತ ನಡೆಯಿತು. ಆದರೆ ಈ ಶತಮಾನದಲ್ಲಿ ಹಲವು ಪ್ರಸಿದ್ಧ ಬ್ಯಾಂಕುಗಳು ಮುಳುಗಿ ಹೋದುದರಿಂದ, ಬ್ಯಾಂಕುಗಳ ಮೇಲಿನ ಜನರ ವಿಶ್ವಾಸವು ಕುಂದಿಹೋಗಿತ್ತು. ಆದರೆ **"ದಿ ರಿಝರ್ವ ಬ್ಯಾಂಕ್ ಆಫ್ ಇಂಡಿಯಾ"**ದ ಸ್ಥಾಪನೆ ಆದಂದಿನಿಂದ ಎಲ್ಲ ಬ್ಯಾಂಕುಗಳಿಗೂ ಉತ್ತೇಜನ ಸಿಕ್ಕು ಮತ್ತೆ ಜನರ ವಿಶ್ವಾಸಕ್ಕೆ ಅವು ಪಾತ್ರವಾಗಹತ್ತಿವೆ "ರಿಝರ್ವ ಬ್ಯಾಂಕು" ಅನ್ಯ ಬ್ಯಾಂಕುಗಳ ವ್ಯವಹಾರಗಳನ್ನು ದಕ್ಷತೆಯಿಂದ ನಿರೀಕ್ಷಣೆ ಮಾಡುತ್ತಿದ್ದು, ಸಕಾಲಕ್ಕೆ ಅವುಗಳಿಗೆ ಯೋಗ್ಯ ಉಪದೇಶ ಕೊಡುತ್ತದೆ, ಇಷ್ಟೇ ಅಲ್ಲ. ಪ್ರಸಂಗ ಬಿದ್ದಲ್ಲಿ ಯೋಗ್ಯ ಧನಸಹಾಯವನ್ನಾದರೂ ಮಾಡುತ್ತದೆ. ಇದರಿಂದ ಬ್ಯಾಂಕುಗಳ ಸುರಕ್ಷತೆಯ ಬಗ್ಗೆ ಇದ್ದ ಜನರ ಸಂಶಯವು ಎಷ್ಟೋ ಮಟ್ಟಿಗೆ ದೂರಾಗಿದೆ. ಬ್ಯಾಂಕುಗಳಲ್ಲಿ ಜನರ ವಿಶ್ವಾಸ ಉಂಟಾದರೆ, ಅವರು ತಮ್ಮ ಸಂಚಿತ ಧನವನ್ನು ಅಲ್ಲಿ ಸುರಕ್ಷತೆಗಾಗಿಯೂ ಬಡ್ಡಿಯ ಆಶೆಗಾಗಿಯೂ ತಾವಾಗಿಯೇ ಇಡುವರು. ಮತ್ತು ಈ ರೀತಿ ಬ್ಯಾಂಕುಗಳಲ್ಲಿ ಕೂಡಿದ ಹಣವು ವ್ಯಾಪಾರ ಉದ್ಯೋಗಗಳ ಕಡೆಗೆ ಸುಲಭವಾಗಿ ಉಪಯೋಗಿಸಲಿಕ್ಕೆ ಅನುಕೂಲವಾಗುವದು. ಬೇರೆ ಬೇರೆ ಜನರ ಸಣ್ಣ ಸಣ್ಣ ದ್ರವ್ಯನಿಧಿಗಳು ಬ್ಯಾಂಕಿನಲ್ಲಿ ಒಟ್ಟುಗೂಡುವದರಿಂದ ಯೋಗ್ಯವಾದ ವ್ಯಾಪಾರ ಉದ್ಯಮಗಳಿಗೆ ಸಾಕಷ್ಟು ಹಣವನ್ನು ಸಾಲ ಕೊಡುವದು ಬ್ಯಾಂಕುಗಳಿಗೆ ಶಕ್ಯವಾಗುವದು. ಈ ರೀತಿಯಾಗಿ ಬ್ಯಾಂಕುಗಳಲ್ಲಿ ಠೇವು ಇಡುವವರು ಪರ್ಯಾಯದಿಂದ ದೇಶದ ವ್ಯಾಪಾರ ಉದ್ಯೋಗಗಳ ಉನ್ನತಿಗೆ ಸಹಾಯ ಮಾಡಿದಂತಾಗುವದು. ಆದೊಂದು ಪರೋಕ್ಷವಾದ ದೇಶಸೇವೆಯೇ ಸರಿ. ಇದನ್ನು ಲಕ್ಷ್ಯಕ್ಕೆ ತಂದು ಪ್ರತಿ ಒಬ್ಬನು ಶಕ್ಯವಿದ್ದಷ್ಟು ಹಣ ಉಳಿಸಿ ಬ್ಯಾಂಕಿನಲ್ಲಿ ಇಟ್ಟರೆ ಅವನಿಗೂ ಹಿತವಾಗುವದು ಮತ್ತೂ ದೇಶಕ್ಕೂ ಹಿತವಾಗುವದು.

ಮೇಲಾಗಿ ಬ್ಯಾಂಕುಗಳಲ್ಲಿ ಠೇವು ಇದ್ದರೆ ಎಲ್ಲ ಸಾಮಾನ್ಯ ವ್ಯವಹಾರಗಳನ್ನು ಚೆಕ್(ಹುಂಡಿ)ಗಳಿಂದ ಮಾಡಲಿಕ್ಕೆ ಸುಲಭವಾಗುತ್ತದೆ. ನಮ್ಮಲ್ಲಿ ಈ ರೀತಿಯಾಗಿ ವ್ಯವಹಾರ ಮಾಡುವ ಪದ್ಧತಿಯು ಇನ್ನೂ ಅಷ್ಟು ಪ್ರಚಾರದಲ್ಲಿ ಬಂದಿಲ್ಲ. ಈ ಪದ್ಧತಿಯಿಂದಾಗುವ ಲಾಭವನ್ನು ಶ್ರೀಯುತ ಕೆಂಭಾವಿಯವರು ಈ ಕೈಪಿಡಿಯಲ್ಲಿ ತೋರಿಸಿಕೊಟ್ಟಿದ್ದಾರೆ. ಅವರು ಬರೆದಂತೆ ಜನರಲ್ಲಿ "ಬ್ಯಾಂಕಿಂಗ್ ಹ್ಯಾಬಿಟ್" (Banking habit) ಹೆಚ್ಚಾದಷ್ಟು ಹಿತಕರವದೆ.

ಇದನ್ನೆಲ್ಲ ಕನ್ನಡಿಗರಿಗೆ ತಿಳಿಸಿ ಹೇಳುವ ಸದ್ಬುದ್ಧಿಯಿಂದ ಶ್ರೀಯುತ ಕೆಂಭಾವಿಯವರು ಪರಿಶ್ರಮದಿಂದ ಈ ಕೈಪಿಡಿಯನ್ನು ಬರೆದಿದ್ದಾರೆ. ಅವರು ಇಲ್ಲಿಯ ಒಂದು ಪ್ರಸಿದ್ಧ ಬ್ಯಾಂಕಿನಲ್ಲಿ ಮೇಲಧಿಕಾರಿಯಂತೆ ಎಷ್ಟೋ ವರ್ಷ ಕೆಲಸ ಮಾಡಿ ಇಂಗ್ಲಂಡದಲ್ಲಿಯ ಬ್ಯಾಂಕುಗಳಲ್ಲಿ ಸಹ ಪ್ರತ್ಯಕ್ಷ ಅನುಭವ ಪಡೆದದ್ದರಿಂದ ಇಂಥ ಪುಸ್ತಕ ಬರೆಯಲಿಕ್ಕೆ ಯೋಗ್ಯತೆಯುಳ್ಳವರಿದ್ದಾರೆ. ಇವರ ಉಪಯೋಗವನ್ನು ಎಲ್ಲ ಕನ್ನಡಿಗರು ಮಾಡಿಕೊಂಡು ಅವರಿಗೆ ಇನ್ನೂ ಇದಕ್ಕೂ ಹೆಚ್ಚಿಗೆ ವಿಸ್ತೃತವಾದ ಗ್ರಂಥಗಳನ್ನು ಬರೆಯಲಿಕ್ಕೆ ಹುರುಪು ಕೊಟ್ಟಾರೆಂದು ಆಶಿಸುವೆ.

ನಾ. ಸ್ವಾ. ಲೋಕೂರ

---

# ಆತ್ಮನಿವೇದನ

ಸುಮಾರು ೧೧ ವರ್ಷಗಳಿಂದ ಸುಪ್ತಾವಸ್ಥೆಯಲ್ಲಿದ್ದ ನನ್ನ ಕೃತ ಸಂಕಲ್ಪಕ್ಕೆ ಈ ದಿನ ಮೂರ್ತಸ್ವರೂಪವು ಬಂದೊದಗಿತು. ೧೯೩೭-೩೮ನೆಯ ಇಸ್ವಿಯಲ್ಲಿ ನಾನು ಲಂಡನ್‌ದಲ್ಲಿಯ 'ವೆಸ್ಟ್ ಮಿನ್ಸ್ಟರ್ ಬ್ಯಾಂಕಿ'ನ ಒಂದು ಉಪಕ್ರಮವನ್ನು ನೋಡಿದೆನು. ಅದರ ಅಧ್ಯಯನವನ್ನಾದರೂ ತಕ್ಕಮಟ್ಟಿಗೆ ಮಾಡಿದೆನು. ಬ್ರಿಟನದಲ್ಲಿಯ ಬ್ಯಾಂಕುಗಳ ಪ್ರಸಾರವು ಕ್ರಮಬದ್ಧವಾಗಿ ಬಹಳೇ ಆಗಿರುವದು. ಆ ಸಣ್ಣ ದೇಶದಲ್ಲಿ ೩-೪ ಹೆಸರಾದ ಬ್ಯಾಂಕುಗಳಿವೆ. ಪ್ರತಿಯೊಂದು ಬ್ಯಾಂಕಿನ ೨-೩ ಸಾವಿರ ಶಾಖಾ ಕಚೇರಿಗಳಿವೆ. 'ವೆಸ್ಟ್ ಮಿನ್ಸ್ಟರ್ ಬ್ಯಾಂಕ್' ಅವುಗಳಲ್ಲಿಯ ಒಂದು ಸಂಸ್ಥೆಯಿರುವದು. ಅವುಗಳಲ್ಲಿಯ ಸ್ಪರ್ಧೆಯ ಮೂಲಕ ಖಾತೇದಾರರನ್ನು ಕಾಯ್ದಿಡುವದೊಂದು ಅಪರ ಮಹತ್ವವಾದ ಕಾರ್ಯಭಾಗವಿರುವದು. ಈ ಕಾರ್ಯಭಾಗದ ಒಂದು ಪ್ರಕಾರವೆಂದು ಅವರು ತಮ್ಮ ಖಾತೇದಾರರಿಗೆ ಬ್ಯಾಂಕಿಂಗದ ವಿಷಯಕ್ಕೆ ಶಿಕ್ಷಣವನ್ನಾದರೂ ಕೊಡುವರು.

ಬ್ಯಾಂಕಿಂಗ್ ವಿಷಯಕ್ಕೆ ಸಂಬಂಧಿಸಿವ ಚಿಕ್ಕ ಚಿಕ್ಕ ಪುಸ್ತಕಗಳನ್ನು ಮುದ್ರಿಸಿ ಓದುಗರು ಅವುಗಳನ್ನು ಪಡೆದುಕೊಳ್ಳುವಂತೆ ದಿನದಿನಕ್ಕೆ ಕ್ರಮವಾಗಿ ಪ್ರಕಟನೆಗಳನ್ನು ಹೊರಗೆಡುವುತ್ತಾರೆ.

ನಾವಾದರೂ ಈ ಉಪಕ್ರಮದ ಅನುಕರಣವನ್ನು ಅವಶ್ಯವಾಗಿ ಮಾಡಬೇಕು. ಕೇವಲ ಬ್ಯಾಂಕಿನ ಕಚೇರಿಗಳ ಸಂಖ್ಯೆಯು ಬೆಳೆದರೆ ಸಾಕಾಗದು. ಬ್ಯಾಂಕಿನವರು ತಮ್ಮ ಖಾತೇದಾರರಲ್ಲಿ ಮೇಲಿನ ತರದ ಬೌದ್ಧಿಕ ಜ್ಞಾನಪ್ರಸಾರ ಮಾಡಿದರೆ ಬ್ಯಾಂಕಿನ ಕೀರ್ತಿಯಾದರೂ ಬೆಳೆಯುವದು. ಈ ದೃಷ್ಟಿಯಿಂದ ಪ್ರಸ್ತುತ ಕೈಪಿಡಿಯನ್ನು ವಾಚಕರಿಗೆ ಅರ್ಪಿಸುವೆನು.

ಇದರಲ್ಲಿಯ ವಿಷಯಭಾಗವು ಬ್ಯಾಂಕಿಂಗ್‌ದಲ್ಲಿ ೨೦ ವರ್ಷಗಳ ನನ್ನ ಅನುಭವದ ಸಂಚಯವಿದ್ದು ಅದಕ್ಕೆ ಆಗಾಗ್ಗೆ ಮಾಡಿದ ಅಧ್ಯಯನವಾದರೂ ಕೂಡಿದೆ. ಈ ಸಂದರ್ಭದಲ್ಲಿ **'ಇಂಡಿಯನ್ ಇನ್ಸ್ಟಿಟ್ಯೂಟ ಆಫ್ ಬ್ಯಾಂಕರ್ಸ'** ಜರ್ನಲ್‌ದ ಸಂಚಿಕೆಗಳೂ 'ಕಾಮರ್ಸ' ಅಂಕುಗಳೂ ಸಹಾಯವಾಗಿವೆ. ನನಗೆ ಉತ್ತೇಜನವನ್ನು ಕೊಟ್ಟ ಆಪ್ತರಿಗೂ ಚಿಕ್ಕ ಮಕ್ಕಳಿಗೂ ನಾನು ತುಂಬಾ ಋಣಿಯಿದ್ದೇನೆ. ಕೊನೆಗೆ, ಇದುವರೆಗೆ ಆಗದ ಕಾರ್ಯವನ್ನು ಇಂದು ಪೂರ್ಣಮಾಡುವ ಬುದ್ಧಿಬಲವನ್ನೂ ಮನಃಶಾಂತಿಯನ್ನೂ ದಯಪಾಲಿಸಿದ್ದಕ್ಕೆ ಶ್ರೀಗುರುಗಳನ್ನು ನಮ್ರವಾಗಿ ಸ್ಮರಿಸಿ ನನ್ನ ಆತ್ಮನಿವೇದನವನ್ನು ಮುಗಿಸುವೆನು.

೧೨೮೮, ಶಿವಾಜಿನಗರ
ಪುಣೆ, ೫
ಚಿತ್ರಾ ಪೌರ್ಣಿಮೆ

ಬಿಂದು ರಾಘವೇಂದ್ರರಾವ ಕೆಂಭಾವಿ

---

# ಪ್ರಸ್ತಾವನೆ



'ಬ್ಯಾಂಕಿಂಗ' ವಿಷಯವನ್ನುದ್ದೇಶಿಸಿ ಇಂಗ್ಲೀಷ ಭಾಷೆಯಲ್ಲಿ ಇದುವರೆಗೆ ಎಷ್ಟೋ ಗ್ರಂಥಗಳು ಬರೆಯಲ್ಪಟ್ಟಿವೆ. ಇವು ವಿಶೇಷತಃ ಶಾಲೆ ಕಾಲೇಜುಗಳಲ್ಲಿಯ ವಿದ್ಯಾರ್ಥಿ-ಅಧ್ಯಾಪಕರಿಗೆ ಉಪಯುಕ್ತವಾದವುಗಳು. ಹಾಗೂ ಬ್ಯಾಂಕ ಅಧಿಕಾರಿ ಮತ್ತು ಬ್ಯಾಂಕಿನಲ್ಲಿ ದೈನಂದಿನ ಕೆಲಸ ಮಾಡುವವರಿಗೆ ಉಪಯುಕ್ತವಾದವುಗಳೆಂದು ಹೇಳಬಹುದು. ಈ ಗ್ರಂಥಗಳಲ್ಲಿ ವಿವರಿಸಿದ ವಿಷಯವು ಬ್ಯಾಂಕಿನ ಕಾಯದೆ ಕಾನೂನುಗಳನ್ನು ಹಾಗೂ 'ಬ್ಯಾಂಕಿಂಗ' ಕೈಕೊಂಡು ಮಾಡತಕ್ಕ ಉದ್ಯೋಗಕ್ಕೆ ಸಂಬಂಧಿಸಿದ ನಿಯಮಗಳನ್ನು ಒಳಗೊಂಡಿರುವದರಿಂದ, ಇವುಗಳನ್ನು ಓದಬೇಕೆಂಬ ಇಚ್ಛೆಯೂ ಕೂಡ ಸಾಮಾನ್ಯ ಜನರಲ್ಲಿ ಹುಟ್ಟದೇ ಇರುವದು ಆಶ್ಚರ್ಯವಲ್ಲ. ಅಂಥ ಗ್ರಂಥವನ್ನು ಓದುವದೆಂದರೆ ಒಂದು ಕಾಯದೇ ಪುಸ್ತಕವನ್ನೇ ಓದಿದಂತೆನಿಸಿ, ಓದುಗರಿಗೆ ವ್ಯವಹಾರದಲ್ಲಿ ಬೇಕಾದ ಸಂಗತಿಯನ್ನು ತಿಳಿದುಕೊಳ್ಳಲು ಯಾವ ಬಗೆಯಿಂದಲೂ ಸಾಧ್ಯವಾಗುವದಿಲ್ಲ.

ಬ್ಯಾಂಕುಗಳು ದೇಶದ ಉದ್ಯೋಗಕ್ಷೇತ್ರದಲ್ಲಿ ಮಹತ್ವವಾದ ಸ್ಥಾನವನ್ನು ಪಡೆದಿರುವವು. ಅವುಗಳಲ್ಲಿ ನಡೆಯುವ ವ್ಯವಹಾರಗಳನ್ನರಿತುಕೊಂಡು ಪ್ರತಿಯೊಬ್ಬನು ತನ್ನ ಸ್ವಂತ ವ್ಯವಹಾರವನ್ನು ಬ್ಯಾಂಕಿನ ವ್ಯವಹಾರಕ್ಕೆ ಜೋಡಿಸಿ, ಸುಕರವಾಗಿ ಮಾಡಿಕೊಳ್ಳುವುದು ಅವಶ್ಯವಿದೆ. ದಿನಾಲು ಬ್ಯಾಂಕ ಕಚೇರಿಯಲ್ಲಿ ನಡೆಯುವ ವ್ಯವಹಾರವನ್ನು ತಿಳಿಸಿ ಹೇಳಿ, ಬ್ಯಾಂಕುಗಳು ಮಾಡುತ್ತಿರುವ ಹಾಗು ಅವಶ್ಯವಾಗಿ ಮಾಡಬೇಕಾದ ಕೆಲಸವನ್ನು ಎಲ್ಲರಿಗೂ ತಿಳಿಯುವಂತೆ ವಿಶದಪಡಿಸಿ ಹೇಳುವದೇ ಈ ಚಿಕ್ಕ ಪುಸ್ತಕದ ಮುಖ್ಯವಾದ ಉದ್ದೇಶವಾಗಿರುವದು.

ಕಳೆದ ಎಷ್ಟೋ ವರ್ಷಗಳಿಂದ ಸಮಾಜಘಟನೆಯಲ್ಲಿ '**ಬ್ಯಾಂಕ್**' ವಿಶೇಷವಾದ ಘಟಕವೆಂಬುವದರಲ್ಲಿ ಏನೂ ಸಂದೇಹವಿಲ್ಲ. ಆ ಪ್ರಕಾರ ಅದರ ಉಪಯುಕ್ತತೆಯು ಅನುಭವದಿಂದ ಕಂಡಮಾತಾಗಿದೆ. ಆದರೆ, ಇಷ್ಟರಿಂದಲೇ ಅದರ ಮಹತ್ವವು ಮರ್ಯಾದಿತವಾಗದೆ ಸಮಾಜದಲ್ಲಿ ಎಲ್ಲ ಬಗೆಯ ಉತ್ಕರ್ಷಕ್ಕಾಗಿ, ಮತ್ತು ಉದ್ಯೋಗದ ಬೆಳವಣಿಗೆಗಾಗಿ, ಹಾಗು ದುಡ್ಡಿನ ಸುರಕ್ಷಿತೆಗಾಗಿ, ಬ್ಯಾಂಕ ಇದೊಂದು ಮಹತ್ವವಾದ ಘಟಕವಾಗಿ ಇರುವದೆಂಬ ಭಾವನೆಯು ಎಲ್ಲರಲ್ಲಿ ನೆಲೆಗೊಳ್ಳಬೇಕು. ಅಂದರೆ, ಪ್ರತಿಯೊಬ್ಬನು ತನ್ನ ಸಮಗ್ರ ವ್ಯವಹಾರವನ್ನು ಬ್ಯಾಂಕಿನ ಮುಖಾಂತರವಾಗಿ ಮಾಡುವ ಚಟವನ್ನುಂಟುಮಾಡಿಕೊಳ್ಳಬೇಕು. ಇದಕ್ಕೆಯೇ ಇಂಗ್ಲೀಷ ಭಾಷೆಯಲ್ಲಿ 'Banking habit' ಎಂದೆನ್ನುವರು. ಸ್ವಲ್ಪದರಲ್ಲಿ ಹೇಳಬೇಕಾದರೆ, ಎಲ್ಲ ವ್ಯವಹಾರಗಳು ಹಣದಲ್ಲಿ ಕೇಂದ್ರಿತವಾಗಿರುವಂತೆ, ಎಲ್ಲರ ಹಣವು ಬ್ಯಾಂಕಿನಲ್ಲಿ ಕೇಂದ್ರಿತವಾಗುವದುಚಿತವು. ಮನೆಯಲ್ಲಿ ಬಹಳ ದುಡ್ಡು ಇಡುವದು ಸುರಕ್ಷಿತವಲ್ಲ. ಪ್ರವಾಸದಲ್ಲಿ ಹಣ ಹೇರಿಕೊಂಡು ಅಡ್ಡಾಡುವದು ಸುಲಭವಲ್ಲ. ಪರಊರಿಂದ ಹಣ ತರಿಸಿಕೊಳ್ಳುವದಾಗಲಿ, ಪರಊರಿಗೆ ಹಣ ಕಳಿಸುವದಾಗಲಿ, ಕೊಡತಕ್ಕೊಳ್ಳುವ ವ್ಯವಹಾರವಲ್ಲಯಾಗಲಿ, ಬ್ಯಾಂಕಿನ ಮುಖಾಂತರ ವ್ಯವಹಾರ ಮಾಡುವದೇ ಸುಕರವಾದದ್ದೆಂದು ಎಲ್ಲರಿಗೂ ಈಗ ತಿಳಿದ ಮಾತಾಗಿದೆ.

ಸ್ವಲ್ಪ ಮುಂದುವರಿದು ವಿಚಾರಿಸಿ ನೋಡಲು, ಬ್ಯಾಂಕಿನ ಅಧಿಕಾರಿಯೆಂದರೆ, ಜನಹಿತಕ್ಕಾಗಿ ದುಡಿಯುವ ಮನುಷ್ಯನು. ದುಡ್ಡಿನ ವ್ಯವಹಾರದಲ್ಲಿ ದಕ್ಷನು. ವ್ಯವಹಾರಾಂತರ್ಗತ ಗುಣದೋಷಗಳನ್ನು ಬಲ್ಲವನು. ಆತನ ದೃಷ್ಟಿ ಸೂಕ್ಷ್ಮವಾಗಿದ್ದು ಆತನು ಕೈಕೊಂಡ ಕೆಲಸದಲ್ಲಿ ಅವನಿಗೆ ಪರಿಚಿತವಾದ ಎಷ್ಟೋ ನೂರಾರು ವ್ಯಕ್ತಿಗಳ ವ್ಯವಹಾರದ ಬಗ್ಗೆ ಸಂಪೂರ್ಣ ಜ್ಞಾನವುಳ್ಳವನಾಗಿರುವನು. ಹೀಗಿದ್ದರೂ ಕೂಡ, ಒಬ್ಬನ ವ್ಯವಹಾರದ ಗುಣದೋಷಗಳನ್ನು ಇನ್ನೊಬ್ಬನಿಗೆ ತಿಳಿಯಗೊಡದೆ, ಎಲ್ಲರಿಗೂ ತನ್ನ ಕೈಲಾದ ಮಟ್ಟಿಗೆ ಸಹಾಯ ಮಾಡುವವನಾಗಿರುವನು. ಇಂಥವನಿಂದ ಯೋಗ್ಯ ಸಹಾಯ ಪಡೆಯಬೇಕೆಂಬ ವಿಚಾರವು ಉದ್ಯೋಗಸ್ಥರಲ್ಲಿ

ಉಂಟಾಗದಿರುವದು ವಿಷಾದದ ಸಂಗತಿಯಾಗಿದೆ. ಇದಲ್ಲದೆ, ಆ ಅಧಿಕಾರಿ
ಯಾದರೂ ತನ್ನ ಕಚೇರಿ ಕೆಲಸವನ್ನಷ್ಟೇ ಗಮನಿಸದೆ, ವಿಶಾಲದೃಷ್ಟಿಯಿಂದ
ತನ್ನ ಜ್ಞಾನವನ್ನು ಅವರ ಮುಂದಿಟ್ಟು ಅದನ್ನು ಅವರಿಗೆ ಕೊಡಲು ಸಾಕಷ್ಟು
ಪ್ರಯತ್ನವನ್ನು ನಮ್ಮ ದೇಶದಲ್ಲಿ ಇನ್ನೂ ವರೆಗೆ ಮಾಡಿಲ್ಲೆಂದು ಹೇಳಬಹುದು.
ಅವನು ತನ್ನ ಬ್ಯಾಂಕಿನ ವ್ಯವಹಾರಕ್ಷೇತ್ರದಲ್ಲಿ ಯಾವ ಯಾವ ಬಗೆಯಿಂದ
ಸಹಾಯ ಮಾಡಬಹುದೆಂಬದನ್ನು ಶಕ್ಯವಿದ್ದ ಮಟ್ಟಿಗೆ ಎಲ್ಲರಿಗೂ ತಿಳಿಸಿ
ಹೇಳುವದು ಬ್ಯಾಂಕಿನ ಅಧಿಕಾರಿಗಳ ಕೆಲಸವಾಗಿರುವದು.

ಈ ಕೊರತೆಯನ್ನು ದೂರಗೊಳಿಸುವದಕ್ಕಾಗಿಯೇ ಈ ಕೈಪಿಡಿಯನ್ನು
ಬರೆಯಲುದ್ಯುಕ್ತವಾದುದು. ಪಾಶ್ಚಿಮಾತ್ಯ ದೇಶಗಳಲ್ಲಿಯ ಬ್ಯಾಂಕಿನವರು
ಏಸಾಲು ಬ್ಯಾಂಕಿನ ಬೇರೆ ಬೇರೆ ವಿಷಯಕ್ಕೆ ಸಂಬಂಧಿಸಿದ ಕೆಲವು
ಕೈಪಿಡಿಗಳನ್ನು ಪ್ರಕಟಿಸುತ್ತಲಿರುವರು. ಈ ಕೈಪಿಡಿಯನ್ನಾದರೂ ಎಲ್ಲರಿಗೂ
ವಿಷಯವು ತಿಳಿಯಬೇಕೆಂಬ ಮುಖ್ಯ ಉದ್ದೇಶದಿಂದ ಶಕ್ಯವಿದ್ದ ಮಟ್ಟಿಗೆ
ಅತಿ ಸುಲಭ ಭಾಷೆಯಲ್ಲಿ ಬರೆಯಲಾಗಿದೆ. ಮತ್ತು ಈ ಪುಸ್ತಕವು ಬ್ಯಾಂಕಿನ
ವ್ಯವಹಾರ ಮಾಡುವವರಿಗೂ ಹಾಗು ಮಾಡಬಿಚ್ಛಿಸುವವರಿಗೂ ಸಹಾಯ
ವಾಗಬೇಕೆಂಬುದೇ ನಮ್ಮ ಕೋರಿಕೆ.

— ಲೇಖಕ

# ಅನುಕ್ರಮಣಿಕೆ

●

೪ನೆಯ ಕುಡಿಯು

# ಪಶ್ಚಿಮದ ಪ್ರತಿಭೆ

೧೯೫೧ ಅಗಸ್ಟ ೧೫ಕ್ಕೆ

# ಬ್ಯಾಂಕ್ ವ್ಯವಸಾಯದ ಕೈಪಿಡಿ

## ( A Hand-book on Banking )



## ಭೂಮಿಕೆ

'ಬ್ಯಾಂಕ್' ಮತ್ತು 'ಬ್ಯಾಂಕರ' ಇವೆರಡು ಬಹುತರವಾಗಿ ಕಲಿತ ಎಲ್ಲರಿಗೂ ಪರಿಚಿತವಾದ ಶಬ್ದಗಳು. ಅನೇಕ ವರ್ಷಗಳಿಂದ ಇವು ಪ್ರಚಾರದಲ್ಲಿ ಬಂದಿವೆ. ಆದರೆ, 'ಬ್ಯಾಂಕ' ಇದು ನಮ್ಮ ಇಲ್ಲವೆ ನಮ್ಮ ನೆರೆಹೊರೆಯವರ ದುಡ್ಡು ಕಾಯ್ದಿಡುವ ಸಂಸ್ಥೆಯಷ್ಟೇ ಅಲ್ಲದೆ, ಇದಕ್ಕೆ ಹೊಂದಿಕೇರಿ ಎಷ್ಟೋ ವ್ಯವಹಾರಗಳನ್ನು ಮಾಡಬಲ್ಲದೆಂಬುದನ್ನು ಮಾತ್ರ ಅತಿ ಸ್ವಲ್ಪ ಜನರು ತಿಳಿದಿರುವರು. ಬ್ಯಾಂಕಿನ ಕ್ಷೇತ್ರವು ಇಷ್ಟೊಂದು ವಿಶಾಲವಾಗಿರುವದೆಂಬ ಮಾತು ಕೆಲಮಟ್ಟಿಗೆ ಗೊತ್ತಿದ್ದರೂ ಕೂಡ, ಅದರ ತಕ್ಕ ಉಪಯೋಗವನ್ನು ನಮ್ಮ ವ್ಯವಹಾರದಲ್ಲಿ ಮಾಡಿಕೊಳ್ಳುವ ಜ್ಞಾನವು ಮಾತ್ರ ನಮ್ಮಲ್ಲಿ ಇಲ್ಲ. ಅಷ್ಟೇ ಏಕೆ, 'ಬ್ಯಾಂಕ' ಎಂದರೆ ಹೆದರುವ ಜನರು ಕೂಡ ನಮ್ಮ ಸಮಾಜದಲ್ಲಿ ಇನ್ನೂ ಕಂಡುಬರುವರು. ಈ ಹೆದರಿಕೆಯನ್ನು ಹೋಗಲಾಡಿಸಿ ಇನ್ನೂ ಹೆಚ್ಚಾಗಿ ಬ್ಯಾಂಕಿಂಗ ಚಟವನ್ನು ಹುಟ್ಟಿಸುವದು ಬ್ಯಾಂಕ ಅಧಿಕಾರಿಗಳ ಆದ್ಯ ಕರ್ತವ್ಯವು. ಈ ಅಜ್ಞಾನ ಮತ್ತು ಭಯದ ಮೂಲಕ ಪೇಟೆಯ ವ್ಯವಹಾರವು ಅಡತಿ ಅಂಗಡಿ ಇಲ್ಲವೆ 'ಪೇಡಿ'ಗಳ ಮುಖಾಂತರವಾಗಿ ಇದೂ ವರೆಗೆ ನಡೆದಿರುವದು. ಎಷ್ಟೋ ಬ್ಯಾಂಕುಗಳು ಹುಟ್ಟಿದರೂ ಕೂಡ, ಈ 'ಪೇಡಿ'ಗಳ ಅಸ್ತಿತ್ವವು ನಿರ್ಮೂಲನಾಗಲಿಕ್ಕಿಲ್ಲ. ಕಾರಣ, ಅವುಗಳಿಗೆ ಸಂಬಂಧಿಸಿದ ವ್ಯಕ್ತಿಗಳ ಸಂಬಂಧವು ಬಹಳ ವರ್ಷದ್ದು. ಆದರೆ ಈ ಸಂಸ್ಥೆಗಳು ಕೇವಲ ಅನೇಕ ವರ್ಷಗಳಿಂದ ನಡೆಯುತ್ತ ಬಂದಿದ್ದು, ಅವು ಹೀಗೆಯೇ ಅಮರವಾಗಿ ಉಳಿಯುವವೆಂದು ತಿಳಿಯುವದು ತಪ್ಪು.

ಅವುಗಳಿಗೆ ಸಂಬಂಧಿಸಿದ ವ್ಯಕ್ತಿಗಳಲ್ಲಿ ಒಬ್ಬಿಬ್ಬರ ಜಾಣತನದಿಂದ ನಡೆಯುತ್ತಿರುವ ವ್ಯವಹಾರವು ಅವರ ನಂತರ ಬರುವವರಿಂದ ಹಾಗೆಯೇ ಸಾಗಿಸಲ್ಪಡಬಹುದೆಂದು ನಂಬುವದು ಯೋಗ್ಯವಾಗುವದಿಲ್ಲ. ಇದಲ್ಲದೆ, ಇಂಥ 'ಪೇಢಿ'ಗಳ ವ್ಯವಹಾರಕ್ಕೆ ಕಾಯದೇ ಕಾನೂನಿನ ನಿರ್ಬಂಧವಿರುವದಿಲ್ಲ. ಏನಾದರೊಂದು ಅನಿಷ್ಟ ಪ್ರಸಂಗ ಬಂದಲ್ಲಿ, 'ಪೇಢಿ'ಗಳೂ ಹಾಗೂ ಅವುಗಳ ಕೂಡ ವ್ಯವಹಾರ ಮಾಡುತ್ತಿರುವ ವ್ಯಕ್ತಿಗಳೂ, 'ಪೇಢಿ'ಗಳಲ್ಲಿ ಹಣವಿಟ್ಟವರೂ ತೊಂದರೆಗೆ ಒಳಪಡಬೇಕಾಗುವದು.

ಬ್ಯಾಂಕಿನ ವ್ಯವಹಾರವು ಕಾಯದೇ ಕಾನೂನಿಗೆ ಹೊಂದಿದ್ದು ಬ್ಯಾಂಕಿನ ಘಟನೆಯಾದರೂ ಕಾಯದೆಗೆ ಅನುಸರಿಸಿರುತ್ತದೆ. ಅದರ ಅಧಿಕಾರಿಗಳು ಯಾವುದೇ ಕಾರಣದಿಂದ ಬದಲಾಗುತ್ತಿದ್ದರೂ ಕೂಡ, ಅವರಲ್ಲಿ ನಡೆಯುತಕ್ಕ ವ್ಯವಹಾರಕ್ಕೆ ಯಾವ ರೀತಿಯಿಂದಲೂ ವ್ಯತ್ಯಯು ಬರಲಾರದು. ಈಚೆಗೆ, ಪಾಶ್ಚಿಮಾತ್ಯ ದೇಶಗಳ ಸಂಬಂಧವು ಹೆಚ್ಚುತ್ತ ಹೋಗಿ, ಕೆಲಕಾಲ ಹಿಂದಿನಿಂದ ನಡೆಯುತ್ತಿದ್ದ ಬ್ಯಾಂಕುಗಳೂ ಹಾಗೂ ಹೊಸದಾಗಿ ಹೊರಟ ಮತ್ತು ಹೊರಡುವ ಬ್ಯಾಂಕುಗಳೂ ಹೊಸ ತರದ ಚಟುವಟಿಕೆಗಳನ್ನು ಕೈಕೊಂಡದ್ದು ಕಂಡುಬರಹತ್ತಿವೆ. ಈ ವಿಷಯವನ್ನು ಯೋಗ್ಯ ಸ್ಥಳದಲ್ಲಿ ಮುಂದೆ ವಿವರಿಸುವೆವು.

೧೯೪೩ನೆಯ ಇಸ್ವಿಯ ನಂತರ ನಮ್ಮ ದೇಶದಲ್ಲಿ ಅನೇಕ ಬ್ಯಾಂಕುಗಳು ರಜಿಸ್ಟರ ಮಾಡಲ್ಪಟ್ಟಿರುವವು. ಕೆಲವು ಬ್ಯಾಂಕುಗಳ ವಸೂಲಾದ ಬಂಡವಲವು ( Paid-up Capital ) ಕೋಟಿಗಟ್ಲೆ ರೂಪಾಯಿಯದಿದೆ. ೧೯೦೬ನೆಯ ಇಸ್ವಿಯಲ್ಲಿ ರಜಿಸ್ಟರವಾದ 'ಬ್ಯಾಂಕ ಆಫ್ ಇಂಡಿಯಾ'ದ ವಸೂಲಾದ ರಕಮು ೪೩ ವರ್ಷದ ನಂತರ ಎರಡು ಕೋಟಿಯ ವರೆಗೆ ಮುಟ್ಟಿದಿದ್ದಾಗ, ೧೯೪೩ನೆಯ ಇಸ್ವಿಯಲ್ಲಿ ಹೊರಟ 'ಭಾರತ ಬ್ಯಾಂಕಿ'ನ ವಸೂಲಾದ ಹಣ ಪ್ರಾರಂಭಕ್ಕೆಯೇ ಎರಡು ಕೋಟಿ ರೂಪಾಯಿ ಇದ್ದಿತು. ಅಂದರೆ, ४०–೫೦ ವರ್ಷಗಳಿಂದ ವ್ಯವಹಾರ ಮಾಡುತ್ತಬಂದ ಬ್ಯಾಂಕುಗಳಿಗಿಂತ, ಈ ಕೆಲ ಹೊಸ ಬ್ಯಾಂಕುಗಳ ಬಂಡವಲು ಹೆಚ್ಚಿರುತ್ತದೆ. ಇದಲ್ಲದೆ, ಬ್ಯಾಂಕುಗಳೂ ಅವುಗಳ ಶಾಖೆಗಳೂ ಹೆಚ್ಚುತ್ತ ನಡೆದಿವೆ. ೧೯೪೦ನೆಯ ಇಸ್ವಿಯ ಕೊನೆಗೆ ಮಹತ್ವವಾದ ಬ್ಯಾಂಕುಗಳು ಕೇವಲ

೬೦ ಇದ್ದು ಮತ್ತು ಅವುಗಳ ಶಾಖೆಗಳು ೧೩೫೬. ಇದೇ ವರ್ಷದ ಮಾರ್ಚ ತಿಂಗಳ ಕೊನೆಗೆ ಬ್ಯಾಂಕುಗಳು ೬೩೬ ಮತ್ತು ಶಾಖೆಗಳು ೩೦೨೩ ವರೆಗೆ ಹೆಚ್ಚಾದವು. ಈಗ ಕೆಲವು ಶಹರಗಳಲ್ಲಿ ಎತ್ತ ನೋಡಿದತ್ತ ಬ್ಯಾಂಕಿನ ಕಚೇರಿಗಳು ಕಂಡುಬಂದರೂ ಕೂಡ ನಮ್ಮ ದೇಶದ ಪ್ರಮಾಣಕ್ಕೆ ಸಾಕಷ್ಟು ಇರುವವೆಂದು ಅನ್ನಲಾಗದು. ಇದು ಬೆಳವಣಿಗೆಯು ದ್ಯೋತಕ ಮಾತ್ರ ವಾಗಿದೆ. ಬ್ಯಾಂಕುಗಳಿದ್ದ ಶಹರಗಳಲ್ಲಿಯೇ ಹೆಚ್ಚು ಬ್ಯಾಂಕುಗಳು ಹೊರಟವು. ಸಾಕಷ್ಟು ಶಾಖೆಗಳಿದ್ದ ಶಹರಗಳಲ್ಲಿಯೇ ಶಾಖೆಗಳು ಹೊರಡಿ ಸಲ್ಪಟ್ಟವು. ಬ್ಯಾಂಕಿಂಗದ ತೀರ ಕೊರತೆ ಇದ್ದ ಭಾಗಗಳು ಇನ್ನೂ ಹಾಗೆಯೇ ಉಳಿದಿರುವವು. ಈ ಗೊಂದಲವನ್ನು ನಿಲ್ಲಿಸುವದಕ್ಕೆ ಮಧ್ಯವರ್ತಿ ಸರಕಾರ ದವರು ಕಾಯದೆಯಿಂದ ಬ್ಯಾಂಕುಗಳನ್ನು ಮತ್ತು ಅವುಗಳ ಶಾಖೆಗಳನ್ನು ನಿರ್ಬಂಧಿಸಿದರು.

ಇನ್ನುಮುಂದೆ ಹೊರಡುವ ಬ್ಯಾಂಕುಗಳು ಒಂದು ವಿಶಿಷ್ಟವಾದ ಸಮಾಜಹಿತದ ಧ್ಯೇಯವನ್ನು ಇಟ್ಟುಕೊಂಡು ಅಸ್ತಿತ್ವದಲ್ಲಿ ಬರುವದು ಅವಶ್ಯಕವಾಗಿದೆ. ಈಗ ಕೆಲವು ಶ್ರೀಮಂತರು ಒಟ್ಟಾಗಿ, ತಮ್ಮದೇ ಒಂದು ಗುಂಪು ಮಾಡಿಕೊಂಡು 'ನಮ್ಮದೊಂದು ಬ್ಯಾಂಕು ಇರಲಿ' ಎಂಬ ಈರ್ಷೆಯಿಂದ ಹೊರಡಿಸಿದ ಬ್ಯಾಂಕುಗಳ ಸಂಖ್ಯೆಯೇ ಹೆಚ್ಚಾಗಿರುವದು ಇಂಥ ಪರಿಸ್ಥಿತಿಯಲ್ಲಿ ಹುಟ್ಟಿದವುಗಳು, ಹುಟ್ಟಿದ್ದಕ್ಕೆ ಬಾಳುವೆ ಮಾಡ ಬೇಕೆಂಬದೊಂದೇ ಅವುಗಳ ಧ್ಯೇಯವಾಗಿರುವದು. ಇಂಥ ಬ್ಯಾಂಕುಗಳಿಂದ ಸಮಾಜದ ಹಿತವಾಗಲಿ, ವ್ಯಾಪಾರದ ಏಳ್ಗೆಯಾಗಲಿ ಸಾಧಿಸುವದು ಕಠಿಣವಾದುದು.

ಮೇಲ್ಕಂಡ ಸ್ಪರ್ಧೆಯು ಅತಿರೇಕವಾದದ್ದು ಕಂಡುಬರುವದರಿಂದ, ಕೇವಲ ಇನ್ನೊಬ್ಬರ ಅನುಕರಣ ಮಾಡದೆ, ನಮ್ಮ ಸ್ವತಂತ್ರ ದೇಶದಲ್ಲಿಯ ಉದ್ಯೋಗಾಭಿವೃದ್ಧಿಯನ್ನು ಮತ್ತು ಇನ್ನೂ ಕಾಣಬರುವ ಅನೇಕ ಕೊರತೆ ಗಳನ್ನು ದೂರಮಾಡುವದಕ್ಕಾಗಿ ಇಷ್ಟವಿದ್ದ ಸ್ಥಳಗಳಲ್ಲಿ ಹೊಸ ಬ್ಯಾಂಕು ಸ್ಥಾಪಿಸಲು ದುಡ್ಡಿದ್ದವರು ಅವಶ್ಯವಾಗಿ ಯತ್ನಿಸಬೇಕು. ಅದೇ ಮೇರೆಗೆ, ಈಗಿದ್ದ ಕೆಲ ಸ್ಥಳಗಳಲ್ಲಿ ತೀರ ಅನಾವಶ್ಯಕವಿರುವ ಬ್ಯಾಂಕ ಕಚೇರಿಗಳನ್ನು ಅನ್ಯ ಸ್ಥಳಗಳಿಗೆ ಸ್ಥಳಾಂತರಿಸಲು ಪ್ರಯತ್ನಮಾಡಬೇಕು.

ನಮಗೀಗ ಕಂಡುಬರುವ ಬ್ಯಾಂಕುಗಳು ಮೂರು ಪ್ರಕಾರದ್ದಿರುವವು.

೧. ಅನ್ಯ ರಾಷ್ಟ್ರಗಳಲ್ಲಿ ರಜಿಷ್ಟರವಾದ ಪರದೇಶಿ ಬ್ಯಾಂಕುಗಳು (Exchange Banks).

೨. ನಮ್ಮ ರಾಷ್ಟ್ರದಲ್ಲಿ ರಜಿಷ್ಟರವಾದ ವ್ಯಾಪಾರಿ ಬ್ಯಾಂಕುಗಳು (Joint-Stock Banks).

೩. ನಮ್ಮಲ್ಲಿಯ ಸಹಕಾರಿ ಬ್ಯಾಂಕುಗಳು (Co-operative Banks).

೧. ಪರದೇಶಿ ಬ್ಯಾಂಕುಗಳ ಉದ್ಯೋಗಕ್ಷೇತ್ರವು ಪರದೇಶಗಳಗೂಡ ನಾವು ಮಾಡುತ್ತಿರುವ ವ್ಯವಹಾರಕ್ಕೆ ಸಂಬಂಧಿಸಿದ್ದರೂ ಆ ಬ್ಯಾಂಕಿನವರು ಅಷ್ಟಕ್ಕೇ ತಮ್ಮ ವ್ಯವಹಾರವನ್ನು ಮರ್ಯಾದಿಸದೆ, ನಮ್ಮ ದೇಶದಲ್ಲಿಯ ವ್ಯಾಪಾರಿ ಬ್ಯಾಂಕುಗಳಂತೆಯೇ ವ್ಯವಹಾರವನ್ನು ಮಾಡುತ್ತ ನಮ್ಮ ದೇಶದಲ್ಲಿಯ ಅಂತರ್ಗತ ಬ್ಯಾಂಕಿಂಗದ ಭಾರವನ್ನಾದರೂ ಹೊತ್ತಿರುವರು. ಆದರಿಂದ ದೊರೆಯತಕ್ಕ ಲಾಭವು ನಮ್ಮಲ್ಲಿಯ ವ್ಯಾಪಾರಿ ಬ್ಯಾಂಕುಗಳಿಗೆ ದೊರೆಯದೆ ಪರದೇಶಕ್ಕೆ ಹೋಗುವದು. ಇದನ್ನಾದರೂ ಸಾವಕಾಶವಾಗಿ ನಿರ್ಬಂಧಿಸುವದು ಅವಶ್ಯ.

೨–೩. ಉಳಿದ ಎರಡೂ ತರದ ಬ್ಯಾಂಕುಗಳ ವ್ಯವಹಾರವು ಕಾಣಲಿಕ್ಕೆ ಒಂದೇ ತರದ್ದು ಇದ್ದರೂ ಕೂಡ ಅವುಗಳಿಗೆ ಹೊಂದುವ ಕಾಯದೇ ಕಾನೂನುಗಳು ಭಿನ್ನವಿರುವವು. ಅವುಗಳ ಉದ್ಯೋಗಕ್ಷೇತ್ರದಲ್ಲಿ ಮತ್ತು ವ್ಯವಹಾರದ ದೃಷ್ಟಿಕೋನದಲ್ಲಿ ಭಿನ್ನತ್ವವು ಕಂಡುಬರುವದು. ಇದರ ಬಗ್ಗೆ ಸವಿಸ್ತರ ಚರ್ಚೆಯು ಅವಶ್ಯಕತೆಯಿಲ್ಲ.

ಬ್ಯಾಂಕು ಕೇವಲ ವ್ಯಾಪಾರಸ್ಥರ ಇಲ್ಲವೆ ವ್ಯಾಪಾರಿ ಜನರ ವ್ಯವಹಾರಕ್ಕಷ್ಟೇ ಉಪಯುಕ್ತವಾದದ್ದೆಂದು ತಿಳಿಯಕೂಡದು. ನಾಲ್ಕು ರೂಪಾಯಿ ಬದಿಗಿಡುವ ಜಾಣನೂ, ನಾಲ್ಕಾರು ಲಕ್ಷ ರೂಪಾಯಿ ಇಟ್ಟ ವರ್ತಕನೂ ಬ್ಯಾಂಕಿನ ವ್ಯವಹಾರಕ್ಕೆ ಸಮಾನರೇ. ಎಲ್ಲ ತರದ ರಕಮಿನ ಜಮಾಖರ್ಚು ಒಂದೇ ರೀತಿಯಿಂದ ಒಂದೇ ನೇಮಕ್ಕನುಸರಿಸಿ ಬರೆಯಲ್ಪಡುವದರಲ್ಲಿ ಯಾವ ಸಂದೇಹವು ಇಲ್ಲ.

ಹೊಸದಾಗಿ ಹೊರಟಿರುವ ಬ್ಯಾಂಕುಗಳು ಹೊಸ ಹೊಸ ಚಟುವಟಿಕೆಗಳನ್ನು ಕೈಕೊಂಡಿರುವದು ನಿಜ. ಅವರಿಗೆ ಹೀಗೆ ಮಾಡಲೇಬೇಕಾಗುವದು. ದೇಶದಲ್ಲಿ ಅನೇಕ ವರ್ಷಗಳಿಂದ ವ್ಯವಹಾರ ನಡೆಸುತ್ತ ಬಂದು ತಮ್ಮ ಅಸ್ತಿತ್ವವನ್ನು ಸ್ಥಿರಪಡಿಸಿಕೊಂಡ ಬ್ಯಾಂಕುಗಳ ಸರಿಜೋಡಿಗೆ ಹೊಸ ಬ್ಯಾಂಕುಗಳು ತಮ್ಮ ಬಾಳುವೆಯನ್ನು ಸಾಗಿಸಬೇಕಾದಲ್ಲಿ ಏನಾದರೊಂದು ಹೊಸ ಉಪಕ್ರಮದ ಅವಶ್ಯಕತೆಯಿರುವದು. ಈ ಉಪಕ್ರಮದ ವೈಶಿಷ್ಟ್ಯವನ್ನು ಜನರ ಲಕ್ಷಕ್ಕೆ ತಂದುಕೊಟ್ಟು ಅವರ ಚಿತ್ತವನ್ನು ತಮ್ಮ ಕಡೆಗೆ ಎಳೆದುಕೊಂಡು ಒಮ್ಮೆ ವ್ಯವಹಾರ ಸಂಬಂಧ ಹೂಡಿದ ನಂತರ ಅದನ್ನು ನಾನಾ ಪ್ರಯತ್ನದಿಂದ ಜೋಪಾನ ಮಾಡುವದು ನಮ್ಮ ಹೊಸ ಬ್ಯಾಂಕುಗಳ ಮುಖ್ಯ ಕರ್ತವ್ಯವಾಗಿದೆ. ಹೀಗೆ ಮಾಡದಿದ್ದಲ್ಲಿ, ಬ್ಯಾಂಕು ತಳಊರದೆ ತಗ್ಗಿಹೋಗುವ ಭಯವುಂಟು.

ಸಮಾಜದ ಉನ್ನತಿಗಾಗಿ ಪರಿಸ್ಥಿತಿಯನ್ನನುಲಕ್ಷಿಸಿ ಪ್ರತಿಯೊಬ್ಬನಿಗೆ ತನ್ನ ತನ್ನ ಆರ್ಥಿಕ ಪರಿಸ್ಥಿತಿಯನ್ನು ತಿಳಿಸಿ ಹೇಳಿ, ಅದಕ್ಕನುಸರಿಸಿ ಅವನು ಕೈಕೊಳ್ಳಬಹುದಾದ ಉದ್ಯೋಗಕ್ಷೇತ್ರವನ್ನು ಗೊತ್ತುಮಾಡಿಕೊಡುವದು, ಆ ಉದ್ಯೋಗದಲ್ಲಿ ಹೊಸ ತರದ ದೃಷ್ಟಿಯನ್ನು ತಂದುಕೊಟ್ಟು, ಇದ್ದ ವ್ಯವಹಾರವನ್ನು ಪ್ರಚಲಿತ ರೂಢಿಗನುಸರಿಸಿ, ಅವರವರ ಉದ್ಯೋಗದಲ್ಲಿ ಧುರೀಣರನ್ನಾಗಿ ಮಾಡುವದು ಇವೆಲ್ಲ ನೂತನ ವೈಶಿಷ್ಟ್ಯದ ಮಾರ್ಗದರ್ಶಕವೆಂದು ಹೇಳಬಹುದು. ಮಾತ್ರ ಇದು ಸಾಮಾನ್ಯ ಕೆಲಸವಲ್ಲ, ಮತ್ತು ತೀರ ಸಾಮಾನ್ಯ ಅಧಿಕಾರಿಗಳ ಮಾತಲ್ಲ. ಈ ಕೆಲಸ ಮಾಡಬಲ್ಲ ಅಧಿಕಾರಿಯು ಸರ್ವಜ್ಞನಿಲ್ಲದಿದ್ದರೂ ತನ್ನ ವಿವಿಧ ಅನುಭವದಾಧಾರದ ಮೇರೆಗೆ ಮಾರ್ಗದರ್ಶಿಯಾಗುವ ಯೋಗ್ಯತೆಯುಳ್ಳವನಿರಬೇಕು. ಅಂದರೆ ಅವನಿಂದಾಗುವ ಲಾಭವು ಒಬ್ಬರಿಂದೊಬ್ಬರಿಗೆ ಸಿಗದೆ ಇರಲಾರದು.

ಬ್ಯಾಂಕುಗಳಲ್ಲಿ, ಶ್ರೀಮಂತರ ಹಾಗು ಬಡವರ ಬ್ಯಾಂಕುಗಳೆಂಬ ಭೇದಭಾವವಿಲ್ಲ. ಕೇವಲ ಕೆಲವೇ ದೊಡ್ಡ ದೊಡ್ಡ ಖಾತೆಗಳಿಗಿಂತ ಸಾವಿರಾರು ಚಿಕ್ಕಪುಟ್ಟ ಖಾತೆಗಳಿರುವದೇ ಲೇಸೆಂದೂ, ತುಸು ಖಾತೆಗಳಲ್ಲಿಯ ಲಕ್ಷಾವಧಿ ರೂಪಾಯಿಗಳಿಗಿಂತ ಬಹಳ ಖಾತೆಗಳ ಮಾರ್ಗವಾಗಿ

ಅಷ್ಟೇ ರಕಮು ಇದ್ದರೆ ಒಳಿತೆಂದೂ. ಖಾತೆಗಳಿಗಿಂತ ಖಾತೇದಾರರ ಸಂಖ್ಯೆಯೇ ಮಹತ್ವದ್ದೆಂದೂ, ಬಹುತರವಾಗಿ ಎಲ್ಲ ಬ್ಯಾಂಕುಗಳ ಅಧಿಕಾರಿಗಳ ಮತವಿದೆ.

ಮೇಲಿನ ವಿವೇಚನೆಯಂತೆ, ರಕಮಿನ ಮಾತನ್ನು ಬದಿಗಿಟ್ಟು ಪ್ರತಿಯೊಬ್ಬ ವ್ಯಕ್ತಿಗೆ ತನಗೆ ಯೋಗ್ಯ ಕಂಡ ಬ್ಯಾಂಕಿನ ಮುಖಾಂತರ ವ್ಯವಹಾರ ನಡೆಸಲು ಬರುವದೆಂಬ ಮಾತು ಸಿದ್ಧವಾಗುವದು. ಆದರೆ, ಪ್ರಸಿದ್ಧವಾದ ಕೆಲ ಬ್ಯಾಂಕುಗಳಲ್ಲಿ ಸಣ್ಣ ಖಾತೇದಾರರಿಗೆ ಸಲ್ಲತಕ್ಕ ಮಾರ್ಗದರ್ಶನವು ಸಿಕ್ಕುವದಿಲ್ಲೆಂದು ಕೂಗು ಕೇಳಬರುವದು. ಕೆಲ ಖಾತೇದಾರರು ಬ್ಯಾಂಕಿನ ನಿಯಮಗಳನ್ನು ಚನ್ನಾಗಿ ತಿಳಿದುಕೊಳ್ಳದೆ, ಆಗಾಗ್ಗೆ ಬ್ಯಾಂಕಿಗೆ ಬಂದು, ಅಲ್ಲಿಯ ಕಾರಕೂನರಿಗೆ ಮತ್ತು ಅಧಿಕಾರಿಗಳಿಗೆ ಅವರ ಕೆಲಸದಲ್ಲಿ ವ್ಯತ್ಯಯವನ್ನುಂಟು ಮಾಡುವರಾದ್ದರಿಂದ, ಅವರು ಒಂದು ವೇಳೆ ಬೇಸತ್ತು ಖಾತೇದಾರರ ಕಡೆಗೆ ಲಕ್ಷ್ಯಕೊಡದಂತಾಗುವದರಲ್ಲಿ ವಿಶೇಷ ಏನೂ ಇಲ್ಲ.

ಬ್ಯಾಂಕಿನ ಸಿಸ್ತಿನ ಪ್ರಕಾರ, ಪ್ರತಿ ದಿನದ ಕೆಲಸವು ಸಂಜೆಯೊಳಗಾಗಿ ಮುಗಿಯಲೇಬೇಕಾಗಿದ್ದು, ಈ ತರದ ಅಡ್ಡಿಯಿಂದ ಮುಗಿಯತಕ್ಕ ಕೆಲಸವು ಸರಿಯಾಗಿ ಮುಗಿಯದೇ ಹೋಗುವದು. ಅದಕ್ಕೋಸ್ಕರ ಎಲ್ಲ ಬ್ಯಾಂಕುಗಳಲ್ಲಿ ನಡೆಯುವ ವ್ಯವಹಾರದ ಬಗ್ಗೆ ಖಾತೇದಾರರಿಗೆ ಸಾಕಷ್ಟು ಸಂಗತಿಗಳನ್ನು ತಿಳಿಸಿಕೊಟ್ಟು ಬ್ಯಾಂಕಿನ ಅಧಿಕಾರಿಗಳ ಕೆಲಸಕ್ಕೆ ಸಹಾಯವಾಗಬೇಕೆಂದೇ ಈ ಕೈಪಿಡಿಯನ್ನು ಓದುಗರಿಗೆ ಒಪ್ಪಿಸುತ್ತೇವೆ

೧

# ಬ್ಯಾಂಕಿನಲ್ಲಿಯ ಹಣ

ಈ ವಿಷಯದ ಬಗ್ಗೆ ಚನ್ನಾಗಿ ಜ್ಞಾನವಾಗಲೋಸುಗ, ಮೊದಲು ಬ್ಯಾಂಕಿನಗೂಡ ವ್ಯವಹಾರ ಮಾಡುವವರ ಸಂಬಂಧವನ್ನು ತಿಳಿದುಕೊಳ್ಳ ಬೇಕಾಗುವದು. ಇದು ಕೆಳಗಿನ ವಿವರಣೆಯಿಂದ ಕೂಡಲೆ ತಿಳಿಯುವಂತಿದೆ.

ಬ್ಯಾಂಕು
ಋಣಕೊ ( Debtor )

| ಭಾಗೀದಾರರು | ಠೇವುದಾರರು |
| --- | --- |
| ಧನಕೊ ( Creditors ) | ಧನಕೊ ( Creditors ) |

ಬ್ಯಾಂಕಿನವರು ಮಾಡಬಲ್ಲ ವ್ಯವಹಾರ ಕೇವಲ ಹಣದ ವ್ಯವಹಾರವು. ಬೇರೆ ಯಾವ ವ್ಯವಹಾರವನ್ನೂ ಅವರು ಮಾಡಕೂಡದು. ಇದರ ಹೊರತಾಗಿ, ಇನ್ನುಳಿದ ವ್ಯವಹಾರವನ್ನು ಮಾಡಬೇಕಾದಾಗ, ಹಾಗೆ ಮಾಡುವ ಬಗ್ಗೆ ಅವರು ಪ್ರಕಟಪಡಿಸಿದ ಪತ್ರಿಕೆಯಲ್ಲಿ (Articles of Association) ಸ್ಪಷ್ಟವಾಗಿ ಸಾರಿರಬೇಕಾಗುವದು.

ಈ ಹಣವನ್ನು ಪೂರೈಸುವವರು (ಅ) ಭಾಗೀದಾರರು ಮತ್ತು (ಬ) ಠೇವುದಾರರು. ಭಾಗೀದಾರರು ಪ್ರಾರಂಭದ ಬಂಡವಲಕ್ಕೆ (Paid-up Capital) ಹಣವನ್ನು ಪೂರೈಸಿದವರು. ಅವರಿಗೆ ಪ್ರತಿ ವರ್ಷದ ಕೊನೆಗೆ ಬ್ಯಾಂಕಿಗಾಗುವ ಲಾಭದ ಭಾಗವು ಬಡ್ಡಿ (Dividend) ರೂಪದಿಂದ ಸಿಕ್ಕು

ಹೋಗಿ, ಠೇವುದಾರರಿಗೆ ಅವರು ಆಗಾಗ್ಗೆ ಇಟ್ಟ ಹಣದ ಮೇಲೆ ಬಡ್ಡಿ (Interest) ಕೊಡಲಾಗುವದು. ಬ್ಯಾಂಕ ಈ ಸಂಸ್ಥೆಯು ಕೇವಲ ಒಂದು ಸಾಲಗಾರ ಸಂಸ್ಥೆಯಿರುವದು.

ಇನ್ನು ಬಂಡವಲದ ಮತ್ತು ಖಾತೆಗಳ ವರ್ಗವಾರಿಯ ಬಗ್ಗೆ ವಿಚಾರಿಸುವಾ. ಒಂದು ಬ್ಯಾಂಕಿನ ಆಯವ್ಯಯ ಪತ್ರಿಕೆಯನ್ನು ಪರಿಶೀಲಿಸಿದಲ್ಲಿ (Balance-Sheet), ಬ್ಯಾಂಕಿನ ಕೈಸೇರಿದ ಹಣದ ವಿವರಗಳು ಒಂದೆಡೆಯಲ್ಲಿ ಸಿಕ್ಕುವದು. ಈ ವಿವರಗಳಲ್ಲಿ ಮುಖ್ಯವಾಗಿ :—

೧. ಭಾಗೀದಾರರಿಂದ ವಸೂಲಾದ ಹಣ (Paid-up Capital).
೨. ಕಾದಿಟ್ಟ ಹಣ (Reserve and Contingency Funds).
೩. ಖಾತೇದಾರರು ಇಟ್ಟ ಹಣ (ಠೇವು) (Deposits).
೪. ವಾರ್ಷಿಕ ಇಲ್ಲವೆ ಅರ್ಧವಾರ್ಷಿಕ ಲಾಭ (Profits).

ಇವುಗಳ ವಿವರಣೆಯಿರುವದಲ್ಲದೆ, ಇನ್ನೂ ಇತರ ಜವಾಬ್ದಾರಿಗೆ ಹೊಂದಿದ ಇತರ ಸಂಗತಿಗಳು ಸಮಾವೇಶವಾದದ್ದು ಕಾಡುಬರುವದು.

ಅದರಂತೆ, ಮತ್ತೊಂದೆಡೆಯಲ್ಲಿ, ಈ ಕೈಸೇರಿದ ಹಣದ ಉಪಯೋಗವನ್ನು ತೋರಿಸಿರುವದು. ಅಂದರೆ.—

೧. ವರ್ಷದ ಇಲ್ಲವೆ ಅರ್ಧ ವರ್ಷದ ಕೊನೆಯ ದಿನದಲ್ಲಿ ಕೈಯಲ್ಲಿದ್ದ ರೋಖು ಹಣ (Cash on Hand and at Banks);
೨. ಸರಕಾರಿ ವಿಶ್ವಾಸಪತ್ರಗಳಲ್ಲಿ ತೊಡಕಿಸಿದ ಹಣ (Gilt edged Investments);
೩. ಸಾಲ ಕೊಟ್ಟ ಹಣ (Advances);
೪. ಈ ಅವಧಿಯಲ್ಲಿ ಬ್ಯಾಂಕಿಗೆ ಹಾನಿ ಆಗಿದ್ದರೆ ಅದರ ರಕಮು:

ಇವೇ ಮುಖ್ಯವಾದ ವಿಷಯಗಳು ತೋರಿಸಲ್ಪಟ್ಟಿರುವವು. ಸಾರಾಂಶ—

ಒಟ್ಟು ಹಣ

- ವಸೂಲಾದ ಭಾಗದ ರಕಮು
  - ಮೇಲ್ತರದ ಭಾಗಗಳು (Preference Shares)
  - ಸಾಮಾನ್ಯ ಭಾಗಗಳು (Ordinary Shares)
  - ವಿಕ್ಕ ಭಾಗಗಳು (Deferred Shares)
- ಕಾದಿಟ್ಟ ರಕಮು
- ಲಾಭ
- ಇಡಗಂಟು (ಠೇವು)
  - ಅವಧಿಯ ಇಡಗಂಟು (ಮುದ್ದತಿ ಠೇವು) (Fixed Deposits)
  - ಉಳಿಕೆಯ ಇಡಗಂಟು (ಸೇವಿಂಗ್ಸ ಬ್ಯಾಂಕ ಠೇವು) (Savings Banks Deposits)
  - ಬಳಿಕೆಯ ಇಡಗಂಟು (ಚಾಲತಿ ಠೇವು) (Current Deposits)

ಹಣದ ವಿನಿಯೋಗ



## ಶೇಅರು ಹಣ

೧. ಬ್ಯಾಂಕು ಸ್ಥಾಪನೆಯಾಗುವಾಗ, ಮೊದಲಿನ ಚಾಲಕರು (Promoters) ಹಾಕಿದ ಹಣದಲ್ಲಿ, ನಂತರ ಚಾಲಕರು ಬ್ಯಾಂಕ ರಜಿಸ್ಟರ ಮಾಡಿದ ಬಗ್ಗೆ ಪತ್ರಿಕೆಯನ್ನು ಹೊರಡಿಸುವರು. ಆ ಪತ್ರಿಕೆಯಲ್ಲಿಯ ಹೇಳಿಕೆಯಂತೆ ಇತರ ಜನರು ಭಾಗಗಳನ್ನು ಕೊಂಡ ನಂತರ ಅವರಿಂದ ವಸೂಲ ಮಾಡಿದ ಹಣವನ್ನು ಕೂಡಿಸಿ ಭಾಗದ ರಕಮು ಇಷ್ಟು ಎಂದು ಚಾಲಕರು ಗೊತ್ತುಮಾಡುವರು. ಮೇಲಿನ ಆಕೃತಿಯಲ್ಲಿ ವಿವರಿಸಿದ ಮೇರೆಗೆ, ಸಾಮಾನ್ಯವಾಗಿ ಕಂಪನಿಗಳ ಭಾಗಗಳು ಮೂರು ಪ್ರಕಾರ ಇರುವವು.

೧. ಮೇಲ್ತರದ ಶೇಅರು (Preference Shares)

ಈ ತರದ ಭಾಗಗಳ ಮೇಲೆ ಪ್ರಾರಂಭದಲ್ಲಿ ಗೊತ್ತುಪಡಿಸಿದ ಮೇರೆಗೆ ಬಡ್ಡಿ (Dividend) ಹಂಚಲಾಗುವದು.

೨. ಸಾಮಾನ್ಯ ಶೇಅರು (Ordinary Shares)

೩. ಮಿಕ್ಕ ಶೇಅರು (Deferred Shares)

೨ ಮತ್ತು ೩ ಭಾಗಗಳ ಮೇಲಿಂದ ಬಡ್ಡಿಯನ್ನು ಬ್ಯಾಂಕಿನ ವಾರ್ಷಿಕ ಸಾಮಾನ್ಯ ಸಭೆಯಲ್ಲಿ (General Meeting) ಗೊತ್ತುಮಾಡಿ ನಂತರ ಹಂಚಲಾಗುವದು.

ಈ ವಿವಿಧ ಪ್ರಕಾರದ ಭಾಗಗಳ ವಿಷಯದಲ್ಲಿ ಈಚೆಗೆ ಮಾಡಿದ ಕಾಯಿದೆಯ ಮೇರೆಗೆ ಬ್ಯಾಂಕಿನ ಕಂಪನಿಗಳ ಎಲ್ಲ ಭಾಗಗಳು ಸಾಮಾನ್ಯ (Ordinary) ತರಗತಿಯವೇ ಇರಬೇಕೆಂದು ನಿರ್ಬಂಧ ಹಾಕಲಾಗಿದೆ. ಅಂದರೆ, ಪ್ರತಿಯೊಂದು ಬ್ಯಾಂಕಿನ ಬಂಡವಲವು ಈ ಮೇರೆಗೆ ಇರತಕ್ಕದ್ದು–

(ಅ) ಅಧಿಕೃತ ಬಂಡವಲ (Authorised Capital)
(ಉದಾಹರಣ, ೧ ಕೋಟಿ ರೂಪಾಯಿಯದಿದ್ದರೆ)

(ಬ) ವಸೂಲಿಗೆ ತೆಗೆದ ರಕಮು (Issued Capital)
(ಉದಾಹರಣ, ೫೦ ಲಕ್ಷ ರೂಪಾಯಿ ಇದ್ದು)

(ಕ) ವಸೂಲಾದ ಹಣ (Paid-up Capital)
(ಉದಾಹರಣ, ೨೫ ಲಕ್ಷ ರೂಪಾಯಿ ಇರಬೇಕಾಗುವದು)

ಸಮಗ್ರ ಶೇರ ಬಂಡವಲು ಸಾಮಾನ್ಯ ಭಾಗಗಳ (Ordinary Shares) ರೂಪದಿಂದಲೇ ಇರಬೇಕೆಂದು ನಿರ್ಧರಿಸಲಾಗಿದೆ.

## ಠೇವು

ಈ ವಿಷಯದ ಬಗ್ಗೆ ಇನ್ನು ಮುಂದೆ ಸಂಪೂರ್ಣ ವಿವೇಚನ ಮಾಡುವೆವು.

## ಅವಧಿಯ ಇಡಗಂಟು (ಮುದ್ದತಿ ಠೇವು)

ಈ ಇಡಗಂಟನ್ನು ಸಾಮಾನ್ಯವಾಗಿ ಮೂರು ತಿಂಗಳಿಂದ ಮೂರು ವರ್ಷಗಳ ಅವಧಿಯ ವರೆಗೆ ಸ್ವೀಕರಿಸಲಾಗುವದು. ಗೊತ್ತುಪಡಿಸಿದ ಅವಧಿಯು ಮುಗಿಯುವವರೆಗೆ ಈ ಹಣವನ್ನು ತಿರುಗಿ ಪಡೆಯಲು ಬರುವದಿಲ್ಲ. ಇದರ ಬಡ್ಡೀ ದರವಾದರೂ ಮುಂಚೆಯೇ ಗೊತ್ತುಮಾಡಿದ್ದಿರುವದು. ಈ ಠೇವಿನ ರೂಪದಿಂದ ಬಂದ ಹಣವನ್ನೆಲ್ಲ ಬ್ಯಾಂಕಿನವರು ಖಾತೇದಾರರಿಗೆ ಸಾಲ ಕೊಡುವದರಲ್ಲಿಯಾಗಲಿ, ಇತರ ಉದ್ಯೋಗದಲ್ಲಿ ತೊಡಗಿಸಿಯಾಗಲಿ, ಠೇವಿನ ಮೇಲೆ ಕೊಡತಕ್ಕ ದರಕ್ಕಿಂತ ಹೆಚ್ಚಿನ ದರದ ಬಡ್ಡಿಯನ್ನು ಪಡೆಯುವಂತೆ ಮಾಡಿಕೊಳ್ಳುವರು. ಠೇವಿನ ಅವಧಿಯು ಮುಗಿಯುವ ವರೆಗೆ, ಠೇವುದಾರನಿಗೆ ಹಣ ಪರತು ಸಿಗಲಾರದ್ದರಿಂದ ಈ ತರದ ಠೇವಿನಲ್ಲಿಡತಕ್ಕ ರಕಮನ್ನು ಖಾತೇದಾರರು ಪೂರ್ಣ ವಿಚಾರ ಮಾಡಿ ಇಡಬೇಕು.

ನಾವು ಮೇಲಿನ ಭಾಗದಲ್ಲಿ ವಿವರಿಸಿದ ಮೂರು ತರದ ಠೇವುಗಳಿಗೆ ಬ್ಯಾಂಕಿನವರು ಕೆಲವು ನಿಯಮಗಳನ್ನು ಹಾಕಿರುವರು. ಅವಧಿಯ ಇಡಗಂಟಿನ (ಮುದ್ದತಿ ಠೇವು) ಅವಧಿ ಮುಗಿಯುವ ಪೂರ್ವದಲ್ಲಿ ಅದರ ರಕಮು ಸಿಗಲಾರದೆಂದು ಈ ಠೇವಿನ ಬಗ್ಗೆ ನಿಯಮವಿರುವದು. ನಾವು ಹಣವನ್ನು ಈ ಪ್ರಕಾರ ಇಡಬೇಕಾದಲ್ಲಿ, ನಮಗೆ ಅದು ಇಂತಿಷ್ಟು ತಿಂಗಳ ವರೆಗೆಯಾಗಲಿ, ಇಂತಿಷ್ಟು ವರ್ಷದೊಳಗೆಯಾಗಲಿ ಸಿಗದೆಂದು ತಿಳಿದು, ಠೇವಿನ ಅವಧಿಯು ಮುಗಿಯುವ ವರೆಗೆ ಅದರ ಹಣವನ್ನು ಬೇಡಬಾರದು. ಆದರೆ, ಠೇವುದಾರರು ಬ್ಯಾಂಕಿಗೆ ಆಗಾಗ್ಗೆ ಬಂದು 'ನಾವು ಬಡ್ಡಿ ಬೇಡುವದಿಲ್ಲ. ಬಡ್ಡಿಯನ್ನು ಬಿಟ್ಟುಕೊಡುವೆವು. ನಮ್ಮ ಮೂಲ ಹಣವನ್ನು ಕೊಟ್ಟುಬಿಡಿ. ನಮಗೆ ಅದರ ಅವಶ್ಯಕತೆಯು ಈಗ ಬಹಳೇ ಉಂಟು' ಎಂದು ಆಗ್ರಹದಿಂದ

ಬೇಡಿಕೊಳ್ಳುವರು. ಒಂದು ಸಲ ಕರಾರು ಮಾಡಿಟ್ಟ ಹಣವನ್ನು ನಾವೇ ಒಮ್ಮೆಲೇ ಬೇಡುತ್ತ ಹೋದರೆ ವ್ಯವಹಾರವು ಶಿಥಿಲವಾಗುವದು. ನಾವು ಆ ಅವಧಿ ಮುಗಿಯುವ ವರೆಗೆ ತಾಳಬೇಕು. ಬ್ಯಾಂಕಿನವರು ನಮಗೆ ಬೇಕಾದ ಹಾಗೆ, ಬೇಡಿಕೊಂಡಾಗ ಉಪಯೋಗ ಬೀಳುವರೆಂಬ ಭಾವನೆಯಿಂದ ತಂದಂತಾಗುವದು.

ಒಂದೊಂದು ಸಲ, ಕೆಲವೊಂದು ಗಲಭೆಯ ಮೂಲಕವಾಗಲಿ, ಅಥವಾ ನಿರಾಧಾರ ಹಾರಿಕೆಯ ಸುದ್ದಿಯಿಂದಾಗಲಿ, ಅವಧಿಯ ಠೇವುದಾರರು ತಮ್ಮ ಹಣವೆಲ್ಲಿ ಮುಳುಗುವದೋ ಎಂದು ಭೀತಿಗೊಂಡು, ಎಲ್ಲರೂ ಒಮ್ಮೆಲೇ ತಮ್ಮ ಹಣವನ್ನೆಲ್ಲ ಬಡ್ಡೀ ಬಿಟ್ಟುಕೊಟ್ಟು ಪರತು ಬೇಡಲು ಬರುವ ಒಂದು ಸಮಯವು ಉಂಟು. ಬ್ಯಾಂಕಿನಲ್ಲಿ ವಿಶ್ವಾಸವಿದ್ದ ಮೂಲಕವಾಗಿ ವರ್ಷೆರಡು ವರ್ಷ ಅವಧಿಯ ವರೆಗೆ ನಾವು ಹಣವನ್ನು ಇಟ್ಟಲ್ಲಿ, ಒಮ್ಮೆಲೇ ಹೌಹಾರಿದವರಾಗಿ ಹಣವನ್ನು ತಿರುಗಿ ಬೇಡುವ ಉಪಕ್ರಮವೂ ಮತ್ತು ನಾವು ಬೇಡಿದಂತೆ ಬ್ಯಾಂಕಿನವರು ಅದನ್ನು ಕೊಡಲು ಯತ್ನಿಸುವ ಉಪಕ್ರಮವೂ ಘಾತಕವಾದವುಗಳು. ಇದರಿಂದ ತಡವಿಲ್ಲದೆ ಬ್ಯಾಂಕಿನವರೂ ಅವರ ಜೊತೆಗೆ ಠೇವುದಾರರೂ ಅನವಸ್ಥೆಯಿಂದ ಪೇಚಾಡುವ ಸಂಭವವುಂಟು. ಮುದ್ದತಿ ಠೇವು ಇಟ್ಟವರ ಗತಿ ಹೀಗಾದರೆ, ಹಣ ತೆಗೆಯಲಿಕ್ಕೆ ಸುಕರವಾದ ಸೇವ್ಹಿಂಗ್ ಬ್ಯಾಂಕ್, ಮತ್ತು ಬಳಿಕೆ (ಚಾಲತಿ) ಠೇವುದಾರರು (Current a/c. holders) ಈ ದುರ್ಧರ ಪ್ರಸಂಗವನ್ನು ಇನ್ನೂ ಹೆಚ್ಚು ಮಾಡಿಬಿಡುವರು. ಇಂಥ ಪ್ರಸಂಗದಲ್ಲಿ, ಬ್ಯಾಂಕಿನವರು ತಮ್ಮ ಸಾಲಗಾರರಿಗೆ ಸಾಲ ಕೊಟ್ಟ ಹಣವನ್ನು ತಿರುಗಿ ಬೇಡಿದಾಗ ಮಾತ್ರ, ಅದು ನಿಶ್ಚಿತವಾಗಿ ಬರುವದಿಲ್ಲ. ಪ್ರತಿಯೊಂದು ಬ್ಯಾಂಕಿಗೆ ಈ ಅನವಸ್ಥಾ ಪರಿಸ್ಥಿತಿಯು ಒಂದೆರಡು ಸಲವಾದರೂ ಬಂದೇ ಬರುವದು. ಇದನ್ನೆಲ್ಲ ಪೂರ್ಣ ವಿಚಾರ ಮಾಡಿಯೇ ಠೇವುದಾರರು ತಮ್ಮ ಬ್ಯಾಂಕಿನ ಪರೀಕ್ಷೆ ಮಾಡಿದ ನಂತರ ತಮ್ಮ ವ್ಯವಹಾರವನ್ನು ಸಾಗಿಸಬೇಕು ಮತ್ತು ತಮ್ಮ ಬ್ಯಾಂಕಿನಲ್ಲಿ ವಿಶ್ವಾಸವಿಟ್ಟು ವ್ಯವಹಾರವನ್ನು ಸಾಗಿಸಬೇಕು. ಆದ್ದರಿಂದ, ಸುಳ್ಳು ಸುದ್ದಿಗೆ ಆಸ್ಪದ ಕೊಡತಕ್ಕದ್ದಲ್ಲ. ಒಮ್ಮೆ ವಿಶ್ವಾಸಕ್ಕೆ ಪಾತ್ರವಾದ ಸಂಸ್ಥೆಯನ್ನು ನಾವಾಗಿಯೇ ಸಂಕಟದಲ್ಲಿ ಹಾಕಬಾರದು.

ಈ ಸಂದರ್ಭದಲ್ಲಿ, ನಾವು ಎರಡು ಮುಖ್ಯ ಸಂಗತಿಗಳನ್ನು ಮರೆಯ ಕೂಡದು.

(೧) ನಮ್ಮ ಬ್ಯಾಂಕಿನವರ ಕೈಸೇರಿದ ಹಣವು ಸಾಲದ ರೂಪದಿಂದ ಕೆಲಭಾಗವನ್ನು ತೊಡಕಿಸಲಾದದ್ದಿರುವದು. (೨) ಎಲ್ಲ ಬ್ಯಾಂಕಿನವರ ಮೇಲೆ ದೇಶದಲ್ಲಿಯ ಮಧ್ಯವರ್ತಿ ಬ್ಯಾಂಕಿನವರು (Reserve Bank of India) ನಿಯಮಿಸಿದ ಮೇರೆಗೆ ವ್ಯವಹಾರ ಮಾಡಬೇಕೆಂದು ಆದೇಶವಿರುವದು ಮತ್ತು ಹಾಗೆ ನಡೆದ ಬಗ್ಗೆ ಮಧ್ಯವರ್ತಿ ಬ್ಯಾಂಕಿಗೆ ನಿಯಮಿತವಾಗಿ ವರದಿಗಳನ್ನು ಕೊಡಬೇಕಾಗುವದು. ಇಷ್ಟೊಂದು ಸಂರಕ್ಷಣ ರೂಪದ ಕಾಯದೇ ಕಾನೂನಿನ ನಿರ್ಬಂಧವಿದ್ದದರಿಂದ ಕಾರಣವಿಲ್ಲದೆ ಯಾರೂ ಬೆದರುವ ಅವಶ್ಯಕತೆಯಿಲ್ಲ.

ಆದರೆ, ಒಂದೊಂದು ವೇಳೆ ಠೇವುದಾರರಿಗೆ ಠೇವಿನ ಹಣದ ಕೆಲ ಭಾಗವು ಅತಿ ಅವಶ್ಯವಾಗಿ ಬೇಕಾಗಿದ್ದಲ್ಲಿ, ಅವರು ತಮಗೆ ಬ್ಯಾಂಕಿನವರು ಕೊಟ್ಟ ಅವಧಿ (ಮುದ್ದತಿ) ಠೇವಿನ ಪಾವತಿಯನ್ನು ಸಹಿ ಮಾಡಿ ಬ್ಯಾಂಕಿನವರಿಗೆ ಕೊಟ್ಟರೆ, ಸಾಲದ ರೂಪವಾಗಿ ಸಾಕಷ್ಟು ಹಣವನ್ನು ಪಡೆಯಬಹುದು. ಮಾತ್ರ, ಯಾವ ಬಾಂಕಿನಲ್ಲಿ ಠೇವು ಇರುವದೋ, ಅದೇ ಬ್ಯಾಂಕಿನವರು ಈ ತರದ ಸಾಲವನ್ನು ಕೊಡುವರು. ಬೇರೊಂದು ಬ್ಯಾಂಕಿನವರು ಕೊಡುವದಿಲ್ಲ. ಮತ್ತು ಸಾಲ ಕೊಟ್ಟ ಹಣದ ಬಡ್ಡಿಯ ದರವು ಇತರ ಸಾಲದ ದರದಂತೆ ವಸೂಲ ಮಾಡಲಾಗುವದು.

**ಅವಧಿಯ ಇಡಗಂಟಿನ (ಮುದ್ದತಿ) ಖಾತೆಯ ಸ್ವರೂಪ:—** ಅವಧಿಯ ಠೇವನ್ನು ಇಡಬೇಕಾದರೆ, ಬ್ಯಾಂಕಿನವರಿಗೆ ಆ ಪ್ರಕಾರ ಅರ್ಜಿ ಮಾಡಬೇಕಾಗುವದು. ಅದರಲ್ಲಿ ಠೇವುದಾರರ ಹೆಸರು, ಅವರ ಸಹಿಯ ನಮೂನೆಗಳನ್ನು ಕೊಡಬೇಕಾಗುವದು. ಸಹಿ ಮಾಡಲಾರದವರು, ತಮ್ಮ ಹೆಬ್ಬಟ್ಟಿನ ಗುರುತನ್ನು ಅರ್ಜಿಯ ಮೇಲೆ ಹಾಕಬೇಕು. ಪ್ರಸಂಗಾನುಸಾರ, ಬ್ಯಾಂಕಿನವರಿಗೆ ಬೇಕಾದ ಇತರ ನಿಯಮಗಳನ್ನು ಪಾಲಿಸಬೇಕು, ನಂತರ ಹಣವನ್ನು ಸ್ವೀಕರಿಸಿ, ಬ್ಯಾಂಕಿನವರು ಠೇವುದಾರರಿಗೆ ಹಣ ಮುಟ್ಟಿದ ಬಗ್ಗೆ

ಪಾವತಿ ಕೊಡುವರು. ಆ ಪಾವತಿಯಲ್ಲಿ ಇಟ್ಟ ಹಣದ ರಕಮು, ಬಡ್ಡೀ ದರ, ಮುದ್ದತು ಮುಗಿಯುವ ತಾರೀಖಿನ ತಪಶೀಲು, ಠೇವುದಾರನ ಹೆಸರು ಮುಂತಾದ ವಿಷಯಗಳ ನಿರೂಪಣೆ ಇರುವವು. ಠೇವುದಾರರು ಈ ಪಾವತಿಯನ್ನು ದಕ್ಷತೆಯಿಂದ ಕಾಯ್ದಿಡಬೇಕು. ಅದು ಕಳೆದರೆ, ಅದರ ನಕಲು ದೊರಕಿಸುವದಕ್ಕಾಗಿ ಬಹಳ ತೊಂದರೆಯಾಗುವದು. ಕಳೆದು ಹೋದ ಪಾವತಿಯಗೋಸುಗ, ಠೇವುದಾರರು ತಮ್ಮ ಖರ್ಚಿನಿಂದ ವೃತ್ತಪತ್ರಗಳಲ್ಲಿ ಬ್ಯಾಂಕಿನವರು ಸೂಚಿಸಿದ ಪ್ರಕಾರ ಒಂದು ತಿಂಗಳಿನ ನೋಟೀಸು ಕೊಡಬೇಕಾಗುವದು. ಆ ನಂತರ ಎರಡನೆಯ ಪಾವತಿ ದೊರಕಿಸುವದಕ್ಕಾಗಿ, ಬ್ಯಾಂಕಿನವರು ಜಾಮೀನಪತ್ರವನ್ನಾದರೂ ಬೇಡುವರು. ಈ ಜಾಮೀನಪತ್ರವಲ್ಲಿ ಕಳೆದುಹೋದ ಪಾವತಿಯ ಪೂರ್ಣ ತಪಶೀಲು ಬರೆದು, ಅದು ತಿರುಗಿ ಸಿಕ್ಕ ಕೂಡಲೆ ಪರತು ಮಾಡುವ ಬಗ್ಗೆ ಒಪ್ಪಿಕೊಂಡು ಮತ್ತು ಯಾವದೇ ಕಾರಣದ ಮೂಲಕ ಅದರ ದುರುಪಯೋಗವಾದದ್ದು ಕಂಡಲ್ಲಿ ಆದರಿಂದ ಬ್ಯಾಂಕಿಗಾಗಬಹುದಾದ ಹಾನಿಯನ್ನು ಠೇವುದಾರರು ತುಂಬಿಕೊಡಲು ಬರೆದುಕೊಡಬೇಕಾಗುವದು. ಬ್ಯಾಂಕಿನವರು ತಮ್ಮ ವ್ಯವಹಾರದಲ್ಲಿ ನಿತ್ಯದಂತೆ ಆದಷ್ಟುಮಟ್ಟಿಗೆ ಜಾಗರೂಕತೆಯಿಂದ ಕೆಲಸ ಮಾಡುವರು. ಕಳೆದುಹೋದ ಪಾವತಿಯು ಅನ್ಯರ ಕೈಸೇರಿದರೆ, ಅವರು ಅದರ ಮೇಲೆ ಸುಳ್ಳು ಸಹಿ ಮಾಡಿ, ಬ್ಯಾಂಕಿನವರ ಕಣ್ಣು ತಪ್ಪಿಸಿ, ಮೋಸಗೊಳಿಸಿ ಪಾವತಿಯ ಹಣವನ್ನು ಪಡೆಯಬಹುದು. ಆದ್ದರಿಂದ ಪಾವತಿಯನ್ನು ಜಪ್ಪಿಸಿಡಬೇಕು. ಮತ್ತು ಮುದ್ದತಿ ತಾರೀಖನ್ನಾದರೂ ಧ್ಯಾನದಲ್ಲಿಡಬೇಕು. ಪಾವತಿಯು ಕಳೆದದ್ದು ಕಂಡಕೂಡಲೇ ಬ್ಯಾಂಕಿನವರಿಗೆ ತಿಳಿಸಿದರೆ, ಅವರು ತಮ್ಮ ಬುಕ್ಕಿನಲ್ಲಿ ಯೋಗ್ಯ ಟಿಪ್ಪಣಿ ಮಾಡಿಟ್ಟು, ಎರಡನೆಯ ಪಾವತಿ ದೊರಕಿಸಿ ಕೊಡುವ ಬಗ್ಗೆ ತಕ್ಕಮಟ್ಟಿಗೆ ಸಹಾಯ ಮಾಡುವರು. ಠೇವಿನ ಮುದ್ದತು ಮುಗಿಯುವ ದಿನ, ಠೇವುದಾರರು ಪಾವತಿಯನ್ನು ಸಂಗಡ ತಂದು ಬಡ್ಡೀ ಸಹಿತ ಹಣವನ್ನು ತೆಗೆದುಕೊಳ್ಳಬೇಕು. ತಮ್ಮ ಹತ್ತರಿದ್ದ ಪಾವತಿಯ ಮೇಲೆ ಕೊನೆಯ ತಾರೀಖಿನ ವರೆಗೆ ಸಹಿ ಮಾಡಬಾರದು. ಮೊದಲೇ ಸಹಿ ಮಾಡಿಟ್ಟ ಪಾವತಿಯು ಕಳುವಾದರೆ ಹಣ ದೊರಕಿಸಲು ಕಳ್ಳರಿಗೆ ಮತ್ತಷ್ಟು ಸುಲಭವಾಗುವದು. ಆದಷ್ಟು ಮಟ್ಟಿಗೆ ಅವಧಿಯು

ಠೇವಿನ ಹಣವನ್ನು ಠೇವುದಾರರೇ ಪ್ರತ್ಯಕ್ಷ ತಾವೇ ಬ್ಯಾಂಕಿಗೆ ಹೋಗಿ ಪಡೆಯಬೇಕು. ಹೆಣ್ಣುಮಕ್ಕಳು ಇಲ್ಲವೆ ಹೆಬ್ಬೆಟ್ಟಿನ ಗುರುತು ಹಾಕುವವರೂ ಸ್ವತಃ ಹಣವನ್ನು ದೊರಕಿಸಬೇಕು.

ಅವಧಿಯ ಠೇವು ಒಬ್ಬರ ಹೆಸರಿನಿಂದಲೇ ಇಟ್ಟರೆ, ಮತ್ತು ಮುದ್ದತು ಮುಗಿಯುವ ಪೂರ್ವದಲ್ಲಿ ಆ ವ್ಯಕ್ತಿಯು ಮರಣ ಹೊಂದಿದರೆ ಹಣವನ್ನು ದೊರಕಿಸಲಿಕ್ಕೆ ತೊಂದರೆಯಾಗುವದು. ಕಾರಣ, ಕೋರ್ಟಿನ ಅಪ್ಪಣೆಯ ಹೊರತು ಬ್ಯಾಂಕಿನವರು ಹಣವನ್ನು ತಿರುಗಿ ಕೊಡಲಾರರು. ಆದ್ದರಿಂದ, ಶಕ್ಯವಿದ್ದಲ್ಲಿ ಮುದ್ದತೀ ಠೇವಿನ ಹಣವನ್ನು ಒಬ್ಬರಕ್ಕಿಂತ ಇಬ್ಬರ ಅಥವಾ ಮೂರು ಜನರ ಹೆಸರು ಹಾಕಿ ಇಡಬೇಕು. ಮತ್ತು ಅರ್ಜಿಯಲ್ಲಿ ಹಣ ಇಡುವ ಕಾಲಕ್ಕೆ ಎಲ್ಲರೂ ಜೀವಂತವಿರುವ ವರೆಗೆ ಎಲ್ಲರೂ ಸಹಿ ಮಾಡಿದಾಗ, ಅವರಲ್ಲಿ ಒಬ್ಬರು ಮೃತಪಟ್ಟರೆ, ಉಳಿದವರಿಬ್ಬರೂ ಸಹಿ ಮಾಡಿದಾಗ, ಇಬ್ಬರು ಮೃತಪಟ್ಟರೆ, ಕೊನೆಗೆ ಉಳಿದವನೊಬ್ಬನಿಗೆ ಹಣ ಕೊಡಬೇಕೆಂದು ಏರ್ಪಡಿಸುವದು ಅತ್ಯುತ್ತಮ ಮಾರ್ಗವು. ಎಷ್ಟೋ ಸಲ, ಠೇವುದಾರರು ಇಬ್ಬರ ಹೆಸರು ಹಾಕಿ, ಇಬ್ಬರೂ ಸಹಿ ಮಾಡದ ಹೊರತು ಠೇವಿನ ಹಣವನ್ನು ಕೊಡಬಾರದೆಂದು ಸೂಚನೆ ಮಾಡುವ ರೂಢಿಯುಂಟು. ಈ ಉಪಕ್ರಮವು, ಠೇವುದಾರರಲ್ಲಿ ಅವಿಶ್ವಾಸವಿದ್ದುದು ಕಂಡುಬರುವದು ಮತ್ತು ಅವರಿಬ್ಬರಲ್ಲಿ ಒಬ್ಬರು ಮೃತಪಟ್ಟರೆ ಹಣವನ್ನು ದೊರಕಿಸುವದು ಉಳಿದವನಿಗೆ ಕಷ್ಟವಾಗುವದು. ಈ ಪ್ರಸಂಗದಲ್ಲಿ, ಠೇವು ಇಡುವಾಗ ಇಬ್ಬರೂ ಜೀವಂತರಿದ್ದರೆ ಇಬ್ಬರ ಸಹಿಯಿಂದ ವ್ಯವಹಾರವಾಗಬೇಕೆಂದೂ ಮತ್ತು ಒಬ್ಬರು ಮರಣ ಹೊಂದಿದಾಗ ಉಳಿದವರಿಗೆ ಹಣ ಮುಟ್ಟಬೇಕೆಂದೂ ಬರೆದಿಟ್ಟರೆ ಸಾಕಾಗುವಂತಿದೆ.

ಅರ್ಜಿಯ ಸಂಗಡ ಠೇವುದಾರರು ಬ್ಯಾಂಕಿನವರಿಗೆ ಒಪ್ಪಿಸಿದ ತಮ್ಮ ಸಹಿಗಳ ನಮೂನೆಗಳನ್ನು ತಮ್ಮ ಹತ್ತರ ಇಟ್ಟುಕೊಳ್ಳಬೇಕು. ಸಹಿಗಳು ಯಾವಾಗಲೂ ಓದಲಿಕ್ಕೂ ಬರೆಯಲಿಕ್ಕೂ ಸುಲಭವಾಗುವಂತೆ ಇರಬೇಕು. ಸಹಿಗಳ ಬಗ್ಗೆ ಸವಿಸ್ತರ ವಿವೇಚನೆಯನ್ನು ನಾವು ಬಳಿಕ ಖಾತೆಯ ಸಂದರ್ಭದಲ್ಲಿ ಮಾಡುವೆವು.

ಠೇವುದಾರರ ಹಣದ ಸುರಕ್ಷಿತೆಯಗೋಸುಗ ಮತ್ತು ಹಣವನ್ನು ಇಡಲಿಕ್ಕೆ ಮತ್ತು ಪರತು ದೊರಕಿಸಲಿಕ್ಕೆ ಸುಲಭವಾಗಬೇಕೆಂಬುದೇ ಇವೆಲ್ಲ ನಿರ್ಬಂಧಗಳ ಮೂಲ ಉದ್ದಿಷ್ಟ. ಅವಧಿಯ ಇಡಗಂಟಿನಲ್ಲಿ ಇಟ್ಟ ಹಣವನ್ನು ಬ್ಯಾಂಕಿನವರು ಹೆಚ್ಚಿನ ಬಡ್ಡಿಯ ದರದಿಂದ ಕೊಂದರೆಯಿಲ್ಲದೆ ಬೇರೆ ವ್ಯವಹಾರದಲ್ಲಿ ತೊಡಗಿಸಬಹುದಾದ್ದರಿಂದ ಈ ಇಡಗಂಟಿಗೆ ಮೂರೂ ತರದ ಇಡಗಂಟುಗಳಿಗಿಂತ ಹೆಚ್ಚು ಬಡ್ಡಿಯನ್ನು ಕೊಡುವರು. ಈಗ ಚಾಲೂ ಬಡ್ಡಿ ದರ ದೊಡ್ಡ ಬ್ಯಾಂಕಿನವರು ೧೦೦ಕ್ಕೆ ವರ್ಷಕ್ಕೆ ರೂ. ೧-೧೨-೦ ಯಿಂದ ರೂ. ೨ ವರೆಗೆ ಕೊಡುವರು. ಮಿಕ್ಕ ಬ್ಯಾಂಕಿನವರು ೨⅓ ದಿಂದ ರೂ. ೨-೧೨-೦ ಯ ವರೆಗೆ ಕೊಡುವರು. ೧೯೩೧-೩೨ರಲ್ಲಿ ಹಣದ ಕೊರತೆ ಬಹಳವಿದ್ದುದರಿಂದ ದೊಡ್ಡ ಬ್ಯಾಂಕಿನವರಾದರೂ ಮೂರು ಮತ್ತು ಆರು ತಿಂಗಳುಗಳ ಇಡಗಂಟುಗಳ ಮೇಲೆ ರೂ. ೬ ರಿಂದ ೭ ರ ವರೆಗೆ ಬಡ್ಡಿ ಕೊಡುತ್ತಿದ್ದರು. ಈಗ ಬ್ಯಾಂಕುಗಳಲ್ಲಿ ಬಹಳ ಹಣ ಶಿಲಕು ಇರುವ ಮೂಲಕ, ಮತ್ತು ಉದ್ಯೋಗಕ್ಕಾಗಿ ಹಣವನ್ನು ಜನರು ಬೇಡದೆ ಇರುವ ಮೂಲಕ, ಇಡಗಂಟುಗಳ ಬಡ್ಡಿ ದರವು ಕಡಿಮೆಯಾಗಿದೆ.

**ಉಳಿಕೆಯ ಬ್ಯಾಂಕಿನ ಇಡಗಂಟು** (ಸೇವ್ಹಿಂಗ್ಸ ಬ್ಯಾಂಕ ಠೇವು)

ಬಹುಜನರಿಗೆ ಪರಿಚಯವಿರುವ ಖಾತೆಯೆಂದರೆ ಉಳಿಕೆಯ ಬ್ಯಾಂಕ ಖಾತೆಯೇ. ಏಕೆಂದರೆ ಅವಧಿಯ ಇಡಗಂಟನ್ನು ಇಡುವಷ್ಟು ಹಣದ ಸಂಗ್ರಹದ ಅಭಾವದ ಮೂಲಕ ಮತ್ತು ಬಳಿಕೆಯ ಇಡಗಂಟಿನಲ್ಲಿ ಇಡಲು ಸಾಕಷ್ಟು ಹಣವಿಲ್ಲದ್ದರಿಂದ ಸಾಮಾನ್ಯ ಜನರಿಗೆ ಉಳಿಕೆಯ ಖಾತೆಯೇ ಹೆಚ್ಚು ಉಪಯುಕ್ತವು. ಬ್ಯಾಂಕುಗಳ ನಿಯಮಗಳಾದರೂ ಈ ಖಾತೆಯನ್ನಿಡಲು ಹೆಚ್ಚು ಅನುಕೂಲವಾಗಿವೆ. ಹತ್ತಿಪ್ಪತ್ತು ರೂಪಾಯಿಗಳನ್ನು ಉಳಿಸುವ ಸಾಮಾನ್ಯ ವ್ಯಕ್ತಿಯೂ ಈ ಖಾತೆಯನ್ನು ಇಡಬಹುದು.

ಎಲ್ಲ ಖಾತೆಗಳಿದ್ದಂತೆ, ಈ ಖಾತೆಯನ್ನು ಪ್ರಾರಂಭಿಸುವಾಗಲೂ ಅರ್ಜಿ ತುಂಬಿ ಕೊಡಬೇಕು. ಮತ್ತು ಅದರ ನಿಯಮಗಳನ್ನು ತಿಳಿದುಕೊಳ್ಳಬೇಕು. ಖಾತೆಯನ್ನು ಪ್ರಾರಂಭಿಸಿದ ಕೂಡಲೆ ಬ್ಯಾಂಕಿನವರು ಒಂದು ಖಾತೆಯ ವಹಿಯನ್ನು ಕೊಡುವರು. ಖಾತೆದಾರರು ಹಣವಿಡುವ

ಹಾಗು ತೆಗೆಯುವ ವೇಳೆಯಲ್ಲಿ ಈ ಪುಸ್ತಕವನ್ನು ಬ್ಯಾಂಕಿಗೆ ಒಯ್ದು ಆದರಲ್ಲಿ ಆದ ವ್ಯವಹಾರವನ್ನು ತುಂಬಿಸಿಕೊಳ್ಳಬೇಕು. ಕೆಲವು ಬ್ಯಾಂಕಿನವರು ಖಾತೆಪುಸ್ತಕದೊಂದಿಗೆ, ಒಂದು ಚೆಕ್ ಪುಸ್ತಕವನ್ನು ಕೊಡುವರು. ನಾವು ಹಿಂದೆ ವಿವರಿಸಿದ ಹೊಸ ಯೋಜನೆಗಳಲ್ಲಿ ಇದೊಂದು. ಈ ಮೊದಲು ಉಳಿಕೆಯ ಬ್ಯಾಂಕಿನಂಥ ಮಿಕ್ಕ ಖಾತೆದಾರರಿಗೆ ಚೆಕ್ ಪುಸ್ತಕದ ಸಂಬಂಧ ಬರುತ್ತಿದ್ದಿಲ್ಲ. ಈಚೆಗೆ ಪ್ರಾರಂಭಿಸಿದ ಹೊಸ ಬ್ಯಾಂಕಿನವರು ಉಳಿಕೆಯ ಬ್ಯಾಂಕಿನವರಿಗೆ ಚೆಕ್ ಪುಸ್ತಕ ಕೊಡುವ ಉಪಕ್ರಮವನ್ನು ಪ್ರಾರಂಭಿಸಿರುವರು. ಇನ್ನೂ ಎಷ್ಟೋ ಹಳೇ ಬ್ಯಾಂಕಿನವರು ಈ ಸಾಂಪ್ರದಾಯವನ್ನು ಇನ್ನೂ ಕೈಕೊಂಡಿಲ್ಲ. ಚೆಕ್ ಪುಸ್ತಕವನ್ನು ಬಳಿಸುವವರು ಕೂಡ ಅದರ ಸದುಪಯೋಗವನ್ನು ಮಾಡಿಕೊಳ್ಳಬೇಕು. ತಮ್ಮ ಖಾತೆಪಟ್ಟಿಯನ್ನು ವಾರಕ್ಕೊಮ್ಮೆಯಾದರೂ ಬ್ಯಾಂಕಿನವರಿಂದ ಬರೆಯಿಸಿ ಇಟ್ಟುಕೊಳ್ಳಬೇಕು. ಏಕೆಂದರೆ, ಚೆಕ್ ಬರೆದುಕೊಟ್ಟಾಗ ಅದು ಯಾವ ಕಾಲಕ್ಕೆ ಬ್ಯಾಂಕಿನಲ್ಲಿ ಬರುವದು ಎಂಬುದು ನಿಶ್ಚಿತವಿಲ್ಲದ ಮೂಲಕ, ಖಾತೆಯ ನಕಲು ತಮ್ಮ ಹತ್ತರವಿರುವುದು ಅವಶ್ಯ. ಹೀಗೆ ಮಾಡದೆ ಇದ್ದಲ್ಲಿ ಒಮ್ಮೊಮ್ಮೆ ತಮ್ಮ ಖಾತೆಯಲ್ಲಿ ಸಾಕಷ್ಟು ಹಣವಿಲ್ಲದೆ ಚೆಕ್ಕು ಬರೆಯುವ ಸಂಭವವುಂಟು. ಇದರಿಂದ ನಮ್ಮ ಚೆಕ್ಕು ಮನ್ನಣೆ ಹೊಂದದೆ ಮರುಳಿ, ಅಪನಂಬಿಗೆಯಾಗುವದಲ್ಲದೆ, ಲೆಕ್ಕಕ್ಕೂ ತೊಂದರೆಯುಂಟಾಗುವದು.

ನಮ್ಮ ಅನುಭವದ ಮೇರೆಗೆ ಸೇವ್ಹಿಂಗ್ಸ ಖಾತೆಯಲ್ಲಿಯ ಶಿಲ್ಕುಗಳು ಅನೇಕ ಪ್ರಕಾರದ್ದಿರುವವು. ಈ ಖಾತೆಯು ಕೇವಲ ವೈಯಕ್ತಿಕವಿರುವದರಿಂದ ಖಾತೆದಾರರು ತಮ್ಮ ಹಣವನ್ನು ತಮಗೆ ಅನುಕೂಲವಾಗುವಂತೆ ಬೇರೆ ಕಡೆಗೆ ತೆಗೆದಿಡಬಹುದು. ಅವಧಿಯ ಇಡುಗಂಟೆ (ಮುದ್ದತಿ ಠೇವಿ) ನಲ್ಲಿ ಇಟ್ಟರೆ ಸಮಯಕ್ಕೆ ಸಿಗಲಾರದಾದ್ದರಿಂದ ಬಳಿಕೆಯ ಇಡುಗಂಟೆ (ಚಾಲತಿ ಠೇವಿ) ನಲ್ಲಿಟ್ಟರೆ, ವ್ಯವಹಾರವಲ್ಲಿ ತೊಡಗಬಹುದಾದ್ದರಿಂದ ಠೇವುದಾರರು ತಮ್ಮ ಯೋಜನೆಯಂತೆ ಈ ಖಾತೆಯ ಉಪಯೋಗವನ್ನು ಹೆಚ್ಚಾಗಿ ಮಾಡಿಕೊಳ್ಳುವರು. ಬ್ಯಾಂಕಿನಲ್ಲಿಯ ಖಾತೆಗಳನ್ನು ಪರೀಕ್ಷಿಸಿದರೆ, ಮೇಲೆ ವಿವರಿಸಿದ ಖಾತೆಗಳು ಕಡಿಮೆಯಿದ್ದು, ಹತ್ತು–ಐವತ್ತು ರೂಪಾಯಿಗಳಷ್ಟಿಟ್ಟ ಖಾತೆಗಳೇ ಹೆಚ್ಚು. ಆದುದರಿಂದ ಇಂತಹ ಸಾವಿರಾರು ಖಾತೆದಾರರು

ಬ್ಯಾಂಕಿಗೆ ಆವಶ್ಯಕ. ಮಿಕ್ಕ ಖಾತೆಗಳಲ್ಲಿದ್ದ ಶಿಲ್ಕು ಬ್ಯಾಂಕಿಗೆ ಲಾಭದಾಯಕವಾದುದು.

ಈ ಖಾತೆಯ ಮೂಲವನ್ನು ವಿಚಾರಿಸಿದಾಗ ಒಂದು ಮಹತ್ವವಾದ ಗುಟ್ಟು ಹೊರಬರುವದು. ಸಣ್ಣ ಸಣ್ಣ ಖಾತೆಗಳಿರುವ ಮೂಲಕ ಬ್ಯಾಂಕಿನ ಸಂಗಡ ವ್ಯವಹಾರ ಮಾಡಲು ಇದು ಅನುಕೂಲವಾಗುವದು. ಸಾಮಾನ್ಯ ಗಳಿಕೆಯವರಿಗೆ ತಮ್ಮ ಉತ್ಪನ್ನದ ಕೆಲ ಭಾಗವನ್ನು ಉಳಿಸಲು ಸಾಧನವಾಗುವದು. ಖಾತೆಯಲ್ಲಿಯ ಹಣವನ್ನು ತೆಗೆಯಲಿಕ್ಕೆ ಕೆಲ ನಿರ್ಬಂಧಗಳಿರುವ ಮೂಲಕ ಮನಬಂದಂತೆ ಖರ್ಚು ಮಾಡಲು ಸಾಧ್ಯವಾಗುವದಿಲ್ಲ. ಹೀಗೆ ಕೂಡಿಟ್ಟ ಹಣವು ವಿಮೆಯನ್ನು ತುಂಬುವದಕ್ಕಾಗಲಿ ಇಲ್ಲವೆ ಆಪತ್ಕಾಲಕ್ಕಾಗಲಿ ಒಳ್ಳೇ ಉಪಯೋಗವಾಗುವದು. ಯುದ್ಧಜನ್ಯ ಪರಿಸ್ಥಿತಿಯ ಮೂಲಕ, ಕೆಲವು ಜನರು ಕೂಡಲೆ ಶ್ರೀಮಂತರಾದರು. ಅವರು ತಮ್ಮ ಹಣಕ್ಕೆ ಬಳಿಕೆಯ ಇಡುಗಂಟಿ (ಚಾಲತಿ ಠೇವಿ) ಗಿಂತ ಹೆಚ್ಚಿನ ಬಡ್ಡಿಯನ್ನು ದೊರಕಿಸುವದಕ್ಕಾಗಿ, ಬಹಳ ಹಣವನ್ನು ಸೇವ್ಹಿಂಗ್ಸ ಖಾತೆಗಳಲ್ಲಿ ಇಡುತ್ತ ಹೋದರು. ಇದನ್ನು ಆದಷ್ಟು ನಿಲ್ಲಿಸುವ ಉದ್ದೇಶದಿಂದ ಬ್ಯಾಂಕಿನವರು ಒಂದೇ ಖಾತೆಯಲ್ಲಿ ಹತ್ತು ಸಾವಿರಕ್ಕಿಂತ ಹೆಚ್ಚು ಶಿಲ್ಕು ಇರಕೂಡದೆಂದು ನಿರ್ಬಂಧಿಸಿದರು. ಮತ್ತು ಈ ಖಾತೆಗಳ ಬಡ್ಡೀ ದರವನ್ನು ಕಡಿಮೆ ಮಾಡಿದರು. ಇನ್ನೂ ಕೆಲವು ಖಾತೆದಾರರು ತಮ್ಮ ತಮ್ಮ ಆಯುಷ್ಯದ ಗಳಿಕೆಯ ಮತ್ತು ಇತರ ಕಡೆಗೆ ತೊಡಗಿಸಿದ ರಕಮನ್ನು ಸೇವಾನಿವೃತ್ತಿಯ ನಂತರ ಒಟ್ಟುಗೂಡಿಸಿ, ಹೊಲ ಕೊಳ್ಳುವದಕ್ಕೋ, ಮನೆ ಕಟ್ಟಿಸುವದಕ್ಕೋ, ಸೇವ್ಹಿಂಗ್ಸ ಬ್ಯಾಂಕಿನಲ್ಲಿಡುವರು. ದೊಡ್ಡ ಶಿಲ್ಕು ಇಡುವ ಖಾತೆದಾರರು ಕಡಿಮೆ. ಸಣ್ಣ ಖಾತೆದಾರರೇ ಸೇವ್ಹಿಂಗ್ಸ ಬ್ಯಾಂಕಿನ ಇಡಗಂಟುದಾರರು. ಸಾಮಾನ್ಯ ಜನ, ಈ ಖಾತೆಯ ಮುಖಾಂತರ ತಮ್ಮ ಗಳಿಕೆಯನ್ನು ಮಿತವ್ಯಯದಿಂದ ಬಳಿಸಿ, ಆದಷ್ಟು ಹಣವನ್ನು ಕೂಡಿಡುತ್ತ ಹೋದರೂ ಮೊದಮೊದಲು ಅಲ್ಪವೆಂದು ಕಾಣಬರುವ ಹಣ ಬೆಳೆಯುತ್ತ ಹೋಗಿ, ಕೆಲಕಾಲದ ನಂತರ ಇತರ ಖಾತೆಗಳ ಲಾಭವನ್ನು ಇದು ಪಡೆಯಬಹುದು.

ಇತ್ತೀಚೆಗೆ ಹೊಸ ಹೊಸ ಬ್ಯಾಂಕುಗಳು ಹೊರಟಂತೆ, ನಮ್ಮ ಸಣ್ಣ

ಣಾದ ವ್ಯವಹಾರಕ್ಕೆ ಅನೇಕ ಬ್ಯಾಂಕುಗಳಲ್ಲಿ ಖಾತೆ ಇರಲೆಂಬ ವೃಥಾ ಅಭಿಮಾನ ಉಂಟಾಗಬಹುದು. ನಮ್ಮಲ್ಲಿ ಬಹುಜನರು ಮಧ್ಯಮ ವರ್ಗದವರು. ನಮ್ಮ ಗಳಿಕೆಯೂ ಅಷ್ಟಕಷ್ಟೆ! ಈಗಿನ ತುಟ್ಟಿಯ ಕಾಲದಲ್ಲಿ ಕೈಗೆ ಬಂದ ಹಣವೆಲ್ಲ ಹೊಟ್ಟೆ ಹೊರೆಯುವದರಲ್ಲಿಯೇ ಕಣ್ಣುಮರೆಯಾಗಿ ಹೋಗುವದು. ಅದರಲ್ಲಿಯೇ ಶ್ರಮದಿಂದ ಅಲ್ಪಸ್ವಲ್ಪ ಉಳಿಸಿ ಒಂದು ಉಳಿಕೆಯ (ಸೇವ್ಹಿಂಗ್ಸ) ಖಾತೆಯನ್ನು ಇಡುವದೇ ಕಷ್ಟ. ಹತ್ತರವಿದ್ದ ೫೦ ರೂ. ಹಣವನ್ನು ೧೦ ಬ್ಯಾಂಕುಗಳಲ್ಲಿಡುವದಕ್ಕಿಂತ ೫೦ ರೂಪಾಯಿಗಳನ್ನು ಒಂದೇ ಬ್ಯಾಂಕಿನಲ್ಲಿಡುವದು ವಿಹಿತವಾದುದು. ಅನೇಕ ಬ್ಯಾಂಕಿನವರು ಆಗ್ರಹಪಡಿಸಬಹುದು. ಆದರೆ, ಕಲಿತಂಥ ಮಧ್ಯಮ ವರ್ಗವು ವ್ಯಾವಹಾರಿಕ ದೃಷ್ಟಿಯಿಂದ ವಿಚಾರ ಮಾಡಿ, ಒಂದೇ ಖಾತೆಯನ್ನು ಸಾಗಿಸುವದು ಉತ್ತಮ.

ಚೆಕ್ ಪುಸ್ತಕದ ಉಲ್ಲೇಖವನ್ನು ಹಿಂದೆ ಮಾಡಿದ್ದೇವೆ. ಅದರ ಉಪಯೋಗದ ಬಗೆಗೆ ವಿಚಾರ ಮಾಡುವಾ. ಉಳಿಕೆಯ (ಸೇವ್ಹಿಂಗ್ಸ ಬ್ಯಾಂಕ) ಖಾತೆಯನ್ನು ಪ್ರಾರಂಭಿಸಿದ ಕೂಡಲೇ ಬ್ಯಾಂಕಿನವರು ಚೆಕ್ ಪುಸ್ತಕವನ್ನು ಕೊಡುವರು. ಒಂದು ಪುಸ್ತಕದಲ್ಲಿ ಸುಮಾರು ೧೦ ಚೆಕ್ಕಿನ ಪುಟಗಳು ಇರುತ್ತವೆ. ಸಜ್ಜನರಾದ ಸಾಮಾನ್ಯ ಖಾತೆದಾರರು ತಮಗೆ ದೊರಕಿದ ಚೆಕ್ ಪುಸ್ತಕವನ್ನು ದಕ್ಷತೆಯಿಂದ ಇಡುವರು. ಮತ್ತು ಚೆಕ್ಕನ್ನು ಅವಶ್ಯವಿದ್ದಾಗ ಮಾತ್ರ ಬರೆಯುವರು. ಮತ್ತು ಚೆಕ್ಕು ಕೊಡುವಾಗ ತಮ್ಮ ಖಾತೆಯಲ್ಲಿ ಸಾಕಷ್ಟು ಹಣವಿದೆಯೋ ಇಲ್ಲವೋ ಎಂಬುದನ್ನೂ ನೋಡಿ ಕೊಡುವರು. ಆದರೆ ಇತ್ತೀಚೆಗೆ ಚೆಕ್ಕು ಪುಸ್ತಕಗಳ ದುರುಪಯೋಗವೂ ಕಂಡುಬರುತ್ತಿರುವದು. ಹೊಸ ಹೊಸ ಬ್ಯಾಂಕುಗಳು ಹೊರಟಂತೆ, ಹೊಸ ಹೊಸ ಸಣ್ಣ ಖಾತೆದಾರರೂ ಹೆಚ್ಚಾಗಿ ಹುಟ್ಟುತ್ತಿರುವರು. ಇವರಲ್ಲಿ ಕೆಲವರಿಗೆ ಉಳಿಕೆಯ (ಸೇವ್ಹಿಂಗ್ಸ) ಬ್ಯಾಂಕಿನ ಉದ್ದೇಶವನ್ನು ಸಾಧಿಸುವದಿರಲಿ ಹೇಗಾದರೂ ಮಾಡಿ ಚೆಕ್ ಬುಕ್ಕುಗಳನ್ನು ದೊರಕಿಸುವದೇ ಇವರ ಗುರಿ. ಉಳಿಕೆಯ (ಸೇವ್ಹಿಂಗ್ಸ) ಬ್ಯಾಂಕಿನಲ್ಲಿ ೧೦ ರೂ. ಗಳನ್ನು ಇಟ್ಟರೆ ಕಾರ್ಯ ಸಾಧಿಸುವದೆಂಬ ಸಂಗತಿಯನ್ನು ತಿಳಿದವರಾದ್ದರಿಂದ ನಾಲ್ಕಾರು ಬ್ಯಾಂಕುಗಳಲ್ಲಿ ಹತ್ತು ಹತ್ತು ರೂಪಾಯಿಗಳನ್ನು ಹಾಕಿ ನಾಲ್ಕಾರು ಚೆಕ್ ಬುಕ್ಕು

ಗಳನ್ನು ದೊರಕಿಸುವರು. ಇದು ಮೊದಲನೆಯ ಮೆಟ್ಟಲು. ಆ ನಂತರ ಋಣ ದೊರಕಿಸುವ ಹಂಚಿಕೆ. ಒಂದೆರಡು ತಿಂಗಳ ಅವಧಿಯ ಮುಂದಿನ ತಾರೀಖುಗಳನ್ನು ಹಾಕಿ, ಇದ್ದ ಚೆಕ್ಕುಗಳನ್ನೆಲ್ಲ ಬರೆದು ಬಿಟ್ಟು, ಸಾವಿರಾರು ರೂಪಾಯಿಗಳನ್ನು ಅತ್ತಿತ್ತ ಕಡ ಎತ್ತುವರು. ತಾವು ಹಾಕಿದ ತಾರೀಖಿನ ದಿವಸ ಕೊಟ್ಟ ಚೆಕ್ಕುಗಳು ಬ್ಯಾಂಕಿಗೆ ಬರುತ್ತ ಹೋಗುವವು. ಖಾತೆಯಲ್ಲಿ ಹಣವಿಲ್ಲದ ಮೂಲಕ, ಆ ದಿನವನ್ನು ತಪ್ಪಿಸುವದಕ್ಕಾಗಿ, ಇನ್ನೊಂದು ಬ್ಯಾಂಕಿನ ಮೇಲೆ ಚೆಕ್ಕು ಬರೆದು ಮೊದಲನೆಯ ಬ್ಯಾಂಕಿನಲ್ಲಿ ಹಾಕುವರು. ಹೀಗೆ ಬೇರೆ ಬೇರೆ ಬ್ಯಾಂಕುಗಳ ಕೂಡ ಬೇರೆ ಬೇರೆ ರೀತಿಯಿಂದ ಆಟವಾಡು ವರು. ಮತ್ತು ಪತಂಗಗಳಂತೆ, ಬ್ಯಾಂಕಿನ ಚೆಕ್ಕುಗಳನ್ನು ತೂರಾಡುವರು. ಕೊನೆಗೆ ಈ ಗಾಳಿಪಟವು ಎಲ್ಲಿಯಾದರೂ ಸಿಕ್ಕುಬಿದ್ದು ಆಟದ ದುಷ್ಪರಿಣಾಮ ವನ್ನು ಅನುಭೋಗಿಸುವರು. ಈ ಆಟದಿಂದ ಸಮಾಜದಲ್ಲಿಯ ಅನೇಕ ಸಜ್ಜನರು ತೊಂದರೆಯಲ್ಲಿ ಬಿದ್ದು, ಈ ಚೆಕ್ಕೂ ಬೇಡ, ಬ್ಯಾಂಕೂ ಬೇಡ ಎಂದು ಅಭಿಪ್ರಾಯವುಳ್ಳವರಾಗುವರು. ಹೀಗೆ ಸಾರ್ವತ್ರಿಕವಾಗಿ ಅಭಿಪ್ರಾಯ ವಾದರೆ, ಬ್ಯಾಂಕುಗಳ ವ್ಯವಹಾರವು ಕುಂಠಿತವಾಗುವದು.

ಮಧ್ಯಮ ವರ್ಗದವರಿಗೆ ನಾಲ್ಕಾರು ಕಡೆಗೆ ದುಡ್ಡು ಇಡುವದು ಸಾಧ್ಯವಾದ ಅಥವಾ ಸಾಮರ್ಥ್ಯವಿದ್ದ ಮಾತಲ್ಲ. ಕಾರಣ ನಾಲ್ಕಾರು ಖಾತೆ ಪುಸ್ತಕಗಳನ್ನು ನಾಲ್ಕಾರು ಚೆಕ್ ಬುಕ್ಕುಗಳನ್ನು, ನಾಲ್ಕಾರು ವಿವಿಧ ತರದ ಸಹಿಯ ನಮೂನೆಗಳನ್ನು ಕಾಯ್ದಿಡುವದು ಸುಲಭವಾದುದಲ್ಲ. ಕೆಲವು ಜನರಿಗೆ ಬೇರೆ ಬೇರೆ ಬ್ಯಾಂಕಿಗೆ ಬೇರೆ ಬೇರೆ ಸಹಿಯ ನಮೂನೆ ಕೊಡುವ ಚಟವುಂಟು. ಅದರಿಂದ, 'ಅ' ಬ್ಯಾಂಕಿನವರಿಗೆ ಕೊಟ್ಟ ಸಹಿಯು "ಬ" ಬ್ಯಾಂಕಿನ ಚೆಕ್ಕಿನ ಮೇಲೆ ಬರೆಯಲಾಗುವದು. "ಬ" ಬ್ಯಾಂಕಿ ನವರು ಅದನ್ನು ನಿರಾಕರಿಸಿದರೆ, ಖಾತೇದಾರರು ಸಿಟ್ಟಾಗುವರು. ಇವೆಲ್ಲ ಗೊಂದಲದ ಲಕ್ಷಣಗಳು. ಆದ್ದರಿಂದ ಎಲ್ಲರೂ ತಮ್ಮ ಯೋಗ್ಯತೆಯಂತೆ ವ್ಯವಹಾರವು ಸುಲಭವಾಗುವಂತೆ ವರ್ತಿಸಬೇಕು.

ಈ ಖಾತೆಯಲ್ಲಿಟ್ಟ ಹಣವು ಬೆಳೆಯುತ್ತ ಹೋದಲ್ಲಿ, ಈ ಸಂಚಯದ ಕೆಲವು ಭಾಗವನ್ನು ವ್ಯವಹಾರಕ್ಕೆ ಬೇಕಾದರೆ ಅದನ್ನು ಬಳಿಕೆಯ (ಚಾಲತಿ) ಖಾತೆಗೆ ಹಾಕಬಹುದು. ಇಲ್ಲವೆ ಅವಧಿಯ ಇಡಗಂಟ (ಮುದ್ದತಿ ಠೇವಿ)

ನಲ್ಲಿ ತೊಡಗಿಸಬಹುದು. ಇಲ್ಲದಿದ್ದರೆ, ಸರಕಾರಿ ವಿಶ್ವಾಸಪತ್ರಗಳನ್ನು, ಯೋಗ್ಯ ಕಂಪನಿ ಶೇಅರುಗಳನ್ನು ಕೊಳ್ಳಬಹುದು. ಈ ಖಾತೆದಾರರು ಆಯುರ್ವಿಮೆಯ ಹಪ್ತೆ, ಇನ್‌ಕಮ್ ಟ್ಯಾಕ್ಸ, ಮುನಸಿಪಲ್ ಟ್ಯಾಕ್ಸ, ಕ್ಲಬ್, ವರ್ಗಣಿ, ಮಕ್ಕಳ ಶಾಲೆಯ ಫೀ ಈ ತರದ ಆಗಾಗ್ಗೆ ಕೊಡಬಹುದಾದ ಹಣವನ್ನು ಬ್ಯಾಂಕಿನವರು ಖಾತೆದಾರರು ತಿಳಿಸಿದ ಮೇರೆಗೆ ತಪ್ಪದೆ ಕೊಡುವರು. ಬ್ಯಾಂಕಿನವರಿಗೆ ತಮ್ಮ ಡಾಯರಿ ಚನ್ನಾಗಿ ಬರೆದಿಡಬೇಕೇ ಆಗುವದರಿಂದ ಖಾತೆದಾರರು ವಿನಂತಿಸಿದ ಮೇರೆಗೆ ಮೇಲೆ ವಿವರಿಸಿದ ಎಲ್ಲ ಕೆಲಸಗಳನ್ನು ತತ್ಪರತೆಯಿಂದ ಮಾಡಬಲ್ಲರು. ಇದಕ್ಕಾಗಿ ವರ್ಷಕ್ಕೆ ನಾಲ್ಕಾರು ರೂಪಾಯಿ ಕಮಿಶನ ಬ್ಯಾಂಕಿನವರಿಗೆ ಕೊಡಬೇಕಾಗುವದು. ಆದರೂ ಅಡ್ಡಿಯಿಲ್ಲ. ಖಾತೆದಾರರಿಗೆ ಲೆಖ್ಖದ ತೊಂದರೆ ತಪ್ಪುವದು ಅವರು ತಮ್ಮ ಖಾತೆಗಳಲ್ಲಿ ಕೇವಲ ಹಣವನ್ನಿಡುವದಷ್ಟೇ ಕಾರ್ಯವನ್ನು ಮಾಡಬಹುದು.

ಇಡಗಂಟು (ಠೇವು) ದಾರರು ಒಬ್ಬಿಬ್ಬರ ಹೆಸರಿನ ಖಾತೆಗಳನ್ನು ಪ್ರಾರಂಭ ಮಾಡುವ ಬಗ್ಗೆ ಅವಧಿಯ (ಮುದ್ದತಿ) ಠೇವಿನ ವಿಷಯಕ್ಕೆ ಚರ್ಚಿಸಿದ ಸಂಗತಿಯೇ ಈ ವಿಷಯಕ್ಕೂ ಹೊಂದುವಂತಿದೆ.

ಅವಧಿಯ ಇಡಗಂಟಿನ (ಮುದ್ದತಿ ಠೇವಿನ) ಎಲ್ಲ ಹಣವನ್ನು ಬ್ಯಾಂಕಿನವರು ಠೇವಿನ ಅವಧಿಯತನಕ ಉಪಯೋಗ ಮಾಡುವದರಿಂದ ಮತ್ತು ಅವಧಿಯು ಮುಗಿಯುವ ವರೆಗೆ ಅದು ತಿರುಗಿ ಕೊಡಲಾಗದಿದ್ದ ಮೂಲಕ ಅದರ ಮೇಲೆ ಹೆಚ್ಚಿನ ಬಡ್ಡಿ ಕೊಡಬಲ್ಲರು. ಉಳಿಕೆಯ (ಸೇವ್ಹಿಂಗ್ಸ) ಖಾತೆಯಲ್ಲಿಯ ಹಣವು ಒಂದು ವಾರದಲ್ಲಿ ಒಂದೆರಡು ಸಲವೇ ತೆಗೆಯಬಹುದೆಂದು ನಿಯಮವಿದ್ದದರಿಂದ ಅದರ ಮೇಲೆ ಬಡ್ಡಿಯ ದರವು ತುಸು ಕಡಿಮೆ ಕೊಡಲಾಗುವದು. ಕಾರಣ ಠೇವುದಾರರು ಬೇಡಿದ ಹಾಗೆ ಹಣ ಕೊಡುವದಕ್ಕಾಗಿ ಬ್ಯಾಂಕಿನವರು ಉಳಿಕೆಯ (ಸೇವ್ಹಿಂಗ್ಸ) ಬ್ಯಾಂಕ ಖಾತೆಗಳಲ್ಲಿ ಒಟ್ಟುಗೂಡಿದ ಶಿಲಕಿನ ಕೆಲವು ಭಾಗವನ್ನು ಯಾವಾಗಲೂ ರೋಖ ಕಾದಿಡುವದು ಅವಶ್ಯವಿರುವದು. ಉದಾಹರಣೆ:—ಬ್ಯಾಂಕಿನ ಎಲ್ಲ ಸೇವ್ಹಿಂಗ್ಸ ಬ್ಯಾಂಕುಗಳ ಖಾತೆಗಳಲ್ಲಿದ್ದ ಒಟ್ಟು ಶಿಲಕು ೧೦ ಲಕ್ಷ ರೂಪಾಯಿಗಳಿದ್ದಾಗ, ದಿನದ

ವ್ಯವಹಾರಕ್ಕಾಗಿ ೪೦ ಸಾವಿರದಿಂದ ೧ ಲಕ್ಷ ರೂಪಾಯಿಗಳ ವರೆಗೆ ರೋಖು ಕೈಯಲ್ಲಿಟ್ಟುಕೊಳ್ಳಬೇಕಾಗುವದು. ಈ ಪ್ರಕಾರ ಕೈಯಲ್ಲುಳಿದ ಹಣವು ಬ್ಯಾಂಕಿನ ಅನ್ಯ ವ್ಯವಹಾರಕ್ಕೆ ಉಪಯೋಗವಾಗಿರುವದರಿಂದ, ಈ ಖಾತೆಗಳಿಗೆ ಹೆಚ್ಚಿನ ಬಡ್ಡಿ ಸಿಗುವದು ಅಸಂಭವವು. ಕಳೆದ ಮೂರು ನಾಲ್ಕು ವರುಷಗಳಿಂದ ಉಳಿಕೆಯ (ಸೇವ್ಹಿಂಗ್ಸ) ಖಾತೆಗಳು ಹೆಚ್ಚಾಗುತ್ತ ಹೋಗಿ, ಆ ಖಾತೆಗಳಲ್ಲಿದ್ದ ಹಣವೂ ಬೆಳೆಯುತ್ತ ಹೋದದ್ದರಿಂದ ಆಗಾಗ್ಗೆ ಅವುಗಳ ಬಡ್ಡಿಯ ದರವನ್ನಾದರೂ ಬ್ಯಾಂಕಿನವರು ಇಳಿಸುತ್ತ ಬಂದರು.

ಉಳಿಕೆಯ (ಸೇವ್ಹಿಂಗ್ಸ) ಬ್ಯಾಂಕ ಖಾತೆಗಳ ಬಡ್ಡಿಯನ್ನು ಬ್ಯಾಂಕಿನವರು ಮಾಡುವ ಲೆಕ್ಕದ ಬಗ್ಗೆ ವಿಚಾರಿಸುವಾ. ಪ್ರತಿ ತಿಂಗಳದ ೧ನೆಯ ತಾರೀಖಿನಿಂದ ೬ನೆಯ ತಾರೀಖಿನ ವರೆಗೆ ಇಟ್ಟ ರಕಮಿನ ಮೇಲೆ ಬ್ಯಾಂಕಿನವರು ಬಡ್ಡಿ ಕೊಡುವರು. ನಂತರ ತುಂಬಿದ ಹಣವನ್ನು ಬಡ್ಡಿಯಿಲ್ಲದೆ ಆ ತಿಂಗಳಲ್ಲಿ ಇಟ್ಟುಕೊಳ್ಳಲಾಗುವದು. ಹೀಗೆ ತಿಂಗಳದ ಕೊನೆಯ ತಾರೀಖಿನ ವರೆಗೆ ಆಗುತ್ತಿದ್ದ ವ್ಯವಹಾರವನ್ನು ನಿರೀಕ್ಷಿಸಿ, ಒಂದು ತಿಂಗಳಲ್ಲಿ ತುಂಬಿದ ತೆಗೆದುಳಿದಿದ್ದ ಲೆಕ್ಕವನ್ನು ಪರಿಶೀಲಿಸಿ, ಆ ತಿಂಗಳಲ್ಲಿ ಖಾತೆಯಲ್ಲಿದ್ದ ತೀರ ಕಡಿಮೆಯಾದ ಶಿಲುಕಿನ ಮೇಲೆಯಷ್ಟೇ ಬಡ್ಡಿ ಕೊಡಲಾಗುವದು. ಅಂದರೆ ಒಂದು ತಿಂಗಳದ ಪ್ರಾರಂಭದಲ್ಲಿ ೧೦೦೦ ರೂಪಾಯಿ ಶಿಲಕು ಇದ್ದು, ಅದೇ ತಿಂಗಳದ ೬ನೆಯ ತಾರೀಖಿನ ವರೆಗೆ ಹೆಚ್ಚಿಗೆ ೪೦೦೦ ರೂಪಾಯಿ ತುಂಬಿದಾಗ ಮತ್ತು ಹೀಗೆ ಉಳಿದ, ೫೦೦೦ ರೂಪಾಯಿಗಳ ಬಡ್ಡಿ। ಕೊಡುವರು. ಅದರಲ್ಲಿಯ ೨೦೦೦ ರೂಪಾಯಿಗಳನ್ನು ಯಾವಾಗಾದರೂ ತೆಗೆದರೆ ೩೦೦೦ ರೂಪಾಯಿಗಳ ಮೇಲೆ ಬಡ್ಡಿ ದೊರೆಯುವದು. ಏನೂ ಹಣವನ್ನು ತೆಗೆಯದೆ, ೬ನೆಯ ತಾರೀಖಿನ ನಂತರ ಹೆಚ್ಚಿಗೆ ಎಷ್ಟೋ ರಕಮನ್ನು ತುಂಬಿದರೂ ಬಡ್ಡಿಯ ಲೆಕ್ಕಕ್ಕೆ ಐದೇ ಸಾವಿರ ರೂಪಾಯಿಗಳು.

ಉಳಿಕೆಯ (ಸೇವ್ಹಿಂಗ್ಸ) ಬ್ಯಾಂಕ ಖಾತೆಯಿಂದ ಹೆಚ್ಚಿನ ಬಡ್ಡಿ ದೊರಕಿಸುವ ಆಸೆಯಿಂದ, ಕೆಲವು ಖಾತೆದಾರರು ತಮ್ಮ ವ್ಯವಹಾರದಲ್ಲಿ ಆಗಾಗ್ಗೆ ದೊರಕಿದ ಇತರ ಜನರ ಚಕ್ಕುಗಳನ್ನು ತಮ್ಮ ಉಳಿದ ಉತ್ಪನ್ನದಲ್ಲಿಂದ ಬಂದ ಬಡ್ಡಿಯ ವಾರಂಟುಗಳನ್ನು ಈ ಖಾತೆಗಳಲ್ಲಿ ಸೇರಿಸುವರು.

ಕೆಲವು ಬ್ಯಾಂಕಿನವರು ಈ ಪ್ರಕಾರದ ವ್ಯವಹಾರವು ಬಳಿಕೆಯ (ಚಾಲತೀ) ಖಾತೆಯ ಭಾಗವಿದ್ದುದರಿಂದ ಉಳಿಕೆಯ (ಸೇವ್ಹಿಂಗ್ಸ) ಖಾತೆಯಲ್ಲಿ ಅದನ್ನು ಸೇರಿಸುವದಿಲ್ಲ. ಉಳಿಕೆಯ (ಸೇವ್ಹಿಂಗ್ಸ) ಖಾತೆಯಲ್ಲಿ ಕೇವಲ ರೋಖ ಹಣದ ವ್ಯವಹಾರವೇ ಆಗತಕ್ಕದ್ದು. ಆ ಹಣದ ವಿನಿಯೋಗವನ್ನು ತಕ್ಕ ಹಂಚಿಕೆಯಿಂದ ಮಾಡುವ ಕೆಲಸವನ್ನು ಬ್ಯಾಂಕಿನವರಿಗೆ ಒಪ್ಪಿಸಿದರೆ ಸಾಕು. ಇತರ ಚೆಕ್ಕುಗಳ ಹಣವನ್ನು ದೊರಕಿಸುವ ಕಾರ್ಯವನ್ನು ಒಮ್ಮೊಮ್ಮೆ ಹಣ ಕಡಿಮೆ ಬಿದ್ದಾಗ ವ್ಯವಹಾರ ಸಾಗುವ ಮಟ್ಟಿಗೆ ಸಹಾಯ ಮಾಡತಕ್ಕ ಕೆಲಸ ವನ್ನೂ ಇನ್ನೂ ಉಳಿದ ಮಿಕ್ಕ ಕಾರ್ಯಗಳನ್ನೂ ಬ್ಯಾಂಕಿನವರು ಮಾಡುವರು. ತಮ್ಮ ನಿಯಮಕ್ಕನುಸರಿಸಿ ಖಾತೆದಾರರಿಗೆ ಸೂಚನೆ ಮಾಡಿ ಬಳಿಕೆಯ (ಚಾಲತಿ) (Current) ಖಾತೆಯನ್ನಿಡುವ ಬಗ್ಗೆ ಸಹಾಯವನ್ನು ಮಾಡೇ ಮಾಡುವರು. ಮಾತ್ರ, ಖಾತೆದಾರರು ತಾವಾಗಿಯೇ ಮನಬಂದಂತೆ ಎಲ್ಲ ವ್ಯವಹಾರಗಳನ್ನು ಉಳಿಕೆಯ ( ಸೇವ್ಹಿಂಗ್ಸ ) ಬ್ಯಾಂಕ ಖಾತೆಯಲ್ಲಿ ಸೇರಿಸುವದು ವಿಹಿತವಾದುದಲ್ಲ.

## ಬಳಿಕೆಯ (ಚಾಲತಿ) ಖಾತೆ (Current Account)

ಬ್ಯಾಂಕಿನವರು ಮಾಡತಕ್ಕ ವಿವಿಧ ಕಾರ್ಯಗಳಲ್ಲಿ ಬಳಿಕೆಯ (ಚಾಲತಿ) ಖಾತೆಯನ್ನು ಸಾಗಿಸುವ ಕಾರ್ಯವು ಬಹಳ ಮಹತ್ವದ್ದಾಗಿರು ವದು. ಏನೂ ತೊಂದರೆಯಿಲ್ಲದೆ, ಸರಿಯಾಗಿದ್ದಲ್ಲಿ ಕೂಡಲೇ ಆಗುವ ಕೆಲಸವು ಬಳಿಕೆಯ (ಚಾಲತಿ) ಖಾತೆಯ ಮುಖಾಂತರವಾಗಿ ಆಗಿ ಹೋಗು ವದು. ಹಣವನ್ನು ದಿನದಲ್ಲಿ ಯಾವಾಗಾದರೂ ತಂದಿಡಬಹುದು. ಅವಶ್ಯ ವಿದ್ದಾಗ ಯಾವ ಕಾಲಕ್ಕಾದರೂ ನಿರ್ಬಂಧವಿಲ್ಲದೇ ತೆಗೆಯಬಹುದು. ಖಾತೆ ದಾರರ ಕೈಯಲ್ಲಿದ್ದ ಹಣಕ್ಕೆ ಸಂಬಂಧಿಸಿದ ಯಾವ ಕಾಗದವನ್ನಾದರೂ ಬ್ಯಾಂಕಿನವರಿಗೆ ಒಪ್ಪಿಸಿದರೆ, ಅದರ ವಸೂಲಿಯನ್ನು ಮಾಡಿಕೊಡುವರು. ಒಂದು ವೇಳೆ ಶಿಲಕು ಇದ್ದ ಹಣಕ್ಕಿಂತ ಹೆಚ್ಚಿನ ರಕಮು ಬೇಕಾದಾಗ ಈ ಖಾತೆಯೊಳಗಿಂದ, ಠೇವುದಾರರು ಬ್ಯಾಂಕಿನವರ ಅಪ್ಪಣೆಯಿಂದ ತೆಗೆಯ ಬಹುದು. ದೊಡ್ಡ ಕಂಪನಿಗಳು, ಸಂಸ್ಥೆಗಳು, ತಮ್ಮ ವ್ಯವಹಾರಕ್ಕನುಸರಿಸಿ ಅದೇ ಹೆಸರಿನ ಒಂದಕ್ಕಿಂತ ಎಷ್ಟೋ ಹೆಚ್ಚಿನ ಖಾತೆಗಳನ್ನು ಇಡಬಹುದು.

ಈ ಖಾತೆಯ ಸ್ವರೂಪ ವ್ಯಾಪಕವಿದ್ದಷ್ಟೇ ತಾಪದಾಯಕವಾದರೂ ಇರುವದರಿಂದ ಅದರ ನಿಯಮಗಳಾದರೂ ತಕ್ಕಷ್ಟು ವ್ಯಾಪಕವಾದದ್ದಿರುವವು. ಆದ್ದರಿಂದ ಈ ಖಾತೆಯ ಕೆಲವು ಮಹತ್ವವಾದ ಸಂಗತಿಗಳ ಬಗೆಗೆ ಅದಷ್ಟು ವಿಸ್ತಾರವಾಗಿ ವಿವರಿಸುವದು ಅವಶ್ಯ.

**೧. ಪರಿಚಯ** ( Introduction ) :—ಬಳಿಕೆಯ (ಚಾಲತಿ) ಖಾತೆಯನ್ನು ಇಡುವ ಕಾಲಕ್ಕೆ ಠೇವುದಾರರು ಬ್ಯಾಂಕಿನವರಿಗೆ ಪರಿಚಿತರಾದವರಿರಬೇಕು. ಪರಿಚಯವಿಲ್ಲದಿದ್ದಾಗ, ಅವರು ಬ್ಯಾಂಕಿನವರಿಗೆ ಪರಿಚಯವಿದ್ದವರನ್ನು ಸಂಗಡ ಕರೆದುಕೊಂಡು ಹೋಗಿ ಖಾತೆಯನ್ನು ಇಡಬೇಕು. ಗುರುತು ಕೊಡುವವರು, ಪರಿಚಯ ಮಾಡಿಕೊಟ್ಟ ಬಗ್ಗೆ, ಹೊಸ ಖಾತೆದಾರರು ಪ್ರಾರಂಭದ ಅರ್ಜಿಯನ್ನು ಬರೆದ ಕಾಗದದ ಮೇಲೆ ಸಹಿ ಮಾಡಬೇಕಾಗುವದು. ಗುರುತಿದ್ದ ಬಗ್ಗೆ ಮಾಡಿದ ಸಹಿಯ ಮೂಲಕ, ಗುರುತು ಕೊಡುವವರು ಕೇವಲ ಪರಿಚಿತರಿದ್ದ ಬಗ್ಗೆಯೇ ಒಪ್ಪಿದಂತಾಗಿ, ಬೇರೆ ಯಾವ ಪ್ರಕಾರದ ಹೊಣೆಗಾರಿಕೆಗೆ ಒಳಗಾಗುವದಿಲ್ಲ. ಪರಿಚಯವಿದ್ದ ಮೂಲಕ ಸಹಿ ಮಾಡಲು ವಿನಂತಿಸಿದಾಗ, ಕೆಲವರು ಹೆದರುವರು. ಈ ಭಯವು ನಿರಾಧಾರವಾದದ್ದು. ಬಳಿಕೆಯ ಖಾತೆಯನ್ನಿಡುವ ಕಾಲಕ್ಕೆ ಠೇವುದಾರರು ಪರಿಚಯವನ್ನು ಸಲ್ಲಿಸುವದು ಅವಶ್ಯವಿರುವದು. ಇದರ ಬಗ್ಗೆ ಇನ್ನೂ ಸವಿಸ್ತಾರವಾಗಿ ಮುಂದೆ ವಿಚಾರಿಸುವೆವು.

**೨. ಪ್ರಾರಂಭದ ಇಡಗಂಟು** ( Initial Deposit ) :— ಬಳಿಕೆಯ ( ಚಾಲತಿ ) ಖಾತೆಯಲ್ಲಿಡತಕ್ಕ ಪ್ರಾರಂಭದ ಇಡಗಂಟು ೩೦೦-೫೦೦ ರೂಪಾಯಿಗಳಿಗಿಂತ ಕಡಿಮೆ ಇರಲಾರದು. ಮತ್ತು ಖಾತೆಯ ಶಿಲ್ಕು ೧೦೦ ರೂಪಾಯಿಗಿಂತ ಕಡಿಮೆ ಇರಕೂಡದು. ಅಂದರೆ ಖಾತೆಯಲ್ಲಿಯ ಶಿಲ್ಕು ಯಾವ ಕಾಲಕ್ಕಾದರೂ ೧೦೦ ರೂಪಾಯಿ ಇರಬೇಬೇಕು. (Maximum balance).

**೩. ಚೆಕ್ ಪುಸ್ತಕ** (Cheque Book) : ಖಾತೆ ಪ್ರಾರಂಭವಾದ ನಂತರ ಠೇವುದಾರರಿಗೆ ಒಂದು ಚೆಕ್ ಬುಕ್ಕು ಕೊಡಲಾಗುವದು. ಅದೇ ಕಾಲಕ್ಕೆ ಠೇವುದಾರರು ಆ ಸಮಯಕ್ಕೆ ಖಾತೆಯಲ್ಲಿ ತುಂಬಿದ ಮತ್ತು

ನಂತರ ತುಂಬುವಗೋಸುಗ ಚಲನ ಪುಸ್ತಕವನ್ನಾದರೂ ಬ್ಯಾಂಕಿನವರು ಬೆಲೆ ಇಲ್ಲದೆ ಕೊಡುವರು.

೪. **ಖಾತೆಯ ಪುಸ್ತಕ** (Pass Book):—ಠೇವುದಾರರು ಬೇಡಿದಂತೆ, ಒಂದು ಖಾತೆ ಬುಕ್ಕು ಕೊಡಲಾಗುವದು. ಅದರಲ್ಲಿ ಖಾತೆಯಲ್ಲಿಯ ಎಲ್ಲ ವ್ಯವಹಾರದ ಟಿಪ್ಪಣಿ ಇರುವದು. ಅದು ಬ್ಯಾಂಕಿನಲ್ಲಿಯ ಖಾತೆಯ ನಕಲು.

೫. **ವಿವಿಧ ಖಾತೆದಾರರು**:—ಬಳಿಕೆಯ (ಚಾಲತಿ) ಖಾತೆಯಲ್ಲಿ ಅನೇಕ ಜನರ ಮತ್ತು ಸಂಸ್ಥೆಗಳ ಸಮಾವೇಶವಾಗಿರುವದರಿಂದ ಬೇರೆ ಬೇರೆ ಖಾತೆದಾರರು ಪ್ರಾರಂಭಕ್ಕೆ ಮತ್ತು ಪ್ರಸಂಗದಂತೆ ಆಗಾಗ್ಗೆ ಬೇರೆ ಬೇರೆ ಅರ್ಜಿಯನ್ನು ಮಾಡಬೇಕಾಗುವದು.

೬. **ಬಳಿಕೆ (ಚಾಲತಿ) ಖಾತೆಯಲ್ಲಿಯ ಸಾಲ** (Overdraft Accounts):—ವ್ಯವಹಾರಸ್ಥರಿಗೆ ಒಂದೊಂದು ಸಮಯಕ್ಕೆ ಹಣದ ಅವಶ್ಯವಿದ್ದಾಗ, ಬಳಿಕೆ (ಚಾಲತಿ) ಖಾತೆಯಲ್ಲಿದ್ದ ಶಿಲ್ಕಿಗಿಂತ ಹೆಚ್ಚಿನ ಹಣವನ್ನು ತೆಗೆಯಲಿಕ್ಕೆ ಅನುಕೂಲತೆಯು ಈ ಖಾತೆಯಲ್ಲಿ ಕೊಡಲಾಗುವದು. ನಾವು ಮೇಲಿನ ಆರು ಕಲಮುಗಳ ಬಗ್ಗೆ ಕ್ರಮಕ್ರಮವಾಗಿ ಇನ್ನು ವಿಸ್ತರಿಸುವಾ.

## ಪರಿಚಯ

ಬ್ಯಾಂಕು ಒಂದು ಮಹತ್ವವಾದ ಸಂಸ್ಥೆಯು. ಅದರ ಅಧಿಕಾರಿಗಳು ಆಗಾಗ್ಗೆ ಬದಲಾಯಿಸುವರು. ನಾವು ವ್ಯವಹಾರವನ್ನು ಇನ್ನೊಬ್ಬರ ಕೂಡ ಮಾಡುವಾಗ ಆ ವ್ಯಕ್ತಿಯ ಬಗ್ಗೆ ಸಾಕಷ್ಟು ಸಂಗತಿ ಗೊತ್ತಿರದೆ ನಾವು ಅದನ್ನು ಮಾಡಲಾರೆವು. ಅದೇ ಮೇರೆಗೆ, ಬ್ಯಾಂಕಿನವರು ಬಳಿಕೆ (ಚಾಲತಿ) ಖಾತೆದಾರರು ಪರಿಚಿತರಿಲ್ಲದವರಿದ್ದರೆ ಅವರಗೂಡ ಖಾತೆಯ ವ್ಯವಹಾರವನ್ನು ಮಾಡಲಾರರು. ಖಾತೆಯು ಸಾಗುತ್ತ ಹೋದಂತೆ ಅನೇಕ ಕಠಿಣ ಪ್ರಸಂಗಗಳು ಬರುವದರಿಂದ ಯೋಗ್ಯ ಠೇವುದಾರರೊಡನೆ, ಬ್ಯಾಂಕು ಬಳಿಕೆಯ ಸಂಬಂಧವನ್ನು ಇಡುವದು ಅವಶ್ಯ.

ಈ ಖಾತೆಯ ದುರುಪಯೋಗವನ್ನಾದರೂ ಅನೇಕ ಜನರು ಮಾಡಿದ್ದರಿಂದ ಕೋರ್ಟಿನ ನ್ಯಾಯಾಧೀಶರು ಬ್ಯಾಂಕಿನವರಿಗೆ ಅನೇಕ ಸಲ ಪರಿಚಯವಿಲ್ಲ ದವರಗೂಡ ವ್ಯವಹಾರ ಮಾಡಿದ್ದಕ್ಕೆ ತೀವ್ರಶಬ್ದದಿಂದ ದೂಷಿಸಿರುವರು. ಮತ್ತು ಈ ರೀತಿಯ ವ್ಯವಹಾರದ ಮೂಲಕ ಅನ್ಯರಿಗೆ ತಟ್ಟಿದ ಹಾನಿಯನ್ನು ತುಂಬುವ ಬಗ್ಗೆ ಆದೇಶಿಸಿರುವರು. ಇನ್ನೊಂದು ಕಾರಣವೇನಂದರೆ ಬಳಿಕೆಯ ಖಾತೆಯನ್ನು ಪ್ರಾರಂಭಿಸಿದ ಕಾಲಕ್ಕೆ ಒಂದು ಚೆಕ್ ಪುಸ್ತಕ ಪಡೆದು ಅದರ ಮುಖಾಂತರವಾಗಿ ಅನೇಕ ಪ್ರಕಾರದ ಅವ್ಯವಹಾರ್ಯ ಕೃತ್ಯ ಗಳನ್ನು ಠೇವುದಾರರು ಮಾಡಬಲ್ಲರು. ಆದ್ದರಿಂದ, ತಮ್ಮ ಸಂಗಡ ಸಂಬಂಧ ವನ್ನು ಹೊಡಲಿಚ್ಛಿಸುವವರು, ತಕ್ಕ ಜನರಿದ್ದ ಬಗ್ಗೆ ನಿಶ್ಚಯಮಾಡಿಕೊಳ್ಳ ಬೇಕು ಮತ್ತು ಪೂರ್ವದಲ್ಲಿ ಪರಿಚಿತರಿದ್ದವರ ಹೇಳಿಕೆಯನ್ನು ಸಹಿಯ ಮುಖಾಂತರ ಪಡೆದು ಹೊಸ ಖಾತೆಯನ್ನು ಪ್ರಾರಂಭಿಸಬೇಕೆಂಬ ರೂಢಿಯು ಬಂದಿದೆ. ಇದಕ್ಕೆ ಹೊಂದಿದ ಒಂದು ಅನುಭವವನ್ನು ನಾವು ಹೇಳುವೆವು. ಯುದ್ಧಕಾಲದಲ್ಲಿ ಹೊರಟ ಒಂದು ಬ್ಯಾಂಕಿನವರು ಒಬ್ಬ ಠೇವುದಾರನ ಬಳಿಕೆಯ ಖಾತೆಯನ್ನು ಸ್ವೀಕರಿಸಿದರು. ಅವನು ತೀರ ಅಪರಿಚಿತನು ಬ್ಯಾಂಕಿನ ನಿಯಮಗಳನ್ನು ಬಲ್ಲವನು. ಪ್ರಾರಂಭದಲ್ಲಿಡಬೇಕಾದ ೩೦೦ ರೂ. ಗಳನ್ನು ತುಂಬಿ ಖಾತೆಯನ್ನು ಪ್ರಾರಂಭಿಸಿದನು. ಅದೇ ದಿನ ಮಧ್ಯಾಹ್ನಕ್ಕೆ ಎರಡು ಇತರ ಬ್ಯಾಂಕುಗಳ ಮೇಲಿನ ಚೆಕ್ಕುಗಳನ್ನು ತನ್ನ ಖಾತೆಯಲ್ಲಿ ಜಮಾಮಾಡಿದನು. ಆ ದಿನದ ಕೊನೆಗೆ ಆತನ ಖಾತೆಯಲ್ಲಿ ಒಟ್ಟು ೨೦೦೦ ರೂಪಾಯಿ ಶಿಲ್ಕು ಉಳಿಯಿತು. ಮರುದಿನ ಬೆಳಗ್ಗೆ ಸರಿಯಾಗಿ ಬ್ಯಾಂಕಿನ ವ್ಯವಹಾರವು ಪ್ರಾರಂಭವಾಗುವ ಸಮಯಕ್ಕೆ ಬಂದು ೧೯೦೦ ರೂಪಾಯಿ ಗಳನ್ನು ತೆಗೆದನು. ಮತ್ತು ನಿಯಮದ ಮೇರೆಗೆ ೧೦೦ ರೂಪಾಯಿ ಶಿಲ್ಕು ಇದ್ದಕಾರಣ ಬ್ಯಾಂಕಿನ ಅಧಿಕಾರಿಗಳು ಅಡ್ಡಿಯಿಲ್ಲದೆ ೧೯೦೦ ರೂಪಾಯಿ ಗಳನ್ನು ಕೊಟ್ಟರು. ನಾಲ್ಕಾರು ದಿನಗಳನಂತರ ಈ ಖಾತೇದಾರನು ಜಮಾ ಮಾಡಿದ ಹಣದಲ್ಲಿ ೧೫೦೦ ರೂಪಾಯಿಗಳ ಚೆಕ್ಕುಗಳೆರಡು ಇದ್ದವು. ಅವು ಕಳವಿನವೆಂದು ಕಂಡುಬಂದಿತು. ಈ ಪ್ರಕರಣವು ಕೋರ್ಟನ್ನು ಕಂಡಿತು. ಮತ್ತು ಯೋಗ್ಯ ವಿಚಾರಮಾಡದೆ ಆ ಠೇವುದಾರನ ಖಾತೆಯನ್ನು ಇಟ್ಟುಕೊಂ ಡದ್ದಕ್ಕೆ ಬ್ಯಾಂಕಿನವರು ಕೋರ್ಟಿನ ಶಿಕ್ಷೆಗೆ ಪಾತ್ರರಾದರು. ಮತ್ತು ಚೆಕ್ಕು

ಗಳನ್ನು ವಸೂಲಮಾಡಿದ ಮೂಲಕ ಕೈಯಿಂದ ಪೂರ್ಣ ಹಣವನ್ನಾದರೂ ಅವರಿಗೆ ಕೊಡಬೇಕಾಯಿತು. ಆ ಖಾತೆಯ ಠೇವುದಾರನು ಸಿಗದೆಹೋದನು. ಪರಿಚಿತನಿದ್ದರೆ ಇಂಥಪ್ರಸಂಗದಲ್ಲಿ ಆತನನ್ನು ಮುಂದೆ ಮಾಡಬಹುದಾಗಿತ್ತು. ಇಲ್ಲವೇ ಆತನ ಪರಿಚಯ ಕೊಟ್ಟವರ ಸಹಾಯದಿಂದ ಅವನ ಶೋಧನನ್ನಾದರೂ ಮಾಡಬಹುದಾಗಿತ್ತು. ಈ ವಿಷಯದಲ್ಲಿ ಯಾವ ಮಾರ್ಗವೂ ಇಲ್ಲದ್ದರಿಂದ ಬ್ಯಾಂಕು ರೂಢಿಯನ್ನುಲ್ಲಂಘಿಸಿ ಖಾತೆಯನ್ನಿಟ್ಟ ಕಾರಣ ದೋಷಕ್ಕೆ ಗುರಿಯಾಯಿತು. ಆದ್ದರಿಂದ ಎಲ್ಲರೂ ಬ್ಯಾಂಕುಗಳ ನಿಯಮಕ್ಕೆ ಅನುಸರಿಸಿ ನಡೆಯಬೇಕು. ನಿಯಮಗಳೆಲ್ಲ ವ್ಯವಹಾರದಲ್ಲಿ ಬಂದ ಅನುಭವದಿಂದಲೇ ಬರೆದಿಡಲಾಗಿರುವವು.

ಒಮ್ಮೊಮ್ಮೆ ಪರಿಚಯವನ್ನು ಹೇಗೆ ಪಡೆಯಬೇಕೆಂಬ ಬಗ್ಗೆ ಪ್ರಶ್ನೆ ಹುಟ್ಟುವದು. ಇದರ ಒಂದು ಮಾರ್ಗವೆಂದರೆ, ಹೊಸ ಖಾತೆದಾರರು ತಮ್ಮ ವ್ಯವಸಾಯಬಂಧುಗಳ ಕೆಲವು ಹೆಸರುಗಳನ್ನು ಸೂಚಿಸಿದಾಗ ಬ್ಯಾಂಕಿನವರು ತಮಗೆ ಪರಿಚಿತರಿದ್ದವರಲ್ಲಿ ಯಾರಾದರೊಬ್ಬರ ಸಹಿಯು ನಡೆಯಬಹುದೆಂದು ಸೂಚಿಸುವದು. ಹೀಗೆ ಪರಸ್ಪರ ಸಹಕಾರ್ಯದಿಂದ ಈ ಪ್ರಶ್ನೆಯ ಉತ್ತರ ಹೊರಡುವದು.

ಕೆಲವು ಖಾತೆದಾರರಿಗೆ ತಮ್ಮ ವ್ಯವಹಾರವು ಇನ್ನೊಬ್ಬರಿಗೆ ಗೊತ್ತಾಗಬಾರದೆಂದು ಮನಸ್ಸಿನಲ್ಲಿರುವದು. ಆದಕಾರಣ, ಪರಿಚಯವನ್ನು ದೊರಕಿಸುವ ಕ್ರಮದಲ್ಲಿ ಇಡತಕ್ಕ ಬ್ಯಾಂಕಿನ ಖಾತೆಯಬಗ್ಗೆ ಇನ್ನೊಬ್ಬನಿಗೆ ಗೊತ್ತಾಗುವ ಸಂಭವ ಇರುವದೆಂದು ಸಾಶಂಕಿತರಾಗುವರು. ಬ್ಯಾಂಕಿನ ಮುಖಾಂತರವಾಗಿ ವ್ಯವಹಾರ ಮಾಡುವದು ಅತ್ಯವಶ್ಯಕವಾದುದರಿಂದ ಮತ್ತು ಸುರಕ್ಷಿತವಾದುದರಿಂದ ಮತ್ತೊಬ್ಬರ ಪರಿಚಯವನ್ನು ಇದಕ್ಕೋಸ್ಕರ ದೊರಕಿಸುವದರಲ್ಲಿ ಯಾವದೂ ಅಡ್ಡಿ ಬಾರದು. ಬ್ಯಾಂಕಿನಲ್ಲಿ ನಮ್ಮ ಖಾತೆಯಿದ್ದ ಸಂಗತಿಯು ನನ್ನ ಮಿತ್ರನಿಗೆ ಗೊತ್ತಾದಲ್ಲಿ ಏನು ಭಯವು? ಪರಿಚಯ ಕೊಡುವವನಾದರೂ ಅದೇ ಬ್ಯಾಂಕಿನ ಖಾತೆದಾರನಿರುವದರಿಂದ ಅವನ ಗುರುತು ದೊರಕಿಸಿದಲ್ಲಿ ಯಾವ ಬಗೆಯ ಗುಟ್ಟಿನ ಮಾತು ಗೊತ್ತಾದಂತಾಗುವದು?

## ಪ್ರಾರಂಭದ ಠೇವು (Initial Deposit)

ಚಾಲತಿ ಖಾತೆಯನ್ನು ಪ್ರಾರಂಭಿಸುವಾಗ ೩೦೦/೫೦೦ ರೂಪಾಯಿಯ ರೋಖ ಠೇವು ಇಡಬೇಕಾಗುವದು. ಕೇವಲ ಇನ್ನೊಬ್ಬರ ಚೆಕ್ಕನ್ನು ಕೊಟ್ಟರೆ ಬ್ಯಾಂಕಿನವರು ಖಾತೆಯನ್ನು ಇಡಲಿಕ್ಕೆ ಒಪ್ಪುವದಿಲ್ಲ. ಚೆಕ್ಕಿನ ಹಣವನ್ನು ದೊರಕಿಸುವದಕ್ಕಾಗಿಯೇ ಖಾತೆಯನ್ನಿಟ್ಟಂತಾಗುವದು. ಬಂದ ಖಾತೆದಾರರು, ತಮ್ಮಗೂಡ ಚಿರಕಾಲ ವ್ಯವಹಾರ ಮಾಡಬೇಕೆಂಬುದೊಂದೇ ಉದ್ದಿಷ್ಟ. ಆದಕಾರಣ ಪ್ರಾರಂಭದ ಠೇವು ೩೦೦/೫೦೦ ರೂಪಾಯಿ ರೋಖ ಇರತಕ್ಕದ್ದೆಂದು ನಿಯಮವಿದೆ. ಆನಂತರ ಚೆಕ್ಕುಗಳ ವ್ಯವಹಾರವು ರೂಢಿಯಂತೆ ಸಾಗುವದು, ಮತ್ತು ಬ್ಯಾಂಕಿನವರು ಖಾತೆದಾರರ ಸೌಕರ್ಯಗಳ ಬಗ್ಗೆ ವಿಶೇಷ ತತ್ಪರರಾಗುವರು.

ಬಳಿಕೆ (ಚಾಲತಿ) ಖಾತೆಯಲ್ಲಿ ತುಂಬಬೇಕಾದ ಪ್ರಾರಂಭದ ಹಣವು ದೊಡ್ಡದಿದ್ದು ಖಾತೆಯ ಶಿಲ್ಕಿನ ಮೇಲೆ ದೊರಕುವ ಬಡ್ಡಿಯ ದರವು ತೀರ ಕಡಿಮೆಯಾದದ್ದಿರುವದು. ಮತ್ತು ಖಾತೆಯಲ್ಲಿ ೧೦೦ ರೂಪಾಯಿಗಿಂತ ಕಡಿಮೆ ಶಿಲ್ಕು ಯಾವ ಕಾಲಕ್ಕೂ ಇರಕೂಡದೆಂದು ನಿಯಮ. ಬ್ಯಾಂಕಿನ ಎಲ್ಲ ಖಾತೆಗಳಲ್ಲಿ ಚಾಲತಿ ಖಾತೆಯು ಬಹು ಮಹತ್ವದ್ದಿರುವದು. ಈ ಖಾತೆಗೆ ಹೊಂದಿದ ಬ್ಯಾಂಕಿನ ಫಾರ್ಮುಗಳು, ಚಲನ ಪುಸ್ತಕಗಳು, ಚೆಕ್ ಪುಸ್ತಕಗಳು, ಮತ್ತು ಖಾತೇದಾರರಗೂಡ ಆಗಾಗ್ಗೆ ಮಾಡತಕ್ಕ ಪತ್ರವ್ಯವಹಾರವು ಖಾತೆಯ ಮುಖ್ಯ ಅಂಗಗಳು. ಇದನ್ನೆಲ್ಲ ಬ್ಯಾಂಕನವರೇ ವಿನಾಮೂಲ್ಯ ಮಾಡತಕ್ಕದ್ದು. ಈ ಖಾತೆಯು ಎಲ್ಲರಿಗೂ ಎಲ್ಲ ಪ್ರಸಂಗಗಳಲ್ಲಿ ಉಪಯುಕ್ತವಾದದ್ದರಿಂದ ವ್ಯಾಪಾರಿಗಳಿಗೂ, ಸಂಸ್ಥೆಯ ಚಾಲಕರಿಗೂ ಬೇಕಾದದ್ದು. ಆದ್ದರಿಂದ ಎಲ್ಲ ಬ್ಯಾಂಕುಗಳಲ್ಲಿ ಚಾಲತಿ ಖಾತೆಗಳೇ ಬಹಳವಿರುವವು. ಖಾತೆಯ ವಹಿಗಳನ್ನು ಬರೆಯುವವರಾದರೂ ಬಹಳ ಜನರು. ಬರೆದದ್ದನ್ನು ದಿನ್ನಾಲು ಪರೀಕ್ಷಿಸುವ ಅಧಿಕಾರಿಗಳಿರುವರು. ಇದನ್ನೆಲ್ಲ ಸಾಗಿಸುವದಕ್ಕೆ ಬಹಳ ಖರ್ಚು ಹತ್ತುವದು. ಖಾತೆದಾರರ ಪ್ರಾರಂಭದ ಠೇವು, ಖಾತೆಯಲ್ಲಿ ಸಾಕಷ್ಟು ಶಿಲಕು ಇಲ್ಲದಿದ್ದರೆ ಈ ಖರ್ಚು ಸಾಗುವಂತಿಲ್ಲ. ಖಾತೆಯು ಸಣ್ಣದಿದ್ದರೂ, ಇಲ್ಲವೇ ದೊಡ್ಡದಿದ್ದರೂ

ಮಾಡಬೇಕಾದ ಕೆಲಸವು ಅಷ್ಟೇ ಇದ್ದುದರಿಂದ, ತೀರ ಸಣ್ಣ ಖಾತೆಯ ಮೇಲೆಯೂ ಬಹಳ ಖರ್ಚು ಮಾಡುವ ಪ್ರಸಂಗ ಬರುವದು.

ಬಳಿಕ ಖಾತೆಯಲ್ಲಿಯ ಶಿಲ್ಕಿನಲ್ಲಿಯ ಹಣವು ಖಾತೇದಾರರು ಬೇಡಿದಂತೆ ಸಿಗಬಹುದು. ಶಿಲ್ಕಿನ ಇಂತಿಷ್ಟು ಭಾಗವನ್ನೇ ತೆಗೆಯಬೇಕೆಂಬ ನಿರ್ಬಂಧವಿಲ್ಲದ್ದರಿಂದ, ಬ್ಯಾಂಕಿನವರು ತಮ್ಮ ಕೈಯಲ್ಲಿ ಸಾಕಷ್ಟು ರಕಮು ಇಡಲೇ ಬೇಕಾಗುವದು. ಈ ರೀತಿಯಿಂದ ಕಾದಿಟ್ಟ ಹಣವು ಇತರ ಉದ್ಯೋಗದಲ್ಲಿ ತೊಡಗದೇ ಬಿದ್ದಿರುವದರಿಂದ ಅದಕ್ಕೆ ಬಡ್ಡಿಯು ದೊರಕುವದಿಲ್ಲ. ಚಾಲತೀ ಖಾತೆಯಲ್ಲಿದ್ದ ಬ್ಯಾಂಕಿನಲ್ಲಿಯ ಒಟ್ಟು ಶಿಲ್ಕಿನ ಸುಮಾರು ೫೦ ರಿಂದ ೬೦ ಭಾಗ ರಕಮು ಈ ಪ್ರಕಾರ ಕೈಯಲ್ಲಿಯೇ ಉಳಿಯುವದು.

ಮೇಲೆ ತಿಳಿಸಿ ಹೇಳಿದ ಎರಡು ಕಾರಣಗಳ ಮೂಲಕ, ಚಾಲತೀ ಖಾತೆಯ ಪ್ರಾರಂಭದ ಠೇವು ಖಾತೆಯಲ್ಲಿರತಕ್ಕ ಶಿಲ್ಕು ದೊಡ್ಡದಿರದಿದ್ದರೆ ಮತ್ತು ಇಂಥ ಖಾತೆಗಳ ಸಂಖ್ಯೆಯು ಸಾಕಷ್ಟು ಇರದೇ ಹೋದರೆ, ಬ್ಯಾಂಕಿನ ವ್ಯವಹಾರವು ಊರ್ಜಿತಾವಸ್ಥೆಯನ್ನು ಕಾಣದು. ಕಾರಣ, ಚಾಲತೀ ಖಾತೆಯು ಪ್ರಚಾರಸ್ವರೂಪದ್ದಿದ್ದು ಆ ಖಾತೆಗಳ ಮೇಲಿನ ಸಾವಿರಾರು ಚೆಕ್ಕುಗಳು ಪೇಟೆಯಲ್ಲಿದ್ದುದ್ದೊಂದು ಬ್ಯಾಂಕಿನ ಬೆಳವಣಿಗೆಯ ಲಕ್ಷಣವು.

## ಚೆಕ್ ಪುಸ್ತಕ (Cheque Books)

ಪ್ರಾರಂಭದ ಠೇವು, ಅರ್ಜಿಯ ಮೇಲಿನ ಸಹಿ, ಮುಂತಾದ ಉಪಚಾರಗಳು ಮುಗಿದ ನಂತರ, ಬ್ಯಾಂಕಿನವರು, ತಾವು ಮುದ್ರಿಸಿಟ್ಟ ಚೆಕ್ ಪುಸ್ತಕವನ್ನು ಕೊಡುವರು. ಚೆಕ್ ಮತ್ತು ಚೆಕ್ ಪುಸ್ತಕ ಬ್ಯಾಂಕಿನ ವ್ಯವಹಾರದ ಮೂಲ ತತ್ವವಿರುವದು. ಬ್ಯಾಂಕಿನ ಹೊರತಾಗಿ ಯಾವ ಇತರ ಸಂಸ್ಥೆಯೂ ಚೆಕ್ಕಿನ ವ್ಯವಹಾರವನ್ನು ಮಾಡಲಾರದು. ಇದೊಂದು ಈ ಸಂಸ್ಥೆಯ ವೈಶಿಷ್ಟ್ಯವು. ನಮ್ಮ ಹತ್ತರ ಇದ್ದ ಚೆಕ್ ಪುಸ್ತಕವು ಬ್ಯಾಂಕಿನಲ್ಲಿ ಖಾತೆಯಿದ್ದ ಸಾಕ್ಷಿಯು. ಅದರಲ್ಲಿಯ ಒಂದು ಚೆಕ್ಕು ಬರೆದು ಇನ್ನೊಬ್ಬರಿಗೆ ಕೊಟ್ಟರೆ ಖಾತೆಯಲ್ಲಿ ಹಣವಿದ್ದ ಬಗ್ಗೆ ಇನ್ನೊಂದು ಸಾಕ್ಷಿಯು. ಇದರಿಂದ ಚೆಕ್ ಪುಸ್ತಕ ಮತ್ತು ಅದರಲ್ಲಿಯ ಚೆಕ್ಕುಗಳ ಮಹತ್ವವು ಕಂಡು ಬರುವಂತಿದೆ.

ಚಾಲತಿ ಖಾತೆಯೂ ಅದಕ್ಕೆ ಸಂಬಂಧಿಸಿದ ಚೆಕ್ಕುಗಳೂ ಪಾಶ್ಚಿಮಾತ್ಯರನ್ನು ಅನುಕರಿಸಿ ನಾವು ಸ್ವೀಕರಿಸಿದ್ದರಿಂದ, ಚೆಕ್ ಫಾರ್ಮಿನಲ್ಲಿಯ ಬರೆಹವು ಇನ್ನೂ ಕೆಲಕಾಲ ಇಂಗ್ರೇಜಿ ಭಾಷೆಯಲ್ಲಿಯೇ ನಡೆಯಬಹುದೆಂದು ತೋರುತ್ತದೆ. ಬ್ಯಾಂಕಿಂಗ ಸಂಸ್ಥೆಯ ಮೂಲಘಟನೆಯು, ಪಾಶ್ಚಿಮಾತ್ಯರ ಅನುಕರಣವೇ. ಖಾತೆದಾರರು ಈಗಿನ ರೂಢಿಯಲ್ಲಿಪ್ಪ ಚೆಕ್ಕಿನ ವಿಷಯಕ್ಕೆ ಕೆಲವು ಸಂಗತಿಗಳನ್ನು ತಿಳಿದುಕೊಳ್ಳಬೇಕು.

ಚಾಲತಿ ಖಾತೆಯು ಪ್ರಾರಂಭವಾದ ನಂತರ ಖಾತೆದಾರರಿಗೆ ೧೫-೨೦ ಪುಟಗಳಿದ್ದ ಒಂದು ಚೆಕ್ ಪುಸ್ತಕ ಕೊಡಲಾಗುವದು ಖಾತೆಯು ಬೆಳೆಯುತ್ತ ಹೋಗಿ ಮೇಲಿಂದ ಮೇಲೆ ಚೆಕ್ಕುಗಳನ್ನು ಬರೆಯುವ ಪ್ರಸಂಗ ಬಂದದ್ದು ಕಂಡುಬಂದರೆ, ೫೦ ಪುಟಗಳ ಪುಸ್ತಕವನ್ನೂ ಖಾತೆದಾರರು ಬೇಡಬಹುದು. ಪ್ರತಿಯೊಂದು ಪುಸ್ತಕದ ಮೇಲೆ ಮತ್ತು ಪುಟದ ಹಿಂಭಾಗದಲ್ಲಿ ಖಾತೇದಾರರಿಗೆ ಕೆಲವು ಸೂಚನೆಗಳು ಕೊಡಲ್ಪಟ್ಟಿರುವವು. ಅವುಗಳಲ್ಲಿ ಮಹತ್ವವಾದ ಸೂಚನೆಯು ಎಂದರೆ, ನಾವು ಪಡೆದ ಪುಸ್ತಕವನ್ನು ಸುರಕ್ಷಿತವಾಗಿ ಕಾದಿಡತಕ್ಕದ್ದು ಮತ್ತು ಚೆಕ್ ಬರೆದ ನಂತರ ಕ್ರಾಸ್ (Crossing) ಮಾಡಬೇಕಾದಾಗ, ಕ್ರಾಸಿಂಗದ ಎರಡೂ ರೇಷೆಗಳು ಸ್ಪಷ್ಟವಾಗಿ ಕಾಣುವಂತೆ ಇರತಕ್ಕದ್ದು.

ನಾವು ಪಡೆದ ಚೆಕ್ ಪುಸ್ತಕವನ್ನು ಚನ್ನಾಗಿ ಕಾದಿಡದೇ, ಅತ್ತಿತ್ತ ಒಗೆದರೆ ಅದನ್ನು ಎರಡನೆಯವರು ಕದಿಯುವ ಸಂಭವವಿರುವದು. ಮತ್ತು ಖಾತೇದಾರರ ಸಹಿಯನ್ನು ಚನ್ನಾಗಿ ನೆನಪಿನಲ್ಲಿಟ್ಟು, ಆ ಪುಸ್ತಕದಲ್ಲಿಯ ಒಂದು ಪುಟದ ಮೇಲೆ ಬರೆದು ಹಣವನ್ನಾದರೂ ಕಳ್ಳನು ತೆಗೆಯಬಹುದು. ಈ ರೀತಿಯಿಂದ ಕಳುವಾದ ಅನೇಕ ಅನುಭವಗಳು ನಮಗೆ ಗೊತ್ತುಂಟು. ಚೆಕ್ಕು ಸರಿಯಾಗಿ ತುಂಬಿ, ಬ್ಯಾಂಕಿಗೆ ಮೊದಲು ಅರ್ಪಿಸಿದಂತೆ ಸಹಿ ಮಾಡಿದರೆ ಬ್ಯಾಂಕಿನವರು ಹಣವನ್ನು ಕೊಟ್ಟುಬಿಡುವರು. ಕೊನೆಗೆ ಇದರ ಮೋಸವು ಖಾತೆದಾರರದೇ. ಆದ ಕಾರಣ ಚೆಕ್ ಪುಸ್ತಕವನ್ನು ಯಾವಾಗಲೂ ಭದ್ರವಾಗಿ ಕಾದಿಡುವದು ಉತ್ತಮವಾದ ಮಾರ್ಗವು.

ಚೆಕ್ಕನ್ನು ಸರಿಯಾಗಿ ಬರೆಯದಿದ್ದರೆ ನಡೆಯುವಂತಿಲ್ಲ. ಅದರ ಮುಖ್ಯ ಅಂಗಗಳನ್ನು ನಾವು ಚೆನ್ನಾಗಿ ತಿಳಿದುಕೊಳ್ಳಬೇಕು. ಚೆಕ್ಕು

ಅಂದರೆ ಖಾತೇದಾರರು ಬ್ಯಾಂಕಿನವರಿಗೆ ಬರೆದ ಆಜ್ಞಾಪತ್ರವು. ಅದರಲ್ಲಿ ಬರೆದಂತೆ ಬ್ಯಾಂಕಿನವರು ಅದನ್ನು ಒಯ್ದುವನಿಗೆ ಇಂತಿಷ್ಟು ಹಣ ಕೊಡ ಬೇಕೆಂದು ಬರೆದ ಆದೇಶವು. ಆದ್ದರಿಂದ ಕೊಟ್ಟ ಆದೇಶವು ತೀರ ಸ್ಪಷ್ಟ ವಾದದ್ದಿರಬೇಕಾಗುವದು. ಅದರಲ್ಲಿ ಸಂದೇಹಕ್ಕೆ ಸ್ಥಾನವಿಲ್ಲ.

ಚೆಕ್ಕು ಕೆಳಗೆ ವಿವರಿಸಿದ ಮೇರೆಗೆ ಇರುವದು :—

| | |
|---|---|
| No. ———— (೧)<br>ನಂ. | Date ———— (೨)<br>ತಾರೀಖು |
| ———— BANK, LTD. ಬ್ಯಾಂಕಿನ ಹೆಸರು (೩)<br>ಆಫೀಸ—ಶಹರ (೪) | |
| Pay ————<br>ಹಣ ಮುಟ್ಟಬೇಕಾದವರ ಹೆಸರು (೫) | Bearer (೬)<br>Order (೭) |
| Rupees ————<br>ರೂಪಾಯಿ, ಆಣೆ, ಪೈ [ಅಕ್ಷರದಲ್ಲಿ] (೮) | |
| Rs. ————<br>ರೂಪಾಯಿ, ಆಣೆ, ಪೈ [ಅಂಕಿಯಲ್ಲಿ] (೯) | ಸಹಿ ಮಾಡತಕ್ಕ ಸ್ಥಳ (೧೦) |

ಬ್ಯಾಂಕಿನವರು ಚೆಕ್ ಪುಸ್ತಕಗಳನ್ನು ಒಮ್ಮೆಲೇ ಮುದ್ರಿಸಿರುವ ದರಿಂದ ಪ್ರತಿ ಒಂದು ಪುಸ್ತಕದಲ್ಲಿಯ ಪುಟಗಳಿಗೆ ಕ್ರಮವಾಗಿ ನಂಬರು ಗಳನ್ನು ಹಾಕುವರು. ಮುದ್ರಣಾಲಯದಿಂದ ಪುಸ್ತಕಗಳು ಬ್ಯಾಂಕಿಗೆ ಬಂದ ಕೂಡಲೆ ಬೇರೆ ಬೇರೆ ಪುಟಗಳ ಪುಸ್ತಕಗಳನ್ನು ವಿಂಗಡಿಸಿ, ಎಲ್ಲ ಪುಸ್ತಕಗಳ ನಂಬರುಗಳನ್ನು ಒಂದು ರಜಿಸ್ಟರದಲ್ಲಿ ಬರೆದಿಟ್ಟು, ಪುಸ್ತಕ ಮುಟ್ಟಿದ ಬಗ್ಗೆ ಖಾತೇದಾರರ ಸಹಿಯನ್ನು ಪಡೆಯುವರು.

೧. ಚೆಕ್ಕಿನ ಎಡಭಾಗದ ಮೇಲ್ಮೂಲೆಯಲ್ಲಿಯ ನಂಬರು ಇದರಲ್ಲಿಯ ಒಂದು ನಂಬರವಿರುವದು.

೨. ಚೆಕ್ಕನ್ನು ಬರೆಯುವ ಕಾಲಕ್ಕೆ ಖಾತೇದಾರರು ಈ ಸ್ಥಳದಲ್ಲಿ ತಾವು ಚೆಕ್ಕು ಬರೆದ ತಾರೀಖು ಬರೆಯಬೇಕು.

೩. ಇದು ಮುಖ್ಯ ಬ್ಯಾಂಕಿನ ಹೆಸರು.

೪. ಈ ಸ್ಥಳದಲ್ಲಿ ಮುಖ್ಯ ಬ್ಯಾಂಕಿನ ಶಾಖೆಯ ಹೆಸರು ಮತ್ತು ಆ ಶಾಖೆಯು ಇದ್ದ ಶಹರದಲ್ಲಿಯ ವಿಳಾಸ ಮುದ್ರಿಸಿದ್ದಿರುವದು.

೫. ಇಲ್ಲಿ ಬರೆದವನಿಗೆ, ಅಥವಾ ಸಂಸ್ಥೆಗೆ ಕಂಪನಿಗೆ ಚೆಕ್ಕಿನ ಹಣವನ್ನು ಕೊಡಬೇಕೆಂದು ಅಪ್ಪಣೆ. ರೂಢಿಯಲ್ಲಿ 'Self' ಅಂದರೆ 'ನಮಗೆ' ಅಂತ ಬಹಳ ಜನರು ಬರೆಯುವರು. ಅದರ ಅರ್ಥವೇನಂದರೆ 'ನಮಗೆ ಹಣವನ್ನು ಕೊಟ್ಟುಬಿಡಿ'. 'ಇಂಥವರಿಗೆಯೇ' ಅಂತಾ ನಾವು ಹೇಳಲಾರೆವು. ಮಾತ್ರ ವ್ಯವಹಾರದಲ್ಲಿ ಯಾವುದೇ ಕಂಪನಿಗಾಗಲೀ, ಸಂಸ್ಥೆಗಾಗಲೀ ಹಣವನ್ನು ಕೊಡಬೇಕಾದಾಗ, ಆ ಆ ಕಂಪನಿ ಮತ್ತು ಸಂಸ್ಥೆಯ ಹೆಸರನ್ನು ಬರೆಯುವದು ವಿಹಿತವು. ಕಾರಣ ಈ ಕಂಪನಿಯವರ ಅಥವಾ ಸಂಸ್ಥೆಯವರ ಬ್ಯಾಂಕ್ ಖಾತೆಗಳು ಇದ್ದೇ ಇರುವವು. ಮತ್ತು ಅವರು ತಮಗೆ ಮುಟ್ಟಿದ ಚೆಕ್ಕುಗಳ ಹಣವನ್ನು ತಮ್ಮ ತಮ್ಮ ಖಾತೆಗಳ ಮುಖಾಂತರವಾಗಿಯೇ ದೊರಕಿಸುವರು.

೬. 'Bearer' (ಬೆಆರರ್) 'ಚೆಕ್ಕನ್ನು ತಂದವನು' ಅಂತಾ ಈ ಶಬ್ದದ ಅರ್ಥವು ಈ ಶಬ್ದದ ಹಿಂಭಾಗದಲ್ಲಿದ್ದ ಹೆಸರಿನವನು ಅಥವಾ ಈ ಚೆಕ್ಕನ್ನು ಪಡೆದವನಿಗೆ ಹಣವನ್ನು ಕೊಡಬೇಕೆಂಬ ಆದೇಶವು.

೭. 'Order' (ಆರ್ಡರ) 'ಈ ಚೆಕ್ಕು ಪಡೆದವನ ಆದೇಶದ ಪ್ರಕಾರ' ಅಂತಾ ಕೊಟ್ಟ ಅಪ್ಪಣೆ. ಅಂದರೆ ಈ ಚೆಕ್ಕನ್ನು ತಂದವನು ತಮ್ಮ ಪರಿಚಯದವನಿದ್ದರೆ ಮತ್ತು 'Pay' ಅಂತಾ ಬರೆದ ಶಬ್ದದ ಮುಂದೆ ಬರೆದವರು ಚೆಕ್ಕಿನ ಹಿಂಭಾಗದಲ್ಲಿ ಸರಿಯಾಗಿ ಸಹಿ ಮಾಡಿದ್ದರೆ ಚೆಕ್ಕಿನ ಹಣವನ್ನು ಕೊಡಬೇಕೆಂದು ವಿಶಿಷ್ಟ ಸ್ವರೂಪದ ಆದೇಶವು. ಮೇಲೆ ಕಲಮು (೬) 'Bearer' ಈ ಶಬ್ದವನ್ನು ಕೇವಲ ರೇಷೆ ಎಳೆದು ಬಿಟ್ಟರೆ ಆ ಶಬ್ದವು ಇಲ್ಲದಂತಾಗಿ ಚೆಕ್ಕಿನ ಸ್ವರೂಪವು ಬದಲಾಗುವದು. ಅದು 'Order' ಚೆಕ್ಕು ಆಗುವದು. ಒಂದು ಸಲ ತಪ್ಪಿ ಠೇವುದಾರರು ಎರಡೂ ಶಬ್ದಗಳನ್ನು ('Bearer' ಮತ್ತು 'Order') ಇಲ್ಲದಂತಾಗಿ ಮಾಡಿದರೆ ಅವರು ಬ್ಯಾಂಕಿನವರಿಗೆ ಕೊಟ್ಟ ಆದೇಶವು ಅಸ್ಪಷ್ಟವಾದದ್ದಾಗುವದು. ಮತ್ತು ಚೆಕ್ಕು ತಂದವನಿಗೆ ಹಣವು ಸಿಗದೇ ಹೋಗುವದು.

೮–೯. ಈ ಸ್ಥಳದಲ್ಲಿ ಅಕ್ಷರದಲ್ಲಿ ರೂಪಾಯಿ, ಆಣೆ, ಪೈ ಇದರ ವಿವರಣೆ ಬರೆಯುವದಕ್ಕಿಂತ ಪೂರ್ವದಲ್ಲಿ ಕಲಮು (೯) ನೆಯದರಲ್ಲಿ ಬರೆಯುತಕ್ಕ ಅಂಕಿಯನ್ನು ಮೊದಲು ಬರೆದು ನಂತರ ದಕ್ಷತೆಯಿಂದ ಆ ಅಂಕಿಯನ್ನು ಅಕ್ಷರದಲ್ಲಿ ವಿವರಿಸಬೇಕು.

೧೦. ಠೇವುದಾರರು ಸಹಿ ಮಾಡುವ ಬಗ್ಗೆ ಇಲ್ಲಿ ಸಾಕಷ್ಟು ಸ್ಥಳವನ್ನು ಕಾಯ್ದಿಟ್ಟಿರುವದು.

ಮೇಲೆ ಚೆಕ್ಕಿನ ಹತ್ತು ಮಹತ್ವವಾದ ವಿಷಯಗಳನ್ನು ವಿವರಿಸಿದ ನಂತರ ಅವುಗಳಿಗೆ ಸಂಬಂಧಿಸಿದ ಕೆಲವು ಸಾಮಾನ್ಯ ಮಾತುಗಳನ್ನು ವಿಚಾರ ಮಾಡುವೆವು. ನಮ್ಮಲ್ಲಿಯ ವ್ಯಾಪಾರೀ ಬ್ಯಾಂಕುಗಳ ವ್ಯವಹಾರವು ಇಂಗ್ರೇಜಿ ಭಾಷೆಯ ಮುಖಾಂತರವಾಗಿ ಅನೇಕ ವರುಷದಿಂದ ಸಾಗುತ್ತಿರುವದು. ಪಾಶ್ಚಾತ್ಯ ದೇಶದ ಅನುಕರಣೆಯ ಮೂಲಕ ಬ್ಯಾಂಕಿಂಗದ ಕಲ್ಪನೆಯೂ, ವ್ಯವಹಾರವೂ ನಮ್ಮ ದೇಶದಲ್ಲಿ ನೆಲಗೊಂಡಿತು. ಪ್ರಾರಂಭದಲ್ಲಿ ಬ್ರಿಟಿಶರಿಗೆ ತಮ್ಮ ವ್ಯವಹಾರವನ್ನು ಸ್ಥಿರಗೊಳಿಸಲು ಬ್ಯಾಂಕಿಂಗದ ಅವಶ್ಯಕತೆಯು ಕಂಡುಬಂದಿತು. ಇಂಗ್ಲಂಡದ ಮೂಲ ಬ್ಯಾಂಕಿಂಗ ಕಂಪನಿಗಳ ಜನರೇ ನಮ್ಮ ದೇಶದಲ್ಲಿ ಬಂದು, ಕಂಪನಿಗಳ ವ್ಯವಸ್ಥಾಪಕರಾದರು. ಅವರಿಂದ ನಾವಾದರೂ ಈ ಕಲ್ಪನೆಯನ್ನು ಅನುಕರಿಸಿ ನಮ್ಮಲ್ಲಿಯ ವ್ಯವಹಾರವನ್ನು ಅವರೊಂದಿಗೆ ಹೊಂದಿಸಿ ಬ್ಯಾಂಕಿಂಗ ಮಾಡಹತ್ತಿದೆವು. ಅಂದಿನಿಂದ ಇವತ್ತಿನ ವರೆಗೆ ನಾವು ಅವರು ಹಾಕಿಟ್ಟ ಫಾರ್ಮುಗಳನ್ನು ಚೆಕ್ಕುಗಳನ್ನು ರೂಢಿಯಲ್ಲಿ ತಂದಿರುವೆವು. ನಮ್ಮ ಬ್ಯಾಂಕುಗಳ ಖಾತೇದಾರರಿಗೆ ಇಂಗ್ರೇಜಿ ಭಾಷೆಯ ಜ್ಞಾನವಿಲ್ಲದಿದ್ದರೂ ವ್ಯವಹಾರವು ಮಾತ್ರ ಆ ಭಾಷೆಯಲ್ಲಿಯೇ ಸಾಗುತ್ತ ಹೋಗಿದೆ. ನಮ್ಮಲ್ಲಿಯ ಬ್ಯಾಂಕಿಂಗ ಅಧಿಕಾರಿಗಳು ಇನ್ನೂವರೆಗೆ ಈ ಕ್ರಮವನ್ನು ಹೋಗಲಾಡಿಸುವ ಬಗ್ಗೆ ಯತ್ನಮಾಡಿಲ್ಲ. ಇನ್ನುಮುಂದೆ ಮಾತ್ರ ಅದು ಸಾಗುವಂತಿಲ್ಲ. ಕಾರಣ ಇಂಗ್ರೇಜಿ ಭಾಷೆಯ ಪ್ರಾಧಾನ್ಯತೆಯು ಕಡಿಮೆಯಾಗುತ್ತಾ ಹೋಗಿ ಹತ್ತಿಪ್ಪತ್ತು ವರುಷದಲ್ಲಿ ಅದು ತೀರ ಪರಭಾಷೆಯಾಗುವದು. ಆದ್ದರಿಂದ ನಾವು ಈಗಿನಿಂದಲೇ ಬ್ಯಾಂಕಿನ ವ್ಯವಹಾರವನ್ನು ನಮ್ಮ ಪ್ರಾದೇಶಿಕ ಭಾಷೆಯಲ್ಲಿ ನಡೆಯುವಂತೆ ಪ್ರಯತ್ನ ಮಾಡಬೇಕು.

ಈ ಕಾರ್ಯಭಾಗವು ಸಂಪೂರ್ಣವಾಗುವ ವರೆಗೆ ಇದ್ದ ಕ್ರಮವನ್ನು ಠೇವುದಾರರು ಸಾಗಿಸಬೇಕು. ಈಚೆಗೆ ಕೆಲವು ಸರಕಾರಿ ಬ್ಯಾಂಕಿನವರು ಮತ್ತು ವ್ಯಾಪಾರಿ ಬ್ಯಾಂಕಿನವರು ಕೆಲವು ಫಾರ್ಮುಗಳನ್ನು ನಮ್ಮ ಭಾಷೆಯಲ್ಲಿ ಮುದ್ರಿಸಿರುವರು ಚೆಕ್ಕು ಮಾತ್ರ ಇನ್ನೂ ಚೆಕ್ಕೇ ಉಳಿದಿದೆ. ಆದ್ದರಿಂದ ನಾವು ಇದರ ಅಂಗಗಳನ್ನು ಚೆನ್ನಾಗಿ ಅರಿತುಕೊಂಡು ಅದನ್ನು ಬರೆಯು ವಾಗ ಎಲ್ಲ ಭಾಗಗಳನ್ನು ಸರಿಯಾಗಿ ತುಂಬಬೇಕು. ಉದಾಹರಣೆ:—

೧. ಚೆಕ್ಕಿನಲ್ಲಿ ಬರೆದ ತಾರೀಖು ಮತ್ತು ಅದನ್ನು ಬರೆವ ದಿನದ ತಾರೀಖು ಸಮಾನವಿರತಕ್ಕದ್ದು. ಮುಂದಿನ ದಿನದ ತಾರೀಖು ಹಾಕಿದ ಚೆಕ್ಕಿನ ಹಣವನ್ನು ಆ ತಾರೀಖಿನ ವರೆಗೆ ಬ್ಯಾಂಕಿನವರು ಕೊಡುವದಿಲ್ಲ. ಮತ್ತು ಮುಂದಿನ ತಾರೀಖು ಹಾಕಿ ಚೆಕ್ಕು ಬರೆಯಬಾರದೆಂದು ನಿಯಮ ಉಂಟು. ಹೀಗಿದ್ದರೂ ಕೂಡ, ರೂಢಿಯಲ್ಲಿ ಠೇವುದಾರನು ತಾತ್ಪೂರ್ತಿಕ ಹಣವನ್ನು ದೊರಕಿಸುವ ಆಸೆಯಿಂದ ಮುಂದಿನ ತಾರೀಖು ಹಾಕಿ ಚೆಕ್ಕು ಗಳನ್ನು ತಮ್ಮ ಸಾಲಗಾರರಿಗೆ ಕೊಡುವರು. ಇದು ಅಯೋಗ್ಯವಾದ ಉಪಕ್ರಮವು. ಇಬ್ಬರೂ ತಮ್ಮೊಳಗೆ ಸುಮ್ಮನೆ ಬ್ಯಾಂಕನ್ನು ಎಳೆದಂತೆ ಆಗುವದು. ಮುಂದಿನ ತಾರೀಖು ಹಾಕಿ ಚೆಕ್ಕು ಬರೆಯುವ ಈ ಚಟಕ್ಕೆ ಠೇವುದಾರರು ಒಮ್ಮೆ ಹತ್ತಿದರೆ ಅದು ಕೊನೆಗೆ ತೀರ ಅಪಾಯ ಕರವಾಗುವದು. ಕಾರಣ ಮುಂದಿನ ತಾರೀಖು ಹಾಕಿ ಚೆಕ್ಕನ್ನು ಬರೆದಾಗ ಚೆಕ್ಕಿನ ಹಣವು ಕೈಯಲ್ಲಿರದೆ ಬರೆವ ಸಂಗತಿಯು ಸಿದ್ಧ ವಾದದ್ದಾಗುವದು. ಮತ್ತು ಬರುವ ತಾರೀಖಿನ ದಿನ ಚೆಕ್ಕಿನ ಹಣವನ್ನು ಸಾವುಕಾರನು ಬೇಡಲಿಕ್ಕೆ ಬ್ಯಾಂಕಿಗೆ ಹೋದರೆ ಅದು ನಿಶ್ಚಿತ ವಾಗಿ ದೊರಕೀತೆಂಬುವ ಆಸೆಯು ಕಡಿಮೆ ಆದಿನವಾದರೂ ಚೆಕ್ಕಿನ ಹಣವು ಸಿಗದಿದ್ದರೆ ವ್ಯವಹಾರವು ನಿಂತು ಹೋಗಿ ವಾದವು ಉತ್ಪನ್ನವಾಗಿ ಆ ಪ್ರಕರಣವು ಕೋರ್ಟು ಕಚೇರಿಯವರೆಗೆ ಹೋಗುವದು. ಹಾಗೂ ಬ್ಯಾಂಕಿನ ಚೆಕ್ಕು ವಾದದ ಮುಖ್ಯ ಪುರಾವೆ ಆಗುವದು. ಇದಕ್ಕೆಲ್ಲ ಮುಂದಿನ ತಾರೀಖು ಹಾಕಿ ಚೆಕ್ಕನ್ನು ಬರೆದು ಸಾಲ ಪಡೆಯುವ ಹವ್ಯಾಸವೇ ಈ ಎಲ್ಲ ಅನರ್ಥಕ್ಕೆ ಕಾರಣ. ಸಾಲ ಪಡೆಯುವ ಅನೇಕ ಸಾಧನಗಳು ಇದ್ದಾಗ ಬ್ಯಾಂಕಿನ ಚಕ್ಕನ್ನು ವಿನಾಕಾರಣ ಠೇವುದಾರರು

ಒಂದು ಸಾಧನವನ್ನಾಗಿ ಉಪಯೋಗ ಮಾಡಬಾರದು. ಒಂದು ಬ್ಯಾಂಕಿನ ಖಾತೇದಾರರು ಈ ರೀತಿಯಿಂದ ಅನೇಕ ಚೆಕ್ಕುಗಳನ್ನು ಬರೆದರೆ ಶಿಲ್ಕು ಇಲ್ಲದ ಮೂಲಕ ಈ ತರದ ಚೆಕ್ಕುಗಳು ತಿರುಗಿ ಬಿಡಲ್ಪಟ್ಟರೆ, ಪೇಟೆಯಲ್ಲಿ ಆ ಬ್ಯಾಂಕಿನ ಹೆಸರು ಕೆಡದೆ ಇರಲಾರದು. ತಮ್ಮ ಬ್ಯಾಂಕಿನ ಕೀರ್ತಿಯನ್ನು ಮತ್ತು ಹೆಸರನ್ನು ಕಾಯ್ದಿಡುವದೊಂದು ಖಾತೇದಾರರ ಆದ್ಯ ಕರ್ತವ್ಯವಿರುವದು. ಆದ್ದರಿಂದ ಸುಳ್ಳು ಸಾಲವನ್ನು ಹುಟ್ಟಿಸುವ ಕ್ರಮಕ್ಕೆ ಬ್ಯಾಂಕಿನ ಚೆಕ್ಕು ಸಾಧನವನ್ನಾಗಿ ಉಪಯೋಗಿಸಬಾರದು.

೨. ಚೆಕ್ಕಿನ ಹಣವನ್ನು ಪಡೆಯುವವನ ಹೆಸರನ್ನು ಸ್ಪಷ್ಟವಾಗಿ ಬರೆಯಬೇಕು. ದೊಡ್ಡದಿದ್ದರೆ ಮತ್ತು ಅದು 'Pay' ಮತ್ತು 'Bearer' ಈ ಎರಡೂ ಶಬ್ದಗಳ ಅಂತರದಲ್ಲಿ ಸರಿಯಾಗಿ ಕೂಡದಿದ್ದಾಗ ಬರಹವನ್ನು ಹಾಗೆಯೇ ಮುಂದೆ ಸಾಗಿಸಿದಾಗ ಬರಹವು 'Bearer' ಶಬ್ದದ ಮೇಲಿಂದ ಹೋಗುವದು. ಮತ್ತು ಹೀಗಾಗಿ ಚೆಕ್ಕಿನ ಸ್ವರೂಪವೇ ಬದಲಾಗುವ ಭಯವುಂಟು. ಆದಕಾರಣ ಹೆಸರನ್ನು ಬರೆಯುವಾಗ 'Bearer' ಶಬ್ದದ ಮೇಲೆ ಒಂದು ಗೆರೆ ಹಾಕಿ ಸಹಿ ಮಾಡಬೇಕು. ನಂತರ ಬ್ಯಾಂಕಿನವರು ಯೋಗ್ಯ ಪರಿಚಯವನ್ನು ದೊರಕಿಸಿ ಚೆಕ್ಕಿನ ಹಣವನ್ನು ಕೊಡುವರು.

ಚೆಕ್ಕಿನಿಂದ ಕೊಡಬೇಕಾದ ರಕಮು ತೀರ ಕಡಿಮೆ ಇದ್ದಾಗ ಅಂದರೆ ೧೦-೨೦ ರೂಪಾಯಿ ಕೊಡಬೇಕಾದಲ್ಲಿ ವಿನಾಕಾರಣ 'Bearer' ಶಬ್ದವನ್ನು ಹೋಗಲಾಡಿಸಿ ಹಣವನ್ನು ತೆಗೆದುಕೊಳ್ಳುವವನಿಗೆ ತೊಂದರೆ ಕೊಡಬಾರದು. ಚೆಕ್ಕಿನ ವ್ಯವಹಾರವು ನಮ್ಮ ದೇಶದಲ್ಲಿ ಸಾಕಷ್ಟು ಬೆಳೆದಿಲ್ಲ. ಆದ್ದರಿಂದ ಬ್ಯಾಂಕಿನ ಪ್ರಗತಿಯು ಸಾಕಷ್ಟು ಆಗಿಲ್ಲ. ಈ ತರದ ತೀರ ಸಣ್ಣ ರಕಮಿನ ಚೆಕ್ಕನ್ನು ಕೊಡುತ್ತಾ ಹೋದರೆ ಮತ್ತು ಕಾರಣವಿಲ್ಲದೆ ಅದನ್ನು ಕ್ರಾಸ ಮಾಡಿದರೆ ಅದನ್ನು ಸ್ವೀಕರಿಸುವವನು ಕೇವಲ ಚಿಕ್ಕ ಹಣವನ್ನು ದೊರಕಿಸುವಗೋಸ್ಕರ ಪರಿಚಯವನ್ನು ಹುಡುಕಿಕೊಳ್ಳಬೇಕಾಗುವದು. ಇದೆಲ್ಲ ತೊಂದರೆಯ ಮೂಲಕ ಆತನು ಮತ್ತೊಂದು ಸಲ ಚೆಕ್ಕನ್ನು ಕೊಟ್ಟರೆ ನಿರಾಕರಿಸುವನು. ಈ ಕ್ರಮವು ಇಲ್ಲಿಯೇ ನಿಲ್ಲದೆ ಬ್ಯಾಂಕಿನ ಚೆಕ್ಕು ಅಂದರೆ ತೊಂದರೆಯ ಸಾಧನವೆಂದು ತಿಳಿದು ಬ್ಯಾಂಕಿನಲ್ಲಿ

ಸಹಿಯು ಸ್ಪಷ್ಟವಾದದ್ದಿದ್ದಾಗ ಅದರ ನಕಲು ಇನ್ನೊಬ್ಬನಿಗೆ ಮಾಡಲು ಸುಲಭನಾಗುವದಿಲ್ಲ. ಮತ್ತು ಮೂಲ ಸಹಿಯಾದರೂ ಓಮುಬರೆಯಲಿಕ್ಕೆ ತೀರ ಸ್ಪಷ್ಟನಿದ್ದುದರಿಂದ ಅವೆರಡರಲ್ಲಿಯು ಭೇದವು ಕೂಡಲೇ ಕಂಡು ಬರುವದು.

**ಕ್ರಾಸ್ ಚೆಕ್ಕುಗಳು:** (Bearer's) ಬೇಅರರ್, (Order) ಆರ್ಡರ್ ಇವೆರಡು ಚೆಕ್ಕುಗಳಂತೆ. ಎರಡು ಸಮಾಂತರ ರೇಷೆಗಳನ್ನೆಳೆದ ಚೆಕ್ಕುಗಳೆಂಬ (Crossed Cheques) ಮೂರನೆಯ ಪ್ರಕಾರವಿರುವದು. ಬೇಅರರ್ ಈ ಶಬ್ದವನ್ನು ಬದಲು ಮಾಡಿದರೆ ಚೆಕ್ಕಿನ ಸ್ವರೂಪವು ಬದಲಾಯಿಸುವದು. ಇದು ಮೊದಲನೆಯ ಕ್ರಮ. ಚೆಕ್ಕನ್ನು ಬರೆದು ಸಹಿ ಮಾಡಿದ ನಂತರ ಆ ಫಾರ್ಮಿನ ಮೇಲೆ // ಈ ಪ್ರಕಾರ ಎರಡು ಗೆರೆಗಳನ್ನೆಳೆದರೆ ಅದರ ಸ್ವರೂಪವು ಇನ್ನೂ ಬದಲಾಗುವದು. ಕೇವಲ 'ಬೇಅರರ್' ಇದ್ದರೆ, ಇಲ್ಲವೆ 'ಆರ್ಡರ್' ಇದ್ದರೆ ತಕ್ಕ ನಿಯಮಕ್ಕನುಸರಿಸಿ ಅದರ ಹಣವು ಯಾರಿಗಾದರೂ ಸಿಗುವದು. ಅದನ್ನು ಕ್ರಾಸ್ ಮಾಡಿದರೆ ಮಾತ್ರ ಆ ಚೆಕ್ಕಿನ ಹಣವು ಇನ್ನೊಂದು ಬ್ಯಾಂಕಿನವರಿಗೆಯೇ ಕೊಡಲಾಗುವದು. ಇತರ ವ್ಯಕ್ತಿಗಳಿಗೆ ಅದರ ಹಣವು ಸಿಗುವದಿಲ್ಲ. ಒಂದೇ ಬ್ಯಾಂಕಿನಲ್ಲಿ ಚೆಕ್ಕು ಬರೆದವರ ಮತ್ತು ಚೆಕ್ಕು ಪಡೆದವರ ಖಾತೆಗಳಿದ್ದಾಗ, ಆ ಚೆಕ್ಕಿನಲ್ಲಿಯ ಹಣವು ಒಂದು ಖಾತೆಕ್ಕೆ ಖರ್ಚು ಬರೆದು ಇನ್ನೊಂದು ಖಾತೆಕ್ಕೆ ಜಮಾ ಮಾಡಲಾಗುವದು. ಚೆಕ್ಕು ಪಡೆಯುವವನ ಖಾತೆಯು ಬೇರೊಂದು ಬ್ಯಾಂಕಿನಲ್ಲಿದ್ದರೆ 'ಕ್ರಾಸ್' ಮಾಡಿದ ಚೆಕ್ಕನ್ನು ಇನ್ನೊಂದು ಬ್ಯಾಂಕಿನವರು ಖಾತೇದಾರರ ಬ್ಯಾಂಕಿನಿಂದ ದೊರಕಿಸುವರು.

(i) ಕೇವಲ 'ಬೇಅರರ್' ಚೆಕ್ಕನ್ನು ಖಾತೇದಾರರು ಕೊಟ್ಟಾಗ ಆ ಚೆಕ್ಕಿನಲ್ಲಿ ಬರೆದ ಹಣವನ್ನು ಕೊಡಬೇಕೆಂದು ಬ್ಯಾಂಕಿನವರಿಗೆ ಸಾಮಾನ್ಯ ಆದೇಶವಿರುವದು.

(ii) 'ಬೇಅರರ್' ಈ ಶಬ್ದವನ್ನು ಹೊಡೆದು ಹಾಕಿದರೆ ಕೊಟ್ಟ ಚೆಕ್ಕು 'ಆರ್ಡರು' ಸ್ವರೂಪದ್ದಾಗಿ, ಅದರಲ್ಲಿಯ ಹಣವನ್ನು ಚೆಕ್ಕಿನಲ್ಲಿ ಬರೆದ ವ್ಯಕ್ತಿಯು ಚೆಕ್ಕಿನ ಹಿಂಭಾಗದಲ್ಲಿ ಸಹಿರೂಪದಿಂದ ಅನುಮತಿ ಪಡೆಯಬೇಕೆಂದು ಬ್ಯಾಂಕಿನವರಿಗೆ ಸೂಚಿಸಿದಂತಾಗುವದು.

(iii) 'ಬೇಅರರ್' ಚೆಕ್ಕನ್ನು 'ಕ್ರಾಸ್' ಮಾಡಿದರೆ ಅದರ ಹಣವನ್ನು ಬ್ಯಾಂಕಿಂಗ ಕಂಪನಿಯವರೇ ವಸೂಲ ಮಾಡಬೇಕೆಂದು ನಿರ್ಬಂಧಿಸಿದ್ದಾಗುವದು.

(iv) 'ಆರ್ಡರ' ಚೆಕ್ಕನ್ನು 'ಕ್ರಾಸ್' ಮಾಡಿದಾಗ ಚೆಕ್ಕಿನ ಹಣವನ್ನು ಅದರಲ್ಲಿ ಬರೆದ ಹೆಸರಿನವರ ಅನುಮತಿ ಪಡೆದಿದ್ದು ಬ್ಯಾಂಕಿಂಗ ಕಂಪನಿಗೆಯೇ ಅದರ ಹಣವನ್ನು ಕೊಡಬೇಕೆಂದು ದ್ವಿವಿಧ ಆದೇಶವಿರುವದು.

ನಮ್ಮ ಕಡೆಯಿಂದ ಹಣ ಪಡೆಯುವವನು ಇನ್ನೊಂದು ಬ್ಯಾಂಕಿನ ಅಥವಾ ನಮ್ಮ ಬ್ಯಾಂಕಿನ ಖಾತೇದಾರರಿದ್ದದ್ದು ನಮಗೆ ಗೊತ್ತಿದ್ದರೆ ನಮ್ಮಿಬ್ಬರಲ್ಲಿಯ ವ್ಯವಹಾರವು 'ಕ್ರಾಸ್' ಚೆಕ್ಕುಗಳ ಮುಖಾಂತರ ಸಹಜವಾಗಿ ಸಾಗುವದು. ನಾವು ಕೊಡತಕ್ಕ ರಕಮು ತೀರ ಸಣ್ಣದಿದ್ದಾಗ ಹಣವನ್ನು ತೆಗೆದುಕೊಳ್ಳುವವನು ಅಶಿಕ್ಷಿತನಿದ್ದಾಗ ಆತನು ಬ್ಯಾಂಕಿನ ಖಾತೇದಾರನಿರದೆ ಇದ್ದ ಸಮಯದಲ್ಲಿ, ಆತನಿಗೆ ಹಣವು ಸುಲಭವಾಗಿ ದೊರಕುವಂತೆ ಚೆಕ್ಕಿನ ಸ್ವರೂಪವನ್ನು ವಿನಾಕಾರಣ 'ಆರ್ಡರ' ಮಾಡಿಯಾಗಲಿ, 'ಕ್ರಾಸ್' ಮಾಡಿಯಾಗಲಿ ಬದಲಾಯಿಸಬಾರದು. ಆದರೆ ಆತನಿಗೆ ಕೊಡತಕ್ಕ ರಕಮು ದೊಡ್ಡದಿದ್ದರೆ, ಅದು ಯೋಗ್ಯ ವ್ಯಕ್ತಿಗೆಯೇ ಮುಟ್ಟಬೇಕಾಗಿದ್ದ ಕಾರಣ, ಆ ಚೆಕ್ಕನ್ನು ನಾವು 'ಆರ್ಡರ' ಮಾಡಬಹುದು, ಮತ್ತು ಯೋಗ್ಯಕಂಡಲ್ಲಿ 'ಕ್ರಾಸ್' ಮಾಡಬಹುದು. ಹಣವನ್ನು ಅಂಚೆಯಿಂದ ಕಳಿಸಬೇಕಾದರೆ ನಾವು ಎಲ್ಲ ಚೆಕ್ಕುಗಳನ್ನು 'ಆರ್ಡರ' ಮತ್ತು 'ಕ್ರಾಸ್' ಮಾಡಿ ಕಳಿಸುವದು ವಿಹಿತವಾದದ್ದು.

ಚೆಕ್ಕು ಕ್ರಾಸ್ ಮಾಡುವ ವಿಷಯವೂ ಮಹತ್ವವಾದದ್ದು. ಕೆಲವರು ಚೆಕ್ ಫಾರ್ಮಿನ ಮೂಲೆಯಲ್ಲಿ ತೀರ ಸಂಣದಾದ ಎರಡು ರೇಷೆಗಳನ್ನು ಎಳೆಯುವರು. ಬ್ಯಾಂಕಿನವರು ಇಂಥ ಚೆಕ್ಕನ್ನು ಕೈಯಲ್ಲಿ ಹಿಡಿದಾಗ ಸಾಮಾನ್ಯವಾಗಿ ಹಿಡಿಯುವವರ ಎಡಗೈ ಹೆಬ್ಬಟ್ಟು ಈ ಎರಡೂ ರೇಷೆಗಳ ಮೇಲೆ ಇಡಲಾಗುವದು ಮತ್ತು ಅದರಿಂದ ಎರಡೂ ರೇಷೆಗಳು ಹೆಬ್ಬಟ್ಟಿನಲ್ಲಿ ಅಡಗಿಹೋಗುವವು. ಕಾಣದೆ ಇದ್ದಮೂಲಕ, ಚೆಕ್ಕು 'ಕ್ರಾಸ್' ಮಾಡಿದ್ದರೂ ಸಹಿತ ಒಮ್ಮೊಮ್ಮೆ ಕಣ್ಣುತಪ್ಪಿ ಅದರ ಹಣವು ಯಾರಿಗಾದರೂ

ಸಿಕ್ಕುಹೋಗಬಹುದು. ಆದ್ದರಿಂದ ಮೊದಲು ಚೆಕ್ಕು ಪೂರ್ಣವಾಗಿ ಬರೆಯು ಬೇಕು. ನಂತರ ಚೆಕ್ಕಿನ ಮಧ್ಯಭಾಗದಲ್ಲಿ ಒಂದು ಸಿಟ್ಟಿಸಿಂದ ಎರಡನೆಯ ಸಿಟ್ಟಿನವರೆಗೆ ಎರಡು ದಪ್ಪಾದ ರೇಷೆಗಳನ್ನು ಎಳೆಯುಬೇಕು. ಚೆಕ್ಕಿನಲ್ಲಿ ಬರೆದ ಇತರ ಬರಹದ ಮೇಲೆ ಈ ಗೆರೆಗಳನ್ನು ಹಾಕಿರುವದರಿಂದ ಅವು ಚನ್ನಾಗಿ ಕಾಣುವವು. ಮತ್ತು ಮೋಸ ಮಾಡುವವರಿಗೆ ಅವು ಅಳಿಸಲಿಕ್ಕೆ ಬರುವಂತಿಲ್ಲ. ತೀರ ಸಣ್ಣ ರೇಷೆಗಳನ್ನು ರಸಾಯನ ಸಹಾಯದಿಂದಾಗಲಿ ಅನ್ಯಮಾರ್ಗದಿಂದಾಗಲಿ ಅಳಿಸಿ ಕಳ್ಳರು ಚೆಕ್ಕುಗಳ ಹಣವನ್ನು ದೊರಕಿಸಿದ ಬಗ್ಗೆ ಅನೇಕ ಉದಾಹರಣೆಗಳಿರುವವು. ದಪ್ಪಾದ ರೇಷೆಗಳನ್ನು ಮೊದಲು ಬರೆದು ಆ ಮೇಲೆ ಉಳಿದ ವಿಷಯ ಬರೆದರೆ ರೇಷೆಗಳನ್ನು ಅಳಿಸುವ ಉಪ ಕ್ರಮವು ಸಾಧ್ಯವಾಗುವದಿಲ್ಲ. ಹೀಗೆ ಚೆಕ್ಕುಗಳ ಮೇಲಿನ ಕ್ರಾಸ ಅಳಿಸಿ ಮೋಸಗೊಳಿಸುವ ಶಕ್ಯತೆಯನ್ನು ತೀರ ಇಲ್ಲದಹಾಗೆ ಮಾಡಬೇಕಾದರೆ ಖಾತೇದಾರರು ತಮಗೆ ಚೆಕ್ ಪುಸ್ತಕ ಸಿಕ್ಕಕೂಡಲೆ ಕ್ರಾಸಿಂಗದ ರಬ್ಬರ ಸ್ಟ್ಯಾಂಪ ಹಾಕಿ ಎಲ್ಲ ಫಾರ್ಮುಗಳನ್ನು ಛಾಪಿಸಿಬಿಡಬೇಕು. ಮಾತ್ರ ಇಂಥ ಪುಸ್ತಕದಲ್ಲಿಯ ಚೆಕ್ಕುಗಳನ್ನು ಕೇವಲ ವ್ಯವಹಾರದಲ್ಲಿ ಕೊಡತಕ್ಕ ರಕಮಿನ ಬಗ್ಗೆಯೇ ಉಪಯೋಗಿಸಬೇಕು. ಈಚೆಗೆ ಕೆಲವು ಬ್ಯಾಂಕಿನವರು ಲಿಮಿಟೆಡ್ ಕಂಪನಿಯಂಥ ದೊಡ್ಡ ಖಾತೆದಾರರಿಗೋಸುಗ ಮುದ್ರಿಸಿಟ್ಟ ಚೆಕ್ ಪುಸ್ತಕ ದಲ್ಲಿಯ ಎಲ್ಲ ಫಾರ್ಮುಗಳ ಕ್ರಾಸಿಂಗ ಸಹ ಮುದ್ರಿಸಿದ್ದಿರುವದು.

ಪ್ರತಿಯೊಂದು ಚೆಕ್ ಫಾರ್ಮಿನ ಎಡಭಾಗದಲ್ಲಿ ಸಣ್ಣ ಆಕಾರ ದ್ದೊಂದು ಅದೇ ಚೆಕ್ಕಿನ ನಂಬರವುಳ್ಳ ಒಂದು ಪ್ರತಿರೂಪವಿರುವದು. (Counterfoil) ಮುಖ್ಯ ಚೆಕ್ಕನ್ನು ತುಂಬುವ ಪೂರ್ವದಲ್ಲಿ ಈ ಪ್ರತಿ ರೂಪವನ್ನು ಬರೆಯಬೇಕು. ಅದರಲ್ಲಿಯಾದರೂ ಚೆಕ್ಕಿನಲ್ಲಿ ಬರೆಯತಕ್ಕ ವಿಷಯವನ್ನು ಬರೆದಿಟ್ಟರೆ ಚೆಕ್ ಇಂಥವರಿಗೆ ಕೊಟ್ಟಬಗ್ಗೆ ಟಿಪ್ಪಣಿ ಉಳಿಯು ವದು. ಈ ಪ್ರತಿರೂಪದ ಮೇಲೆಯಾಗಲಿ, ಅದರ ಹಿಂಭಾಗದಲ್ಲಿಯಾಗಲಿ ಚೆಕ್ಕು ಬರೆಯುವಾಗ ಬ್ಯಾಂಕಿನ ಖಾತೇದಲ್ಲಿದ್ದ ಶಿಲ್ಕಿನ ಟಿಪ್ಪಣಿಯನ್ನು ಆಗಾಗ್ಗೆ ಇಡುತ್ತಿರಬೇಕು. ಈ ಟಿಪ್ಪಣಿಯು ಮುಂದಿದ್ದಾಗ ಖಾತೆಯಲ್ಲಿದ್ದ ಹಣಕ್ಕಿಂತ ಹೆಚ್ಚಿನ ರಕಮಿನ ಚೆಕ್ಕು ಕೊಡಲಾಗುವದಿಲ್ಲ. ಈ ತರದ ಟಿಪ್ಪಣಿಯು ಇಲ್ಲದಿದ್ದರೆ ಒಂದು ವೇಳೆ ಹಣವಿದ್ದೀತೆಂಬ ಅನುಮಾನದಿಂದ

ಸಾಕಷ್ಟು ಶಿಲ್ಕು ಇಲ್ಲದೆ ಚೆಕ್ಕು ಬರೆಯಬಹುದಾದ ಸಂಭವವುಂಟು ಬರೆದ ಚೆಕ್ಕು 'ಕ್ರಾಸ್' ಮಾಡಿದ್ದರೆ ಅಥವಾ ಅದನ್ನು ಟಪಾಲು ಮಾರ್ಗವಾಗಿ ಕಳಿಸಿದ್ದರೆ ಅದನ್ನಾದರೂ ಅದರ ಪ್ರತಿರೂಪದ ಹಿಂಭಾಗದಲ್ಲಿ ಬರೆದಿಡ ಬಹುದು. ಕೆಲವರು ಅದೇ ಸ್ಥಳದಲ್ಲಿ ತಾವು ಯಾವ ಕಾರಣದ ಬಗ್ಗೆ ಹಣ ವನ್ನು ಮುಟ್ಟಿಸಿದ್ದ ಸಂಗತಿಯನ್ನಾದರೂ ಬರೆಯುವರು. ಕಾರಣ ಚೆಕ್ಕು ಕೊಟ್ಟ ಕಾಲಕ್ಕೆ ಜಮಾಖರ್ಚು ಆಗುವಂತಿಲ್ಲ, ಮತ್ತು ತಮ್ಮ ಖಾತೇ ವಹಿ ಗಳನ್ನು ನಂತರ ಬರೆಯುವರಾದ್ದರಿಂದ ಈ ತರದ ಟಿಪ್ಪಣಿಯು ನೆನಪು ಕೊಡತಕ್ಕ ಸಾಧನವಾಗುವದು.

೪. **ಖಾತೆ ಪುಸ್ತಕ:—** ಖಾತೆಯು ನಡೆದಂದಿನಿಂದ ಠೇವು ದಾರರು ಕಾಲಕಾಲಕ್ಕೆ ತಮ್ಮ ಖಾತೇ ಪುಸ್ತಕಗಳನ್ನು ಬ್ಯಾಂಕಿನವರಿಂದ ಬರೆಯಿಸಿಕೊಳ್ಳಬೇಕು. ಈ ಪುಸ್ತಕದಲ್ಲಿಯ ಟಿಪ್ಪಣಿಗಳು ಬ್ಯಾಂಕಿನಲ್ಲಿಯ ವಹಿಗಳಲ್ಲಿಯ ಟಿಪ್ಪಣಿಗಳ ನಕಲು ಇರುವವು. ಆದ್ದರಿಂದ ಕೋರ್ಟು ಕಚೇರಿಯ ಕೆಲಸಕ್ಕೆ ಪ್ರಮಾಣವಾಗುವವು. ಉಳಿಕೆಯ (ಸೇವ್ಹಿಂಗ್ಸ) ಖಾತೆಗಾಗಲಿ, ಬಳಕೆಯ (ಚಾಲತೀ) ಖಾತೆಗಾಗಲಿ, ಖಾತೆ ಪುಸ್ತಕದ ಆವಶ್ಯಕತೆಯು ಇರುವದು. ಬ್ಯಾಂಕಿನವರು ಬರೆದುಕೊಟ್ಟ ಟಿಪ್ಪಣಿಗಳ ಹೊರತಾಗಿ ಖಾತೆದಾರರೂ ಇಟ್ಟ, ತಮ್ಮ ಸ್ವಂತ ಟಿಪ್ಪಣಿ ಯಾದರೂ ಇರು ವವು. ಬ್ಯಾಂಕಿನಿಂದ ಖಾತೇ ಬುಕ್ಕು ಬಂದಕೂಡಲೆ ಅದರಲ್ಲಿಯ ಸಂಗತಿ ಯನ್ನು ತಮ್ಮ ಟಿಪ್ಪಣಿಗಳಿಗೆ ಹೊಂದಿಸಿ ನೋಡಿ, ಏನಾದರೂ ಭೇದವು ಕಂಡುಬಂದರೆ ಅದನ್ನು ಬ್ಯಾಂಕಿನವರ ನಿದರ್ಶನಕ್ಕೆ ತಂದುಕೊಟ್ಟು ಸರಿ ಮಾಡಿಕೊಳ್ಳಬೇಕು.

ಬ್ಯಾಂಕಿನ ಆಫೀಸಿನಲ್ಲಿ ಹೋದಕೂಡಲೆ ಕೆಲಸಗಾರರ ಟೇಬಲ್ಲಿನ ಮೇಲೆ (ಕೌಂಟರದ ಮೇಲೆ) ನೂರಾರು ಖಾತ ವಹಿಗಳು ಕಂಡುಬರುವವು ಮತ್ತು ಖಾತೆ ಪುಸ್ತಕಗಳನ್ನು ತಂದು ಇಡುವದಕ್ಕೆ ಒಂದು ಪೆಟ್ಟಿಗೆ ಯಾದರೂ ಇರುವದು. ಬ್ಯಾಂಕಿನ ಲೆಕ್ಕಪತ್ರಗಳನ್ನು ಬರೆಯುವವನೇ ಈ ಖಾತೆಗಳನ್ನು ಬರೆಯುವರು. ಈ ಕ್ರಮವು ಸ್ವಾಭಾವಿಕವಾಗಿಯೇ ಸಾವಕಾಶವಾಗಿ ನಡೆಯುವದು. ಕಾರಣ ಒಬ್ಬ ಅಧಿಕಾರಿಯು ಸರಾಸರಿ

೪೦೦–೫೦೦ ಖಾತೆಗಳನ್ನು ಬರೆಯುವನು. ಈ ಖಾತೆಗಳಿಗೆ ಸಂಬಂಧಿಸಿದ ದಿನದ ವ್ಯವಹಾರಗಳ ಟಿಪ್ಪಣಿಗಳನ್ನು ಮಾಡಿಟ್ಟ ನಂತರ, ಮತ್ತು ದಿನದ ಜಮಾಖರ್ಚು ಸಮಾಧಾನದಿಂದ ಹೊಂದಿದ ನಂತರ, ಖಾತೆದಾರರ ಪುಸ್ತಕಗಳನ್ನು ಬರೆಯುವರು. ಅವು ಬರೆದು ಆದ ಹಾಗೆ ಅವುಗಳನ್ನು ಅವರವರ ವಿಳಾಸಕ್ಕೆ ಮುಟ್ಟಿಸಲಾಗುವದು. ದಿನದಿನದ ವ್ಯವಹಾರವು ಸಂಜೆಯ ವರೆಗೆ ನಡೆಯುತ್ತಿರುವದರಿಂದ ಮತ್ತು ಖಾತೆಗಳ ಸಂಖೆಯು ಹೆಚ್ಚಾಗುತ್ತಿದ್ದುದರಿಂದ ಖಾತೆದಾರರ ಪುಸ್ತಕಗಳು ಆಗಾಗ್ಗೆ ಬರೆಯದೆ ಉಳಿಯುವವು. ಆದ್ದರಿಂದ, ಪರಸ್ಪರ ಅನುಕೂಲವಾಗುವಂತೆ, ಖಾತೆದಾರರು ವಾರದಲ್ಲಿ ಒಂದು ನಿಯಮಿತ ದಿನಕ್ಕೆ ತಮ್ಮ ವಹಿಗಳನ್ನು ಬ್ಯಾಂಕಿಗೆ ತಂದು ಕೊಡಬೇಕು. ಮತ್ತು ನಿಶ್ಚಿತ ದಿನ ಬರೆಯಿಸಿಕೊಳ್ಳುವ ಯೋಜನೆ ಮಾಡಿಕೊಳ್ಳಬೇಕು. ಇದರಿಂದ ಇಬ್ಬರಿಗೂ ಹಿತ. ಹಾಗೂ ಬ್ಯಾಂಕಿನವರಿಗೆ ಇಂಥ ಖಾತೇದಾರರ ಪುಸ್ತಕ ಇಂಥ ದಿವಸ ಬರೆಯಬೇಕೆಂಬುದೊಂದು ರೂಢಿಯಾಗುವದು.

ಅದಲ್ಲದೆ, ಮನಬಂದಂತೆ ಪುಸ್ತಕವನ್ನು ಎಷ್ಟೋ ತಿಂಗಳ ವರೆಗೆ ಬರೆಯಿಸಿಕೊಳ್ಳದಿರುವದು, ಬರೆದಿದ್ದಾಗ ಅದನ್ನು ಬ್ಯಾಂಕಿನಿಂದ ಒಯ್ಯದೇ ಇರುವದು ಮತ್ತು ಒಯ್ದರೂ ಕೂಡ ಅದನ್ನು ನೋಡದೆ ಹಾಗೆಯೇ ತಿರುಗಿ ತಂದು ಒಗೆಯುವದು, ಈ ಪರಿಸ್ಥಿತಿಯಾದರೂ ಕಂಡುಬರುವದು. ಅದರ ಮೂಲಕವೇ ಬ್ಯಾಂಕಿನ ಕೌಂಟರದ ಮೇಲೆ ಖಾತೇ ಪುಸ್ತಕಗಳ ಗುಂಪು ಕಂಡುಬರುವದು. ಆ ಗುಂಪಿನಲ್ಲಿಯ ಪುಸ್ತಕಗಳು ಬರೆದಿದ್ದರೂ ಅವುಗಳನ್ನು ಖಾತೇದಾರರು ಒಯ್ಯುವದಿಲ್ಲ. ಈ ರೀತಿಯಿಂದ ಖಾತೇ ಪುಸ್ತಕಗಳು ಬ್ಯಾಂಕಿನ ಕೌಂಟರದ ಮೇಲೆಯೇ ಉಳಿದುಹೋಗುವವು.

ಈ ಖಾತೇ ಪುಸ್ತಕದ ಪ್ರಶ್ನೆಯು, ಆಗಾಗ್ಗೆ ತೊಂದರೆ ಕೊಡುವದಾದ್ದರಿಂದ, ಕೆಲವು ಬ್ಯಾಂಕಿನವರು ತಿಂಗಳಿಗೊಮ್ಮೆ ಪ್ರತಿಯೊಂದು ಖಾತೆಯ ಯಾದಿಯನ್ನು ಠೇವುದಾರರಿಗೆ ಕಳಿಸುವರು, ಇನ್ನೊಂದು ಕಾರಣವೇನಂದರೆ, ಖಾತೇ ಪುಸ್ತಕದಲ್ಲಿ ಸುಮಾರು ೨೦ ಹಾಳೆಗಳಿದ್ದರೆ ಮತ್ತು ಖಾತೆಯು ತೀರ ಸಣ್ಣದಿದ್ದು ಸ್ವಲ್ಪ ಕಾಲದಲ್ಲಿಯೇ ಆ ಖಾತೆಯು ನಿಂತುಹೋದರೆ,

ಒಂದು ಪುಸ್ತಕ ಹಾಳಾಗುವದು. ಈ ಮೇರೆಗೆ ಬ್ಯಾಂಕುಗಳಲ್ಲಿ ಅನೇಕ ಪುಸ್ತಕಗಳು ಬಿದ್ದದ್ದು ಕಂಡುಬರುವದು. ಮೇಲೆ ವಿವರಿಸಿದ ಗೊಂದಲವೂ ಈ ನೂತನ ಉಪಕ್ರಮಕ್ಕೆ ಕಾರಣವಿರುವದು. ಒಂದು ತಿಂಗಳದ ವರೆಗೆ ಖಾತೆಯ ನಕಲು ಸಿಗದಿದ್ದರೆ ವ್ಯಾಪಾರಸ್ಥರಿಗೆ ಬಹಳ ತೊಂದರೆಯಾಗುವದು. ಬ್ಯಾಂಕಿನ ರೂಢಿಯು ಈ ಪ್ರಕಾರದಿದ್ದಾಗ ನಿರುಪಾಯವಾಗುವದು. ಆದ್ದರಿಂದ, ಖಾತೇದಾರರು ತಮಗೆ ಖಾತೇ ಪುಸ್ತಕ ಸಿಗಬೇಕೆಂಬುದರ ಬಗ್ಗೆ ವಿನಂತಿಸಬೇಕು. ತಿಂಗಳಿಗೊಮ್ಮೆ ಬಂದ ಹಾಳೆಗಳನ್ನು ಒಂದೇ ಕಡೆಗೆ ಇಡುವದಾದರೂ ಆಗುವದಿಲ್ಲ. ಒಂದು ಪುಸ್ತಕದಲ್ಲಿ ಟಿಪ್ಪಣಿಗಳಿದ್ದರೆ ಸಂಪೂರ್ಣ ವೃತ್ತಾಂತವು ಯಾವಾಗಲೂ ಕೈಯಲ್ಲಿರುವದು.

೫. **ವಿವಿಧ ಖಾತೇದಾರರು** :—ಬಳಿಕೆಯ (ಚಾಲತಿ) ಖಾತೆಯು ಸಾರ್ವಜನಿಕ ಸ್ವರೂಪದ್ದಿರುವದು. ಸಜ್ಞಾನಿಗಳೆಲ್ಲರೂ ಇಂಥ ಖಾತೆಯನ್ನು ಇಡಬಹುದು. ಮೇಲೆ ಬರೆದ ಸಂಗತಿಯ ಪುನರುಕ್ತಿಯನ್ನು ಮಾಡದೆ, ವಿವಿಧ ಖಾತೇದಾರರಿಗೆ, ಸಂಬಂಧಿಸಿದ ಕೆಲವು ಹೆಚ್ಚಿನ ವಿಷಯದ ಬಗ್ಗೆ ಇನ್ನು ವಿಚಾರಿಸುವೆವು.

೧. **ವ್ಯಕ್ತಿಯ ಖಾತೆಯು** :—ಕೆಲಕಾಲದ ವರೆಗೆ ಖಾತೆಯು ಸಾಗಿ, ಒಂದು ವೇಳೆ ಖಾತೆದಾರರು ಅಸ್ವಸ್ಥರಾಗಿ ಸಹಿ ಮಾಡಲು ಅಶಕ್ಯವಾದರೆ. ಖಾತೆಯು ಮುಂದೆ ಸಾಗುವಂತೆ, ತಮ್ಮ ಒಬ್ಬ ಪ್ರತಿನಿಧಿಯನ್ನು ನಿಯಮಿಸಿ ಅವನ ಸಹಾಯದಿಂದ ಸಾಗಿಸಬಹುದು. ಇಲ್ಲವೆ ಖಾತೇದಾರರು ಕೆಲಕಾಲ ದೇಶಪರ್ಯಟನಕ್ಕೆ ಹೋಗಬೇಕಾದರೆ ಇದೇ ಪ್ರಕಾರ ಯೋಜನೆ ಮಾಡಬಹುದು. ಹೀಗೆ ಮಾಡುವಾಗ ಎರಡು ಸಂಗತಿಗಳನ್ನು ನೆನಪಿನಲ್ಲಿ ಇಡಬೇಕು. ಒಂದು, ಖಾತೆಯು ಮೂಲಖಾತೇದಾರರ ಹೆಸರಿನಿಂದಲೇ ನಡೆಯತಕ್ಕದ್ದು. ಎರಡು, ಪ್ರತಿನಿಧಿಯು ತನ್ನ ಸಹಿಯನ್ನೇ ಚೆಕ್ಕುಗಳ ಮೇಲೆ ಮಾಡತಕ್ಕದ್ದು. ಖಾತೇದಾರರು ತಾವು ನಿಯಮಿಸಿದವನನ್ನು ಸಮಕ್ಷಮ ಬ್ಯಾಂಕಿಗೆ ಕರೆದುಕೊಂಡು ಹೋಗಿ ಬ್ಯಾಂಕಿನ ಅಧಿಕಾರಿಗಳಿಗೆ ಗುರುತು ಮಾಡಿಕೊಡತಕ್ಕದ್ದು. ನಂತರ, ಕೆಳಗೆ ಬರೆದ ಪ್ರಕಾರ ಒಂದು ಪತ್ರವನ್ನು ಬರೆದುಕೊಡಬೇಕು.

ಬ್ಯಾಂಕಿನಲ್ಲಿದ್ದ ಖಾತೆಯ ಸಂಪೂರ್ಣ ವಿವರಣೆಯಿದ್ದ ಒಂದು ರಬ್ಬರ ಮುದ್ರೆ ಮಾಡಿಸಿ ಅದರ ಮುದ್ರೆಯನ್ನು ಹಾಕಬೇಕು. ಹೀಗೆ ಮಾಡದಿದ್ದರೆ ಚೆಕ್ಕಿನ ಮಾಲಕನೊಬ್ಬನು ಮತ್ತು ಸಹಿ ಮಾಡಿದವನಿನ್ನೊಬ್ಬನು ಆಗಿ ತೊಂದರೆಯಾಗುವದು. ಮತ್ತು ಪ್ರತಿನಿಧಿಯಾದವರೂ ಅದೇ ಬ್ಯಾಂಕಿನಲ್ಲಿ ತಮ್ಮದೊಂದು ಖಾತೆಯನ್ನಿಟ್ಟಿದ್ದರೆ ಇದಕ್ಕೂ ಹೆಚ್ಚಿನ ಗೊಂದಲ ಉತ್ಪನ್ನವಾಗುವದು. ಕಾರಣ ಪ್ರತಿನಿಧಿಯು ಸಹಿಮಾಡಿದ ಚೆಕ್ಕು ಬೇರೊಂದು ಖಾತೆಕ್ಕೆ ಸಂಬಂಧಿಸಿರುವದರಿಂದ ಬ್ಯಾಂಕಿನ ಅಧಿಕಾರಿಗಳು ತಮ್ಮ ಚೆಕ್ಕುಗಳ ಆಧಾರದಿಂದ ಆ ನಂಬರದ ಪುಟವಿದ್ದ ಚೆಕ್ಕು ಪುಸ್ತಕ ಯಾವ ಖಾತೆಕ್ಕೆ ಹೊಂದಿರುವದೆಂಬದರ ಬಗ್ಗೆ ನಿಶ್ಚಯ ಮಾಡಿಕೊಂಡು ಆ ಚೆಕ್ಕು ಯೋಗ್ಯವಿದ್ದ ಬಗ್ಗೆ ಸಮಾಧಾನಪಡೆಯುವದು. ಇದೆಲ್ಲ ತೊಂದರೆಯು ಒಂದು ರಬ್ಬರ ಸ್ಟ್ಯಾಂಪಿನ ಮುದ್ರೆಯಿಂದ ನಿಂತುಹೋಗುವದು.

ಈ ವಿಷಯಕ್ಕೆ ನಮಗೆ ಬಂದ ಅನುಭವವನ್ನು ಹೇಳುವೆವು. ಒಂದು ಅಂಗಡಿಯಲ್ಲಿ ಅನೇಕ ವರ್ಷಗಳಿಂದ ವ್ಯವಹಾರ ನಡೆಸುತ್ತಿದ್ದ ಒಬ್ಬ ವ್ಯಾಪಾರಸ್ಥರ ನೌಕರನಿದ್ದನು ಮಾಲಕನು. ಕೆಲವು ದಿವಸಗಳವರೆಗೆ ಪರ ಸ್ಥಳಕ್ಕೆ ಹೋದಾಗ ಈ ನೌಕರನ ಕೈಯಲ್ಲಿ ಮಾಲಕನ ಹೆಸರಿನ ಕೆಲವು ಚೆಕ್ಕುಗಳು ಬಂದವು. ಮಾಲಕನು ಬ್ಯಾಂಕಿನಲ್ಲಿಟ್ಟ ಖಾತೆಯಲ್ಲಿ ಈ ಚೆಕ್ಕುಗಳನ್ನು ಹಾಕದೆ, ನೌಕರನು ಬೇರೊಂದು ಬ್ಯಾಂಕಿಗೆ ಹೋಗಿ, ಅಲ್ಲಿ ತನ್ನ ಮಾಲಕನ ಹೆಸರಿನಲ್ಲಿ ಒಂದು ಖಾತೆಯನ್ನಿಟ್ಟನು. ಮತ್ತು ಇಂಥ ಖಾತೆಯ ಪರವಾಗಿ ಈ ಚೆಕ್ಕುಗಳ ಹಣವನ್ನು ಪಡೆದನು. ಮಾಲಕನ ಖಾತೆಯ ಬಗ್ಗೆ ಕೊಡಲ್ಪಟ್ಟ ಚೆಕ್ಕುಗಳನ್ನು ತಾನೇ ಮಾಲಕನ ಹೆಸರಿನ ಸಹಿಯನ್ನೇ ಮಾಡುತ್ತಾ ಹೋದನು. ಈ ಮಾತು ಮಾಲಕನಿಗೆ ತಿಳಿದನಂತರ ಅವನು ತನ್ನ ನೌಕರನ ಬ್ಯಾಂಕಿಗೆ ಹೋಗಿ ತನ್ನ ಖಾತೆಯ ಬಗ್ಗೆ ಇದ್ದ ಸಂಗತಿಯನ್ನು ಗೊತ್ತುಮಾಡಿಕೊಳ್ಳಬೇಕಾದಲ್ಲಿ, ಬ್ಯಾಂಕಿನವರು ತಮ್ಮ ಖಾತೇದಾರನು ಇನ್ನೊಬ್ಬನಿದ್ದದ್ದರಿಂದ ಮಾಲಕನಿಗೆ ಏನೂ ಹೇಳಲಿಲ್ಲ. ಈ ಪ್ರಸಂಗವು ಇನ್ನಾದರೂ ತೊಂದರೆಯಲ್ಲಿದ್ದು, ಪ್ರಕರಣವು ಕೋರ್ಟಿನವರೆಗೆ ಹೋಗುವಂತಿರುವದು.

ನಮ್ಮ ಸಮಾಜದಲ್ಲಿ ಕೆಲವು ಆನುವಂಶಿಕ ಪೇಢಿಗಳ ಹೆಸರು ಒಬ್ಬ ವ್ಯಕ್ತಿಯ ಹೆಸರಿನಂತೆಯೇ ಇರುವದು ಕಂಡುಬರುವದು. ಪೇಢಿಯ ಮಾಲಕರು ಪ್ರತಿಷ್ಠಿತರಿದ್ದದರಿಂದ ಅವರಾವರೂ ತಮ್ಮ ಬ್ಯಾಂಕಿನ ಖಾತೆಯನ್ನು ವ್ಯವಹಾರದ ರೂಢಿಯಲ್ಲಿದ್ದ ಹೆಸರಿನಿಂದಲೇ ಖಾತೆಯನ್ನಿಡುವರು. ಖಾತೆಯನ್ನಿಡುವ ಕಾಲಕ್ಕೆ ಬಂದವರು ಶ್ರೇಷ್ಠರಿದ್ದುದು ಗೊತ್ತಿದ್ದ ಕಾರಣ ಅವರು ಬ್ಯಾಂಕಿನಲ್ಲಿಯ ಅರ್ಜಿಯನ್ನು ರೂಢಿಯಲ್ಲಿದ್ದ ಮೇರೆಗೆ ಬರೆದು ಬಿಡುವರು. ಅರ್ಜಿಯನ್ನು ಬರೆಯುವಾಗ ತಮ್ಮ ಸ್ವಂತ ಹೆಸರು ಮತ್ತು ಪೇಢಿಯ ಹೆಸರು ಬೇರೆ ಬೇರೆ ಇದ್ದರೂ ಕೂಡ ಮತ್ತು ಪೇಢಿಯ ವ್ಯವಹಾರದಲ್ಲಿ ತಮ್ಮ ಹೊರತು ಇನ್ನೂ ಕೆಲವರು ಹೊಂದಿದವರಿದ್ದರೂ ಸಹಿತ, ಕೇವಲ ಔಪಚಾರಿಕ ವಿಷಯವಿದ್ದಂತೆ ಬ್ಯಾಂಕಿನ ಅರ್ಜಿಯನ್ನು ಬರೆಯುವರು. ಇದು ನಿಜವಾದ ಸಂಗತಿಯಲ್ಲೆಂದು ಖಾತೆಯನ್ನಿಡುವಾಗ ಬ್ಯಾಂಕಿನವರ ದೃಷ್ಟಿಗೆ ಬರದೆ ಹೋದಲ್ಲಿ, ಅರ್ಜಿಯನ್ನು ಬರೆದವರೇ ಖಾತೆಯ ಮಾಲಕರಾಗಿ ಹೋಗಬಹುದು. ಆದ್ದರಿಂದ, ಇಂಥ ಪೇಢಿಗಳ ಖಾತೆಯನ್ನು ಇಡುವವರು ಅರ್ಜಿಯನ್ನು ಬರೆಯುವ ಕಾಲಕ್ಕೆ ತಮ್ಮ ಪೇಢಿಯ ಘಟನೆಯ ಬಗ್ಗೆ ಬ್ಯಾಂಕಿನವರಿಗೆ ಪೂರ್ಣ ತಿಳಿಸಿ ಹೇಳಬೇಕು. ನಂತರ, ತೆಗೆಯತಕ್ಕ ಖಾತೆಯು ಪೇಢಿಗೆ ಸಂಬಂಧಿಸಿದ ಇತರ ಭಾಗೀದಾರರಿಗೆ ಬಾಧೆ ಬರದಹಾಗೆ ಖಾತೆಯನ್ನಿಡುವ ಬಗ್ಗೆ ಬ್ಯಾಂಕಿನವರು ತಿಳಿಸಿ ಹೇಳುವರು. ಇದರ ಬಗ್ಗೆಯಾದರೂ ಒಂದು ಉದಾಹರಣೆಯನ್ನು ಕೊಡಬಹುದು. ಒಬ್ಬ ಹೆಸರಾದ ಮಾರವಾಡಿ ಪೇಢಿಯ ವ್ಯವಹಾರ ಮಾಡತಕ್ಕವರು ತಮ್ಮ ವ್ಯವಹಾರದಲ್ಲಿಯ ಹೆಸರಿನಿಂದ ಒಂದು ಖಾತೆಯನ್ನಿಟ್ಟರು. ಅದು ಅನೇಕ ವರ್ಷಗಳ ವರೆಗೆ ನಡೆಯಿತು. ಖಾತೆಯನ್ನಿಟ್ಟವರು ಮರಣ ಹೊಂದಿದ ನಂತರ ಅವನ ತಮ್ಮಂದಿರು ಬ್ಯಾಂಕಿನವರನ್ನು ಕಂಡರು. ಮತ್ತು ಪೇಢಿಯ ಬಗ್ಗೆ ಇದ್ದ ವಸ್ತುಸ್ಥಿತಿಯನ್ನು ತಿಳಿಸಿ ಹೇಳಿದರು. ಆ ಕಾಲಕ್ಕೆ ಖಾತೆಯಲ್ಲಿ ಸುಮಾರು ೮-೧೦ ಸಾವಿರ ರೂಪಾಯಿಗಳಿದ್ದವು. ನಿಜವಾದ ಪರಿಸ್ಥಿತಿಯು ಬಹಳ ತಡವಾಗಿ ಗೊತ್ತಾದ ಕಾರಣ, ಬ್ಯಾಂಕಿನವರು ಇಂಥ ಪ್ರಸಂಗದಲ್ಲಿ ತಾವೇನೂ ಮಾಡಲಾರೆವೆಂದು ಭೆಟ್ಟಿಯಾದವರಿಗೆ ಹೇಳಿ, ಅವರು ಕೋರ್ಟಿಗೆ ಅರ್ಜಿ ಮಾಡಿ ಅಪ್ಪಣೆ ಪಡೆದುಕೊಂಡು ಬರಬಹುದೆಂದು ಹೇಳಿದರು.

ಒಟ್ಟು ಈ ಗೊಂದಲದ ಮೂಲಕ ಖಾತೆಯಲ್ಲಿಯ ರಕಮು ಬಳಿಕೆಯ (ಚಾಲತೀ) ಖಾತೆಯಲ್ಲಿ ೨-೩ ವರ್ಷದ ವರೆಗೆ ಬಿದ್ದು ಬಿಟ್ಟಿತು. ಆದುದರಿಂದ ವ್ಯವಹಾರದಲ್ಲಿ ನಡೆದ ಹೆಸರು ವ್ಯಕ್ತಿಯೊಬ್ಬನ ಹೆಸರಿನಂತೆ ಇದ್ದರೆ, ಖಾತೆ ಯನ್ನಿಡುವವರು ತಮ್ಮ ಪೇಢಿಯ ಬಗ್ಗೆ ಪೂರ್ಣ ವೃತ್ತಾಂತವನ್ನು ಬ್ಯಾಂಕಿಗೆ ಮಾಡಬೇಕಾದ ಅರ್ಜಿಯಲ್ಲಿ ಬರೆದಿಟ್ಟರೆ, ಮೇಲೆ ವಿವರಿಸಿದ ತೊಂದರೆ ಯಾಗಲಾರದು.

**ಒಂದೇ ತರದ ಹೆಸರುಳ್ಳ ಬೇರೆ ಬೇರೆ ಖಾತೆದಾರರು:—** 'ಕುಲಕರ್ಣಿ', 'ದೇಶಪಾಂಡೆ', 'ಪಾಟೀಲ', 'ಜೋಶಿ', 'ಕಾಳೆ', 'ಗೋಖಲೆ' ಎಂಬ ಅಡ್ಡಹೆಸರಿನ ಅನೇಕ ವ್ಯಕ್ತಿಗಳ ಖಾತೆಗಳು ಬ್ಯಾಂಕಿನಲ್ಲಿ ಇರುವವು. ಅವರಲ್ಲಿ ಕೆಲವರು ತಮ್ಮ ಪೂರ್ಣ ಹೆಸರಿನಿಂದ ಚೆಕ್ಕುಗಳ ಮೇಲೆ ಸಹಿ ಮಾಡದೆ ಇಂಗ್ರಜಿಯಲ್ಲಿರತಕ್ಕ ಸಂಕ್ಷಿಪ್ತ ಹೆಸರುಗಳನ್ನು ಜೋಡಿಸಿರುವರು. ತೀರ ಸಮಾನವಿದ್ದ ಮಿಕ್ಕಾಕ್ಷರಗಳೂ, ಉಪನಾಮುವೂ ಒಂದಕ್ಕೊಂದು ಹೊಂದಿದಾಗ ಇಬ್ಬರ ಇಲ್ಲವೆ ಅನೇಕ ವ್ಯಕ್ತಿಗಳ ಖಾತೆ ಗಳನ್ನು ಸಾಗಿಸುವ ಬಗ್ಗೆ ತೊಂದರೆ ಆಗುವ ಸಂಭವವುಂಟು. 'ಗೋವಿಂದ ಸಖಾರಾಮ ಕುಲಕರ್ಣಿ' ಮತ್ತು 'ಗೋಪಾಳ ಶ್ರೀನಿವಾಸ ಕುಲಕರ್ಣಿ' ಇಬ್ಬರೂ 'ಜಿ. ಎಸ್. ಕುಲಕರ್ಣಿ' ಎಂದು ಸಹಿ ಮಾಡಬಲ್ಲರು. ಚೆಕ್ಕುಗಳ ಮೇಲೆ ಮಾಡಿದ ಸಹಿಯ ಮಾರ್ಗವಾಗಿ ಎರಡೂ ಖಾತಗಳಲ್ಲಿದ್ದ ಭೇದವು ತಿಳಿಯಬಹುದು. ಆದರೆ ಹಣ ತುಂಬತಕ್ಕ ಚಲನದಲ್ಲಿ ಕೇವಲ 'ಜಿ ಎಸ್. ಕುಲಕರ್ಣಿ' ಎಂದು ಅಂತ ಬರೆದರೆ, ಆ ರಕಮು ಇಬ್ಬರಲ್ಲಿಯ ಯಾವ ಖಾತೆಕ್ಕೆ ಠೇವು ಹೊಂದಿದ್ದಿರುವದನ್ನು ಗೊತ್ತುಮಾಡಲಸಾಧ್ಯವಾಗುವದು. ಮತ್ತು ಒಬ್ಬರು ತುಂಬಿದ ರಕಮು ಇನ್ನೊಬ್ಬರ ಖಾತೆಯಲ್ಲಿ ತಪ್ಪಿ ಜಮಾ ಹಿಡಿದರೆ ಮತ್ತಷ್ಟು ದುಃಸಾಧ್ಯವಾದ ತಪ್ಪಾಗುವದು. ಈ ಅವಧಿಯಲ್ಲಿ ಹಣ ತುಂಬಿದವರು ಚೆಕ್ಕು ಬರೆದರೆ ಮತ್ತು ಸಾಕಷ್ಟು ಹಣವಿಲ್ಲದ ಮೂಲಕ ಬ್ಯಾಂಕಿನವರು ಅದನ್ನು ತಿರುಗಿ ಹಾಕಿದರೆ ಮಾತ್ರ ಪರಿಸ್ಥಿತಿಯು ಗೊಂದಲದ ಮೇಲ್ಮಟ್ಟವನ್ನು ಮುಟ್ಟುವದು. ಇವೆಲ್ಲ ಕಾರಣಕ್ಕಾಗಿ, ಮೇಲೆ ವಿವರಿಸಿದ ಉಪನಾಮುವುಳ್ಳವರು ಖಾತೆಯನ್ನಿಡುವಾಗ ತಮ್ಮ ಸಮಾನ ಹೆಸರಿನ ಇತರ ಖಾತೆಗಳಿದ್ದ ಬಗ್ಗೆ ಗೊತ್ತುಮಾಡಿಕೊಳ್ಳಬೇಕು. ಮತ್ತು ಬ್ಯಾಂಕಿನವರು

ಕೂಡ ಗೊಂದಲ ಆಗದಂತೆ ಸೂಚನೆ ಮಾಡಬೇಕು. ಹಾಗೂ ಹಣ ತುಂಬುವ ಕಾಲಕ್ಕೆ ಚಲನದಲ್ಲಿ ತಮ್ಮ ಪೂರ್ಣ ಹೆಸರು ಮತ್ತು ವಿಳಾಸ ವನ್ನಾದರೂ ಬರೆಯಬೇಕು. ಈ ತರದ ಪರಸ್ಪರ ಸಹಕಾರ್ಯದಿಂದ ದಿನದ ವ್ಯವಹಾರವು ಸುಸೂತ್ರವಾಗಿ ನಡೆಯುವದು.

(ii) **ಜೋಡು ಖಾತೆ (Joint Account)**:—ವ್ಯವಹಾರಕ್ಕೆ ಅನುಕೂಲವಾಗುವಂತೆ ಒಬ್ಬರಕ್ಕಿಂತ ಇಬ್ಬರಾಗಲಿ, ಹೆಚ್ಚಾಗಲಿ ಜನರು ಕೂಡಿಕೊಂಡು ಹಣದ ವಿನಿಯೋಗವನ್ನು ಬ್ಯಾಂಕಿನಲ್ಲಿಯ ತಮ್ಮೆಲ್ಲರ ಹೆಸರಿನಿಂದ ಒಂದೆರಡು ಖಾತೆಗಳನ್ನಿಡಬಹುದು. ಖಾತೆಯನ್ನು ಪ್ರಾರಂಭ ಮಾಡುವ ಕಾಲಕ್ಕೆ ಎಲ್ಲ ಖಾತೆದಾರರು ಸಮಕ್ಷ ಬಂದು ಬ್ಯಾಂಕಿನ ಅಧಿಕಾರಿ ಗಳೆದುರಿಗೆ ತಮ್ಮ ತಮ್ಮ ಸಹಿಗಳನ್ನು ಮಾಡಿ ಅರ್ಜಿಯನ್ನು ಕೊಡಬೇಕು. ಅವರಲ್ಲಿ ದಿನದ ಉದ್ಯೋಗವನ್ನು ನಡೆಸಬಲ್ಲ ವ್ಯಕ್ತಿಯ ಸಹಿ ನಮೂನೆ ಯನ್ನು ಅರ್ಪಿಸಿ ವಿವಿಧ ಖಾತೆದಾರರಲ್ಲಿ ಆದ ಕರಾರಿನ ಬಗ್ಗೆ ಬ್ಯಾಂಕಿನಲ್ಲಿಯ ಖಾತೆಗಳ ಬಗ್ಗೆ ಹೊಂದುವಂಥ ವಿಷಯವೇನಾದರೂ ಇದ್ದರೆ, ಅದನ್ನೆಲ್ಲ ಬರೆದು ತಿಳಿಸಬೇಕು. ಒಬ್ಬೊಬ್ಬರು ಮೃತಪಟ್ಟರೆ ಉಳಿದವರಿಗೆ ಖಾತೆಯನ್ನು ಸಾಗಿಸುವದಕ್ಕೆ ಎಲ್ಲರೂ ತಮ್ಮ ಸಹಿಗಳಿಂದ ಅಧಿಕಾರವನ್ನು ಬ್ಯಾಂಕಿಗೆ ಒಪ್ಪಿಸಬೇಕು. ನಾಲ್ಕು ಜನರು ಕೂಡಿಕೊಂಡು ಖಾತೆಯನ್ನಿಟ್ಟಾಗ ಖಾತೆಯ ಚೆಕ್ಕುಗಳನ್ನು ನಾಲ್ವರಿಗೋಸುಗ ಯಾರು ಸಹಿ ಮಾಡಬೇಕೆಂಬು ದರ ಬಗ್ಗೆ ಅರ್ಜಿಯನ್ನು ಬರೆಯುವಾಗ ಗೊತ್ತು ಮಾಡಬೇಕು. ನಾಲ್ವರಲ್ಲಿ ಇಬ್ಬರು ಜೋಡು ಸಹಿ ಮಾಡಿದರೆ ಚೆಕ್ಕನ್ನು ಸ್ವೀಕರಿಸಬೇಕಾದಲ್ಲಿ, ಅವರ ಇಬ್ಬರ ಹೆಸರುಗಳನ್ನು ಮೊದಲೇ ಬ್ಯಾಂಕಿಗೆ ಕೊಟ್ಟು, ಇಬ್ಬರೂ ಸಹಿ ಮಾಡಿದರೆ ಚೆಕ್ಕನ್ನು ಸ್ವೀಕರಿಸಬೇಕು. ಇಬ್ಬರಲ್ಲಿ ಒಬ್ಬನು ಮರಣ ಹೊಂದಿದರೆ ಮತ್ತು ಮರಣದ ನೋಂದು ಬ್ಯಾಂಕಿನಲ್ಲಿ ಮಾಡಿದ ನಂತರ ಉಳಿದವರಿಬ್ಬರಲ್ಲಿ ಒಬ್ಬನು ಸಹಿ ಮಾಡಬಲ್ಲನೆಂಬುದನ್ನಾದರೂ ತಿಳಿಸುವದು ವಿಹಿತವು.

ಕೇವಲ ಇಬ್ಬರೇ ಕೂಡಿಟ್ಟ ಖಾತೆಯನ್ನು ಒಬ್ಬನು ಸಾಗಿಸಬಲ್ಲನು. ಕೆಲ ಕಾರಣದ ಮೂಲಕ ಇಬ್ಬರೂ ಸಹಿ ಮಾಡಬೇಕಾದರೆ, ಸಹಿಯ ಬಗ್ಗೆ

ಈ ಪ್ರಕಾರ ಏರ್ಪಡಿಸಬೇಕು. ಶಿಲ್ಕಿನ ಬಗ್ಗೆ ಮಾತ್ರ ಇಬ್ಬರಲ್ಲಿಯೊಬ್ಬರು ಮರಣಹೊಂದಿದರೆ ಉಳಿದವರಿಗೆ ಖಾತೆಯನ್ನು ನಡೆಸುವ ಬಗ್ಗೆ ಮತ್ತು ಖಾತೆಯಲ್ಲುಳಿದ ಶಿಲ್ಕನ್ನು ಪಡೆಯುವಂತೆ ಬರೆದಿಡಬೇಕು..

**ಭಾಗೀದಾರರ ಖಾತೆ**( Partnership A/C ):- ಮೇಲೆ ವರ್ಣಿಸಿದಂತೆ ಇಬ್ಬರಾಗಲಿ, ಹೆಚ್ಚು ಜನರಾಗಲಿ ವ್ಯಾಪಾರ ಉದ್ಯೋಗದ ಸಲುವಾಗಿ ಪಾಲುಗಾರಿಕೆಯಿಂದ ಕೂಡಿ ಬ್ಯಾಂಕಿನಲ್ಲಿ ಖಾತೆಯನ್ನಿಟ್ಟಾಗ ಅದು ಭಾಗೀದಾರೀ ಖಾತೆಯ ಸ್ವರೂಪವಾಗುವದು. ಎಲ್ಲ ಜನರು ತಮ್ಮ ವಿಶಿಷ್ಟ ಹೆಸರುಗಳನ್ನು ಹಾಕಿಯಾಗಲಿ, ಎಲ್ಲರೂ ಕೂಡಿಕೊಂಡು ಇನ್ನೊಂದು ಉದ್ಯೋಗಕ್ಕೆ ಉಚಿತವಾದ ಬೇರೆ ಹೆಸರನ್ನು ಪಡೆದಾಗಲಿ ತಮ್ಮೊಳಗೆ ನಿಶ್ಚಯಿಸಿ ಬ್ಯಾಂಕಿನಲ್ಲಿ ಖಾತೆಯನ್ನು ಪ್ರಾರಂಭಿಸಬಹುದು. ಖಾತೆಯ ಅರ್ಜಿಯನ್ನು ಬರೆಯುವಾಗ ಸಮಾವೇಶವಾದ ತಾವೆಲ್ಲರೂ ವ್ಯಾಪಾರದಲ್ಲಿಯ ಭಾಗೀದಾರರಿದ್ದ ಬಗ್ಗೆ ಸ್ಪಷ್ಟವಾಗಿ ತಿಳಿಸಬೇಕು. ಭಾಗೀದಾರಿಯ ಹೊರತಾಗಿದ್ದ ಖಾತೆಯ ಬಗ್ಗೆ ಸಹಿಯನ್ನು ಮಾಡಬೇಕಾದ ಅರ್ಜಿಯ ಹೊರತು, ಗೊತ್ತುಮಾಡಿದ ಉದ್ಯೋಗದಲ್ಲಿ ಸಹಿಗಳನ್ನು ಮಾಡುವವರು ಪಾಲುಗಾರರಿದ್ದ ಬಗ್ಗೆ ಇನ್ನೊಂದು ಫಾರ್ಮಿನಲ್ಲಿ ತುಂಬಿ ಅದನ್ನು ಎಲ್ಲ ಪಾಲುಗಾರರು ಸಹಿಮಾಡಬೇಕು. ಈ ಫಾರ್ಮಿನಲ್ಲಿಯ ವಿಷಯವು ಎರಡು ಸಂಗತಿಗಳಿಗೆ ಹೊಂದಿದ್ದು ಕಂಡುಬರುವದು. ಮೊದಲು ಸಹಿಗಳನ್ನು ಮಾಡುವವರೆಲ್ಲರು ವಿವರಿಸಿದ ಉದ್ಯೋಗದಲ್ಲಿ ಪಾಲುಗಾರರಿದ್ದ ಬಗ್ಗೆ ಒಪ್ಪುವರು. ಎರಡನೆಯ ಸಂಗತಿಯೆಂದರೆ, ನಡೆದ ಖಾತೆಯಲ್ಲಿಯ ವ್ಯವಹಾರದ ಮೂಲಕ ಒಂದು ಸಲ ಶಿಲ್ಕು ತೀರಿಹೋಗಿ ಹಣಕೊಟ್ಟ ಚೆಕ್ಕುಗಳನ್ನು ಖರ್ಚು ಹಾಕುತ್ತ ಹೋದಂತೆ ಪಾಲುಗಾರರು ಬ್ಯಾಂಕಿನವರಿಗೆ ಕೊಡಬೇಕಾಗುವ ಹಣವನ್ನು ಪ್ರತಿಯೊಬ್ಬ ಪಾಲುಗಾರನ ಕಡೆಯಿಂದ ವಸೂಲ ಮಾಡಬಹುದೆಂದು ಬರೆದಿಡಬೇಕು. ಎಲ್ಲ ಪಾಲುಗಾರರು ಒಟ್ಟಾಗಿಯಾಗಲಿ ಒಬ್ಬೊಬ್ಬರಾಗಲಿ ಖಾತೆಯಲ್ಲಿ ಹೊರಟ ಸಾಲವನ್ನು ಮುಟ್ಟಿಸುವ ಬಗ್ಗೆ ಪಾತ್ರರಾಗುವರು. ಇತರ ಜೋಡು ಖಾತೆಯಂತೆ ಈ ಖಾತೆಯ ಬಗ್ಗೆ ಯಾವರೂ ದಿನದ ವ್ಯವಹಾರದಗೋಸುಗ ಸಹಿಮಾಡತಕ್ಕ ವ್ಯಕ್ತಿಗಳ

ನಾಮನಿರ್ದೇಶ ಮಾಡಬೇಕಾಗುವದು. ಈ ವಿಷಯಕ್ಕನುಸರಿಸಿ ಪ್ರಚಲಿತ ರೂಢಿಯಲ್ಲಿದ್ದ ಕ್ರಮಾನುಸಾರ ಬ್ಯಾಂಕಿನವರು ಪಾಲುಗಾರರಿಗೆ ಸಹಿ ಮಾಡಲಿಕ್ಕೆ ಕೊಡತಕ್ಕ ಫಾರ್ಮಿನ ಮಾದರಿಯನ್ನು ಕೆಳಗೆ ಕೊಡುವೆವು.

"………… … ……. …. … ಈ ಹೆಸರು ಪಡೆದ ಅಂಗಡಿಯು ಇಲ್ಲವೆ
ಕಂಪನಿಯು

ಇವರ ವ್ಯವಹಾರವು ತಮ್ಮ ಬ್ಯಾಂಕಿನ ಗೂಡ ಸಂಬಂಧವನ್ನು ಹೂಡಿದ್ದು ಅಥವಾ ಹೂಡುವವರಿದ್ದು ಮತ್ತು ಆ ಉದ್ಯೋಗದಲ್ಲಿ ಕೆಳಗೆ ಸಹಿ ಮಾಡಿದವರು ನಾವು ಪಾಲುಗಾರರಿದ್ದುದರಿಂದ ನಮ್ಮಲ್ಲಿಯವರೆಲ್ಲರಿಗೂ ವ್ಯಕ್ತಿಶಃ ಈ ವ್ಯವಹಾರದಲ್ಲಿ ಸಂಪೂರ್ಣ ಅಧಿಕಾರವಿರುತ್ತದೆ. ಆ ಮೇರೆಗೆ ನಾವು ಕಂಪನಿಯಗೋಸುಗ ಸಹಿ ಮಾಡಲು ಬಾಧ್ಯಸ್ಥರಿರುವೆವು. ನಾವು ಕೆಳಗಿನ ಭಾಗದಲ್ಲಿ ನಮ್ಮೆಲ್ಲರ ಹೆಸರುಗಳನ್ನು ಬರೆದಿರುವೆವು. ಈ ಫಾರ್ಮ ಬರೆಯುವ ಕಾಲಕ್ಕೆ ಸಹಿಮಾಡದೇ ಇದ್ದವರ ಹೆಸರುಗಳನ್ನಾದರೂ ಬರೆದಿದೆ. ಅವರು ತಕ್ಕ ಅವಧಿಯಲ್ಲಿ ಮುಂದೆ ಸಹಿ ಮಾಡುವರು.

ನಾವೆಲ್ಲರೂ, ವ್ಯಕ್ತಿಶಃ ಮತ್ತು ಸಾಮುದಾಯಿಕವಾಗಿ ನಮ್ಮ ಕಂಪನಿಯ ಬ್ಯಾಂಕಿನಗೂಡಿದ್ದ ವ್ಯವಹಾರದ ಬಗ್ಗೆ ಹೊಣೆಯಾಗಿದ್ದೇವೆ. ನಮ್ಮ ವ್ಯವಹಾರಕ್ಕೆ ಹೊಂದಿದ ಸಾಲವನ್ನು ಬ್ಯಾಂಕಿನವರು ನಮ್ಮಲ್ಲಿಯ ಒಬ್ಬರದಾಗಲಿ, ಎಲ್ಲರದಾಗಲಿ ಆಸ್ತಿಯಿಂದ ತಮ್ಮ ಸಾಲ ವಸೂಲಿ ಮಾಡಬಹುದು.

ಯಾವದೇ ಕಾಲಕ್ಕೆ ನಮ್ಮ ಭಾಗೀದಾರಿಯ ಘಟನೆಯಲ್ಲಿ ಬದಲಾದರೆ, ಅದನ್ನು ಶೀಘ್ರವೇ ಬ್ಯಾಂಕಿನವರಿಗೆ ತಿಳಿಸುವೆವು. ಹೀಗೆ ತಿಳಿಸಿದ ನಮ್ಮ ಪತ್ರವು ಬ್ಯಾಂಕಿನವರಿಗೆ ಮುಟ್ಟಿ ಉತ್ತರವು ನಮ್ಮ ಕೈಯಲ್ಲಿ ಸೇರುವವರೆಗಿನ ಅವಧಿಯಲ್ಲಿ ನಮ್ಮ ವ್ಯವಹಾರಮೂಲಕವಾದ ಸಾಲದ ಬಗ್ಗೆಯೂ, ಪೂರ್ವದಂತೆಯೇ ನಮ್ಮೆಲ್ಲರ ಹೊಣೆಗಾರಿಕೆಯು ಇದೆ ಎಂದು ಬರೆದುಕೊಡುವೆವು.

ಕೆಲವು ಪಾಲುಗಾರ ಉದ್ಯೋಗದಲ್ಲಿಯ ಜನರು ವ್ಯವಹಾರವನ್ನು ದಿನದಿನಕ್ಕೆ ಸಾಗಿಸುವದಕ್ಕೆ ಒಬ್ಬ ನೌಕರರನ್ನು ನೇಮಿಸುವರು. ಅನೇಕ ವರ್ಷದಿಂದ ಈ ಪ್ರಕಾರ ಸಾಗಿಹೋದ ವ್ಯವಹಾರದಲ್ಲಿ ಈ ನೌಕರನು ಸಮರಸನಾಗಿ ಎಲ್ಲ ಕಾರಭಾರವು ಅವನೇ ನಡಿಸುತ್ತಿರುವದನ್ನು ನಾವು ನೋಡುವೆವು. ಬ್ಯಾಂಕಿನ ಖಾತೆಯನ್ನಾದರೂ ಅವನೇ ನೋಡುವವನಾಗಿ ಉಳಿದ ಪಾಲಗಾರರು ಕೇವಲ ನಿರೀಕ್ಷಕರಾಗಿರುವರು. ಈ ನೌಕರನಿಗೆ

ಆತನ ಪ್ರತಿ ತಿಂಗಳದ ಸಂಬಳವ ಹೊರತಾಗಿ ಲಾಭದಲ್ಲಿಯಾದರೂ ಕೆಲವೊಂದು ಭಾಗವು ಆವನಿಗೆ ದೊರಕುವದು. ನಾನು ಎಲ್ಲ ಕೆಲಸಕ್ಕೆ ಬಾಧ್ಯಸ್ಥನಿದ್ದುದರಿಂದ ಮತ್ತು ಅಂಗಡಿಯನ್ನು ನಾನೇ ಸಾಗಿಸುತ್ತಿದ್ದದರಿಂದ ಮಾಲಕರ ದೆಸೆಯಿಂದ ಬ್ಯಾಂಕಿನಲ್ಲಿ ಖಾತೆಯನ್ನಾದರೂ ಇಡಬಲ್ಲೆನೆಂಬ ಆತ್ಮವಿಶ್ವಾಸದಿಂದ ಆತನು ತನ್ನ ಮನಬಂದಂತೆ ಖಾತೆಯನ್ನಿಡುವದನ್ನು ನಾವು ನೋಡಿರುತ್ತೇವೆ. ಆದ್ದರಿಂದ ವ್ಯವಹಾರಸ್ಥರು ತಮ್ಮ ಸುರಕ್ಷಿತತೆಯ ಸಲುವಾಗಿ ಈ ತರದ ಅಧಿಕಾರವನ್ನು ಅನ್ಯರಿಗೆ ಕೊಡದಿರುವದು ಉಚಿತವಾದದ್ದು. ಕಾರಣ ನೌಕರನು ತಾನೊಬ್ಬ ಮಾಲಕನಂತೆಯೇ ತಿಳಿದುಕೊಂಡು ಬ್ಯಾಂಕಿನ ಖಾತೆಯ ಮುಖಾಂತರ ಅನುಚಿತ ವ್ಯವಹಾರವನ್ನು ಮಾಡಿದರೆ ಅದರ ಸಂಪೂರ್ಣ ಹೊಣೆಯು ಪ್ರತಿಯೊಬ್ಬ ಪಾಲುಗಾರನ ಮೇಲೆ ಬಿದ್ದು ಎಲ್ಲರೂ ದುರ್ಧರ ಪ್ರಸಂಗಕ್ಕೆ ಗುರಿಯಾಗುವರು. ಯಾವ ವ್ಯಕ್ತಿಯಾದರೂ ಬ್ಯಾಂಕಿನವರೆದುರಿಗೆ ಹೋಗಿ ಖಾತೆಯನ್ನಿಡಬೇಕಾದಾಗ ಆ ಖಾತೆಗೆ ತನ್ನದಿದ್ದ ಸಂಬಂಧವನ್ನು ವಿವರಿಸಿ ಹೇಳಬೇಕು.

**ಲಿಮಿಟೆಡ್ ಕಂಪನಿಗಳ ಖಾತೆಯು**:–ಲಿಮಿಟೆಡ್ ಕಂಪನಿಗಳಿಗೆ ಸಂಬಂಧಿಸಿದ ಅಧಿಕಾರಿಗಳು ಬ್ಯಾಂಕಿನಲ್ಲಿಯ ಕಂಪನಿಯ ಖಾತೆಯನ್ನು ಪ್ರಾರಂಭ ಮಾಡುವ ಕಾಲಕ್ಕೆ ಬ್ಯಾಂಕಿಗೆ ಮಾಡಬೇಕಾದ ಅರ್ಜಿಯ ಹೊರತಾಗಿ ಕೆಳಗಿನ ಸಂಗತಿಗಳನ್ನು ಪೂರೈಸಬೇಕು.

೧. ಕಂಪನಿಯ ಸ್ಥಾಪನೆಯ ಸರ್ಟಿಫಿಕೇಟ ( Certificate of Incorporation ).

(ಇದನ್ನು ಬ್ಯಾಂಕಿನವರಿಗೆ ತೋರಿಸಿ ತಿರುಗಿ ಪಡೆಯಬೇಕು.)

೨. ಕರಾರಪತ್ರದ ಅಧಿಕೃತ ಪ್ರತಿ ( Certified copy of the memorandum and Articles of Association ).

೩. ಕಂಪನಿಯ ಕಾರ್ಯವು ಪ್ರಾರಂಭವಾಗಲಿಕ್ಕೆ ಪಡೆದ ಕಂಪನಿ ರಜಿಸ್ಟ್ರಾರ ಇವರಿಂದ ದೊರಕಿಸಿದ ಸರ್ಟಿಫಿಕೇಟ ( Certificate of the Registrar of Joint-stock Companies that the company is entitled to commence business ).

(ಇದನ್ನು ಬ್ಯಾಂಕಿನವರಿಗೆ ತೋರಿಸಿ ತಿರುಗಿ ಪಡೆಯಬೇಕು.)

೪. ಕಂಪನಿಯ ಡಾಯರೆಕ್ಟರರ ಸಭೆಯಲ್ಲಿ ಬ್ಯಾಂಕಿನಲ್ಲಿ ಖಾತೆಯನ್ನಿಡುವ ಬಗ್ಗೆ ಮತ್ತು ಖಾತೆಯ ಚೆಕ್ಕುಗಳ ಮೇಲೆ ಸಹಿ ಮಾಡತಕ್ಕ ಅಧಿಕಾರಿಗಳನ್ನು ನೇಮಿಸಿದ ಬಗ್ಗೆ ಗೊತ್ತುಮಾಡಿದ ಠರಾವಿನ ಅಧಿಕೃತ ಪ್ರತಿ.

ಬ್ಯಾಂಕಿನ ನಿಯಮಗಳ ಪ್ರಕಾರ ಮಾಡಬೇಕಾದ ಠರಾವು ಒಂದು ವಿಶಿಷ್ಟ ಪ್ರಕಾರದ್ದಿರುವದರಿಂದ ಮತ್ತು ಆ ಠರಾವಿನಲ್ಲಿಯ ವಿಷಯವು ಕೇವಲ ಖಾತೆಯಲ್ಲಿಯೇ ಅನುಸರಿಸಿದ್ದಿರಬೇಕಾದ್ದರಿಂದ, ಕಂಪನಿಯ ಅಧಿಕಾರಿಗಳು ಈ ರೀತಿಯಿಂದ ಅದನ್ನು ಬರೆಯಬೇಕು.

“ ... ... ............ .. . .. ... . .. ... ಕಂಪನಿಯ ಲಿಮಿಟೆಡ್‌ದ ಡಾಯರೆಕ್ಟರರ. ............ ತಾರೀಖಿನ ದಿವಸ ಕೂಡಿದ ಸಭೆಯಲ್ಲಿ ಕೆಳಗೆ ನಿರೂಪಿಸಿದ ಠರಾವು ಮಾಡಲಾಗಿರುವದು:—

ಆ ಕಂಪನಿಯದೊಂದು ಬ್ಯಾಂಕಿನ ಖಾತೆಯು—— ——————————ಲಿ. ....................ಪಟ್ಟಣದ ಆಫೀಸಿನಲ್ಲಿ ಪ್ರಾರಂಭ ಮಾಡತಕ್ಕದ್ದು. ಬ್ಯಾಂಕಿನವರು ಕಂಪನಿಯಗೋಸುಗ ಇಲ್ಲಿ ವಿವರಿಸಿದ ಅಧಿಕಾರಿಗಳು ಸಹಿಮಾಡಿದ ಚೆಕ್ಕುಗಳನ್ನು ಇತರ ದಸ್ತೈವಜಗಳನ್ನು ಮಾನ್ಯಮಾಡಬೇಕಾದ ಬಗ್ಗೆ ಅಧಿಕಾರವನ್ನು ಕೊಟ್ಟಿದೆ. ಇದರ ಜೊತೆಯಾಗಿ ಮೇಲಿಂದ ಮೇಲೆ ಖಾತೆಯ ವಿಷಯಕ್ಕನುಸರಿಸಿ ನಿಶ್ಚಯಿಸಿದ ಸಂಗತಿಗಳನ್ನು ಮಾನ್ಯ ಮಾಡಬೇಕು.

ಸಹಿ ..... .. .. . .. ............... ಸಹಿ ........................ .........

ಅಧ್ಯಕ್ಷ

ಸಹಿಗಳನ್ನು ಮಾಡತಕ್ಕ ಅಧಿಕಾರಿಗಳು:

ಈ ಪ್ರಕಾರ ಸಹಿ ಮಾಡುವರು

ಕಂಪನಿ ಲಿ. ಗೋಸುಗ

೧)

———————

ಮ್ಯಾನೇಜಿಂಗ ಡಾಯರೆಕ್ಟರ

೨)

———————

ಮ್ಯಾನೇಜರ

೩) ———————

———————

ಸೆಕ್ರೆಟರಿ

ಮೇಲೆ ವರ್ಣಿಸಿದ ಠರಾವಿನ ನಕಲು ಬ್ಯಾಂಕಿನವರಿಗೆ ಕೊಡುವಾಗ ಅದರ ಮೇಲೆ ಠರಾವು ಮಾಡುವ ಕಾಲಕ್ಕೆ ಕೂಡಿದ ಸಭೆಯ ಅಧ್ಯಕ್ಷರೇ ಸಹಿ ಮಾಡಿದ ಬಗೆ ನಿಶ್ಚಯ ಮಾಡಿಕೊಳ್ಳಬೇಕು.

**ಇತರ ಸಂಸ್ಥೆಗಳ ಖಾತೆಗಳು** :— ಮ್ಯುನಿಸಿಪಾಲಿಟಿ, ಲೋಕಲ್ ಬೋರ್ಡ, ಕ್ಲಬ್, ಕ್ರೀಡಾಮಂಡಳ. ಇಂಥ ಸಂಸ್ಥೆಗಳ ಅಧಿಕಾರಿಗಳು ತಮ್ಮ ವ್ಯವಸ್ಥಾಪಕ ಕಮಿಟಿಗಳಲ್ಲಿ ಠರಾವು ಮಾಡಿ ಮೇಲೆ ಹೇಳಿದ ಮೇರೆಗೆ ತಮ್ಮ ಖಾತೆಗಳನ್ನು ಬ್ಯಾಂಕುಗಳಲ್ಲಿಡಬಹುದು.

ಲಿಮಿಟೆಡ್ ಕಂಪನಿ, ಸಾರ್ವಜನಿಕ ಸಂಸ್ಥೆಗಳು, ಬ್ಯಾಂಕ್ ಖಾತೆಗಳನ್ನು 'ಶೆಡ್ಯೂಲ್ಡ್' ಬ್ಯಾಂಕುಗಳಲ್ಲಿಡಬೇಕೆಂದು ಸರಕಾರದವರು ಗೊತ್ತುಪಡಿಸಿ ದ್ದರಿಂದ ಈ ವಿಷಯವಾಗಿ ವಿವೇಚಿಸುವೆವು. ದೇಶದಲ್ಲಿದ್ದ ಸಾವಿರಾರು ಬ್ಯಾಂಕುಗಳು ತಮ್ಮ ಪರಿಸ್ಥಿತಿಯ ಪ್ರಕಾರ ನಡೆದಿರುವವು. ಅವುಗಳ ವರ್ಗೀಕರಣವು ನಮ್ಮ ಮಧ್ಯವರ್ತಿ ಸರಕಾರೀ ಬ್ಯಾಂಕಿನಿಂದ (Reserve Bank of India) ೧೯೩೫ನೆಯ ಇಸ್ವಿಯಲ್ಲಿ ಮಾಡಲ್ಪಟ್ಟಿತು. ಅದರ ಮೇರೆಗೆ ನಮ್ಮ ದೇಶದಲ್ಲಿ ರಜಿಸ್ಟರ ಆಗಿದ್ದ ಬ್ಯಾಂಕುಗಳ ವಸೂಲಾದ ಹಣ ಮತ್ತು ಕಾದಿಟ್ಟ ಫಂಡು (Paid-up Capital and Reserved) ೫ ಲಕ್ಷ ರೂಪಾಯಿಗಳಿಗಿಂತ ಹೆಚ್ಚು ಇದ್ದ ಬ್ಯಾಂಕುಗಳನ್ನು ಮಧ್ಯವರ್ತಿ ಬ್ಯಾಂಕಿನವರು ತಮ್ಮ ಎರಡನೆಯ ಪರಿಶಿಷ್ಟದಲ್ಲಿ(Second Schedule) ಸಮಾವೇಶ ಮಾಡಿದರು. ಮೊದಲನೆಯ ಪರಿಶಿಷ್ಟವು ಬೇರೊಂದು ವಿಷಯಕ್ಕೆ ಸಂಬಂಧಿಸಿದ್ದುದರಿಂದ ಬ್ಯಾಂಕುಗಳ ವರ್ಗೀಕರಣವನ್ನು ಎರಡನೆಯ ಪರಿಶಿಷ್ಟದಲ್ಲಿ ಹಾಕಲಾಯಿತು. ಈ ರೀತಿಯ ಸಮಾವೇಶದಿಂದ ಸರಕಾರೀ ಬ್ಯಾಂಕಿನವರು ನಿಯಮಿಸಿದ ಮೇರೆಗೆ ಈ ಬ್ಯಾಂಕುಗಳ ವ್ಯವಹಾರವು ನಡೆಯುತ್ತದೆ. ಮತ್ತು ಸರಕಾರಿ ಬ್ಯಾಂಕಿನ ನಿಯಂತ್ರಣಕ್ಕೆ ಇವು ಒಳಗಾಗುವವು. ಇದರಿಂದ ಲಿಮಿಟೆಡ್ ಕಂಪನಿಗಳ ಇಲ್ಲವೆ ಇತರ ಸಾರ್ವಜನಿಕ ಸಂಸ್ಥೆಗಳ ಹಣವು ಸುರಕ್ಷಿತವಾಗಿರುವದು ನಿಶ್ಚಿತವಿದ್ದ ಕಾರಣ ಸರಕಾರದವರು ಆ ಸಂಸ್ಥೆಗಳ ಬ್ಯಾಂಕ ಖಾತೆಗಳ ವಿಷಯಕ್ಕೆ ನಿರ್ಬಂಧಿಸಿರುವರು.

ಸದ್ಯಕ್ಕೆ ನಮ್ಮ ದೇಶದಲ್ಲಿ ಪರರಾಷ್ಟ್ರಗಳಲ್ಲಿ ಸ್ಥಾಪಿಸಿದ ೧೫ ಬ್ಯಾಂಕುಗಳಿರುವವು. ನಮ್ಮ ದೇಶದಲ್ಲಿ ಸ್ಥಾಪಿಸಿದ್ದ ೮೬ 'ಶೆಡ್ಯೂಲ್ಡ' ಬ್ಯಾಂಕುಗಳು, ಇತರ ವ್ಯಾಪಾರಿ ಮತ್ತು ಸಹಕಾರಿ ಬ್ಯಾಂಕುಗಳು ಕೂಡಿ ೯೦೦ ಇರುವವು. ಆ ಬ್ಯಾಂಕುಗಳ ಸುಮಾರು ೪೦೦೦ ಕಚೇರಿಗಳು ಅತ್ತಿತ್ತ ಕೆಲಸ ಮಾಡುತ್ತಿರುವವು. ಮುಂಬಯಿ ಪ್ರಾಂತದಲ್ಲಿಯೇ ಇದ್ದ ಬ್ಯಾಂಕುಗಳಲ್ಲಿ

ಮತ್ತು ಅವುಗಳ ಶಾಖೆಗಳಲ್ಲಿ ಒಟ್ಟುಗೂಡಿ ಸುಮಾರು ೨೭೩ ಕೋಟಿ ರೂ.ಗಳ ಸಂಗ್ರಹವಿರುವದು. ಇದರ ಆಧಾರದಿಂದ ಬ್ಯಾಂಕುಗಳಲ್ಲಿಯ ಹಣದ ವ್ಯಾಪಾರವು ಎಷ್ಟರ ಮಟ್ಟಿಗೆ ಇರಬಹುದೆಂಬ ಬಗ್ಗೆ ಅನುಮಾನ ಮಾಡಬಹುದು. ಇವೆಲ್ಲ ಕಚೇರಿಗಳಲ್ಲಿಯ ಠೇವುಗಳ ಸಂರಕ್ಷಣೆಯು ಸಲುವಾಗಿ ನಮ್ಮ ಮಧ್ಯವರ್ತಿ ಬ್ಯಾಂಕಿನವರು ತೀಕ್ಷ್ಣದೃಷ್ಟಿಯಿಂದ ಅವುಗಳಲ್ಲಿಯ ವ್ಯವಹಾರವನ್ನು ನೋಡುವದು ಕೇವಲ ಭಾಗೀದಾರರ, ಠೇವುದಾರರ ಹಿತಕ್ಕಾಗಿಯೇ.

**ಬಳಿಕೆ (ಚಾಲತಿ) ಖಾತೆಯಲ್ಲಿಯ ಸಾಲಪಡೆಯುವ ಬಗೆ (Overdraft Accounts) :—** ಸಾಮಾನ್ಯವಾಗಿ, ಠೇವುದಾರರು ತಮ್ಮ ಖಾತೆಯಲ್ಲಿ ಸಾಕಷ್ಟು ಹಣವನ್ನಿಟ್ಟು, ಅದರ ವಿನಿಯೋಗವನ್ನು ಚೆಕ್ಕಿನಿಂದ ಮಾಡುವದರ ಬಗ್ಗೆ ಇದು ವರೆಗೆ ನಾವು ವಿಚಾರಿಸಿದೆವು. ಒಂದು ಸಲ ಖಾತೆಯಲ್ಲಿದ್ದ ಶಿಲ್ಕಿಗಿಂತ ಹೆಚ್ಚಿನ ರಕಮು ಬೇಕಾದರೆ, ಅದನ್ನು ಪಡೆಯಲಿಕ್ಕೆ ಎರಡು ಉಪಾಯಗಳಿರುವವು. ಒಂದು, ಬ್ಯಾಂಕಿಗೆ ತಕ್ಕ ತಾರಣ (ಅಡವು) ಕೊಟ್ಟು ಸಾಲ ದೊರಕಿಸುವದು ಮತ್ತು ಈ ಪ್ರಕಾರ ಸಾಲ ಪಡೆದ ಹಣವನ್ನು ಚಾಲತಿಖಾತೆಯಲ್ಲಿ ತುಂಬಿ ಅದನ್ನು ಸಾಗಿಸುವದು. ತಾತ್ಪೂರ್ತಿಕ ಸಾಲವನ್ನು ಬೇಡಿಕೊಳ್ಳುವಗೋಸುಗ ಬ್ಯಾಂಕಿನವರಿಗೆ ಹೇಳಿಕೊಂಡು ಅವರು ಸೂಚಿಸಿದ ಮೇರೆಗೆ ತಾವು ತಾರಣವನ್ನು ಅರ್ಪಿಸಿ ಖಾತೆಯಲ್ಲಿದ್ದ ಶಿಲ್ಕಿಗಿಂತ ತಾರಣದ ಆಧಾರಕ್ಕನುಸರಿಸಿ ನಿಶ್ಚಯಿಸಿದ ಹೆಚ್ಚಿನ ರಕಮನ್ನು ತೆಗೆಯುವದು. ಮೊದಲನೆಯ ಉಪಾಯದ ಬಗ್ಗೆ ನಾವು ಮುಂದಿನ ಪ್ರಕರಣದಲ್ಲಿ ಸಂಪೂರ್ಣವಾಗಿ ವಿವೇಚನೆ ಮಾಡುವೆವು. ಪ್ರತ್ಯಕ್ಷ ಸಾಲವನ್ನು ದೊರಕಿಸಿದರೆ, ಸಾಲ ಕೊಟ್ಟ ಪೂರ್ಣ ರಕಮನ್ನು ಬ್ಯಾಂಕಿನವರು ವಸೂಲ ಮಾಡಬಲ್ಲರು. ಆದರೆ ಸಾಲದ ಯೋಜನೆಯನ್ನು ಚಾಲತೀ ಖಾತೆಯಲ್ಲಿ ಮಾಡಿದಾಗ, ಖಾತೇದಾರರು ತಮ್ಮ ಅನುಕೂಲವಿದ್ದಂತೆ, ಬೇಕುಬೇಕಾದಷ್ಟು ಹಣವನ್ನು ಮೊದಲು ಗೊತ್ತುಮಾಡಿದ ಮರ್ಯಾದೆಯ ವರೆಗೆ ಪಡೆಯಬಹುದು. ಈ ಎರಡು ಪ್ರಕಾರದ ಯೋಜನೆಯಿಂದ ಬ್ಯಾಂಕಿನವರಿಗೆ ಕೊಡಬಹುದಾದ ಬಡ್ಡಿಯು ಕಡಿಮೆಯಾಗುವದು. ಮತ್ತು ಆಗಾಗ್ಗೆ ತಿರುಗಿ ಖಾತೆಗೆ ಹಾಕಿದ ರಕಮು ಲೆಕ್ಕಕ್ಕೆ ಹಚ್ಚಲಾಗಿ ಅದರ

ಮಾರ್ಗದಿಂದ ಕೊಡತಕ್ಕ ಬಡ್ಡಿಯು ಮತ್ತೂ ಕಡಿಮೆ ಆಗುತ್ತದೆ. ಈ ಮೇರೆಗೆ ಬಳಿಕೆಯ (ಚಾಲತೀ) ಖಾತೆಯಲ್ಲಿ ಸಾಲದ ವೈಶಿಷ್ಟ್ಯವಿರುವದು. ಇನ್ನು ಈ ಸಾಲವನ್ನು ಪಡೆಯುವ ರೀತಿಯ ಬಗೆಗೆ ವಿಚಾರಿಸುವೆವು. ಈ ಸಂದರ್ಭದಲ್ಲಿ ಖಾತೇದಾರರು ಕೊಡತಕ್ಕ ಮತ್ತು ಬ್ಯಾಂಕಿನವರು ತತ್ಕಾಲ ಸ್ವೀಕರಿಸಬಲ್ಲ ತಾರಣವು ಮಹತ್ವವಾದ ವಿಷಯವು. ತಾರಣದ ವರ್ಗವಾರಿಯು ಮತ್ತು ಅದರ ಸುರಕ್ಷಿತೆಯ ಕ್ರಮಾಂಕವು ಕೆಳಗೆ ಬರೆದಂತೆ ಇರುವದು :—

೧. ಖಾತೆದಾರರು ಅದೇ ಬ್ಯಾಂಕಿನಲ್ಲಿ ಮುದ್ದತಿ ಠೇವನ್ನು ಇಟ್ಟಿದ್ದರೆ ಮತ್ತು ಅದರ ವಸೂಲಿಯು ಕೆಲವು ಅವಧಿಯ ನಂತರ ಆಗುವಂತಿದ್ದಾಗ ತಮ್ಮ ಹತ್ತಿರಿದ್ದ ಮುದ್ದತಿ ಠೇವಿನ ಪಾವತಿಯನ್ನು ಬ್ಯಾಂಕಿನವರು ತಾರಣ (ಒತ್ತೆ) ವಾಗಿ ಸ್ವೀಕರಿಸುವರು. ಬೇರೆ ಬ್ಯಾಂಕಿನಲ್ಲಿಟ್ಟ ಠೇವಿನ ಪಾವತಿ ನಡೆಯುವದಿಲ್ಲ. ತಾರಣ (ಒತ್ತೆ) ವಾಗಿ ಕೊಡತಕ್ಕ ಪಾವತಿಯ ಹಿಂದಿನ ಭಾಗದಲ್ಲಿ ಬ್ಯಾಂಕಿನವರು ಸೂಚಿಸಿದ ಮೇರೆಗೆ ಸಹಿ ಮಾಡಬೇಕು. ಠೇವಿನ ರಕಮು ಸಾಮಾನ್ಯವಾಗಿ ಅದರ ಅವಧಿ ಮುಗಿಯುವ ವರೆಗೆ ಕೊಡಲಾಗದಿದ್ದರೂ ತಾರಣವಾಗಿ ಸ್ವೀಕರಿಸಲಾಗುವದು. ಈ ಮೇರೆಗೆ ಸಾಲ ಪಡೆದ ರಕಮಿನ ಬಡ್ಡಿಯ ದರವು ಇತರ ಸಾಲದಂತೆಯೇ ವಸೂಲ ಮಾಡಲಾಗುವದು. ಠೇವಿನ ಅವಧಿ ಮುಗಿಯುವ ದಿವಸ ಅದರ ಲೆಕ್ಕಮಾಡಿ ಬ್ಯಾಂಕಿನವರು ಕೊಡತಕ್ಕ ಬಡ್ಡಿ ಸಹಿತ ರಕಮು ಠೇವುದಾರರ ಖಾತೆಗೆ ಜಮಾ ಮಾಡಿ ಬಳಿಕೆಯ (ಚಾಲತಿ) ಖಾತೆಯಲ್ಲಿಯ ಸಾಲವನ್ನಾದರೂ ಬಡ್ಡಿ ಸಹಿತ ವಸೂಲ ಮಾಡಿಕೊಳ್ಳುವರು. ಈ ಪ್ರಕಾರದ ತಾರಣದ (ಒತ್ತೆ) ರಕಮಿನ ಮರ್ಯಾದೆಯು ಸಾಮಾನ್ಯವಾಗಿ ೧೦೦ಕ್ಕೆ ೯೦ ರೂ. ವರೆಗೆ ಇರುವದು. ಠೇವುದಾರರು ೧,೦೦,೦೦೦ ರೂಪಾಯಿಗಳನ್ನು ಠೇವು ಇಟ್ಟಿದ್ದರೆ ಅವರು ತಮ್ಮ ಬಳಿಕೆಯ (ಚಾಲತಿ) ಖಾತೆಯೊಳಗಿಂದ ಯೋಗ್ಯ ಶಿಲ್ಕಿಗಿಂತ ೯೦,೦೦೦ ರೂಪಾಯಿಗಳನ್ನು ಹೆಚ್ಚಾಗಿ ಪಡೆಯಬಹುದು.

೨. ಪೇಟೆಯಲ್ಲಿಯ ವ್ಯವಹಾರದಲ್ಲಿದ್ದ ಸರಕಾರದ, ಸ್ಥಾನಿಕ ಸಂಸ್ಥೆಗಳ, ಪ್ರಾಮಿಸರಿ ನೋಟುಗಳನ್ನು ತಾರಣವಾಗಿ ಬ್ಯಾಂಕಿನವರು ಸ್ವೀಕರಿಸುವರು. ಸಂಪನ್ನ ಮತ್ತು ಸುವ್ಯವಸ್ಥಿತವಿದ್ದ ಲಿಮಿಟೆಡ್ ಕಂಪನಿಗಳು ಮಾರಾಟಕ್ಕೆ ತೆಗೆದ ಡಿಬೆಂಚರ್ಸಗಳನ್ನೂ ಬ್ಯಾಂಕಿನವರು ಸ್ವೀಕರಿಸುವರು. ಈ ತರದ ವಿಶ್ವಾಸಪತ್ರಗಳು ಪೇಟೆಯಲ್ಲಿ ದಿನದ ವ್ಯವಹಾರದಲ್ಲಿದ್ದುದರಿಂದ ಅವುಗಳ ಬೆಲೆಯು ಬ್ಯಾಂಕಿನವರಿಗೆ ಗೊತ್ತಿದ್ದು, ಅವುಗಳನ್ನು ತಾವು ಯೋಗ್ಯ ಕಾಲಕ್ಕೆ ಮಾರಬಹುದೆಂಬ ವಿಶ್ವಾಸವಿದ್ದ ಮೂಲಕ ತಾರಣಗೋಸುಗ ಅವು ಮೇಲ್ತರದ್ದಾಗಿರುವವು. ಸಾಲವನ್ನು ಕೊಡುವಾಗ, ವಿಶ್ವಾಸಪತ್ರಗಳ ಪೇಟೆಯ ಧಾರಣೆಯು ೧೦೦ ರೂ.ಗಳದರೆ ೭೦-೮೦ ರೂಪಾಯಿಗಳ ತನಕ ರಕಮು ಕೊಡಲಾಗುವದು.

ಅದೇ ಮೇರೆಗೆ ಪೇಟೆಯಲ್ಲಿ ದಿನಾಲು ವ್ಯವಹಾರದಲ್ಲಿದ್ದ ಕಂಪನಿ ಶೇಅರುಗಳನ್ನಾದರೂ ತಾರಣವನ್ನಾಗಿ ಬ್ಯಾಂಕಿನವರು ಸ್ವೀಕರಿಸುವರು. ಸರಕಾರಿ, ಸ್ಥಾನಿಕ ಸಂಸ್ಥೆಗಳ ವಿಶ್ವಾಸಪತ್ರಗಳು ವ್ಯವಹಾರದಲ್ಲಿ ತತ್ಕಾಲ ಬರುವವು. ಕಂಪನಿ ಶೇಅರುಗಳು ವ್ಯವಹಾರದಲ್ಲಿ ಬರಲಿಕ್ಕೆ ಅವಧಿಯಿದ್ದು, ಮತ್ತು ಪೇಟೆಯ ಅಧಿಕಾರಿಗಳು (Stock Exchange Committee) ಆ ಶೇಅರುಗಳ ಪಾತ್ರತೆಯನ್ನು ಸಂಪೂರ್ಣವಾಗಿ ಗೊತ್ತುಮಾಡಿಕೊಂಡ ನಂತರ ಅವುಗಳ ವ್ಯವಹಾರವನ್ನು ಸಾಗಿಸುವದಕ್ಕೆ ದಲಾಲರಿಗೆ ಅಪ್ಪಣೆ ಕೊಡುವರು. ಆ ನಂತರ ಪೇಟೆಯ ಬೆಲೆಯು ಗೊತ್ತಾಗುವದು.

ಈ ಮೇರೆಗೆ ಶೇಅರುಗಳ ಅಧಿಕೃತ ಬೆಲೆಯು ಗೊತ್ತಾಗದಿದ್ದರೆ, ಬ್ಯಾಂಕಿನವರಿಗೆ ಪ್ರಸಂಗ ಬಂದಾಗ ಮತ್ತು ಯೋಗ್ಯ ಕಾಲಕ್ಕೆ ಅವುಗಳ ಮಾರಾಟವಾಗದಿದ್ದರೆ, ತಾರಣವು ತೀರ ಅಯೋಗ್ಯವಾದದ್ದು. ಈ ತಾರಣದ ಸಾಲದ ಮರ್ಯಾದೆಯು ೧೦೦ಕ್ಕೆ ೫೦-೬೦ ರ ವರೆಗೆ ಇಡಲಾಗುವದು.

ಮೇಲೆ ವಿವರಿಸಿದ ಮೂರು ಪ್ರಕಾರದ ತಾರಣಗಳು ಬಳಿಕೆ (ಚಾಲತಿ) ಖಾತೆಯಲ್ಲಿಯು ಸಾಲದಗೋಸುಗ ಯೋಗ್ಯವಾದವ್ಗಿರುವವು. ಅವುಗಳನ್ನು ತಾರಣವನ್ನಾಗಿ ಸ್ವೀಕರಿಸುವಾಗ ಆ ಆ ಪ್ರಕಾರದ ತಾರಣಕ್ಕೆ ಹೊಂದಿ ಇನ್ನೂ ಕೆಲವು ಕಾಗದಗಳನ್ನು ಖಾತೇದಾರರು ಒಪ್ಪಿಸಬೇಕಾಗುವದು. ಈ ವಿಷಯದ ಬಗ್ಗೆ ಮುಂದಿನ ಪ್ರಕರಣದಲ್ಲಿ ಇನ್ನೂ ಹೆಚ್ಚಿಗೆ ವಿವರಿಸುವೆವು.

**ಕ್ಯಾಶ್ ಕ್ರೆಡಿಟ್** (Cash Credit Accounts):—ಕೇವಲ ಬಳಿಕೆ (ಚಾಲತಿ) ಖಾತೆಯಲ್ಲಿಯೇ ಕೊಡತಕ್ಕ ಸಾಲವಾಗದಿದ್ದರೂ, ಅದಕ್ಕಿಂತ ತುಸು ಭೇದವುಳ್ಳ 'ಕ್ಯಾಶ್ ಕ್ರೆಡಿಟ್' ಎಂಬ ಹೆಸರಿನ ಸಾಲವನ್ನಾದರೂ ಬ್ಯಾಂಕಿನವರು ಕೊಡುವರು. 'ಓವ್ಹರ ಡ್ರಾಫ್ಟ' ಅಥವಾ ಬಳಿಕೆ ಖಾತೆಯಲ್ಲಿಯು ಸಾಲವು ಇದ್ದ ಬಳಿಕೆ ಖಾತೆಯ ಮುಖಾಂತರ ಕೆಲವೊಂದು ಮರ್ಯಾದೆಯ ವರೆಗೆ ಹೆಚ್ಚಿನ ಹಣವನ್ನು ಪಡೆಯುವ ಯೋಜನೆ ಇದು. ಯಾವ ಪ್ರಕಾರ ಈ ಮೊದಲು ಹೇಳಿದ ಮೇರೆಗೆ ಪಡೆಯುವ ಹಣವನ್ನು ಖಾತೆಗೆ ಹೊಂದಿದ ಚೆಕ್ಕುಗಳ ಮುಖಾಂತರವೇ ಪಡೆಯಬಹುದೋ, ಅದೇ ಮೇರೆಗೆ 'ಕ್ಯಾಶ್ ಕ್ರೆಡಿಟ್' ಖಾತೆಗೆ ಹೊಂದಿ ಯಾವರೂ ಖಾತೇದಾರರಿಗೆ ಬಳಿಕೆ ಖಾತೆಯ ಹೊರತಾಗಿ ಬೇರೊಂದು ಚೆಕ್ ಪುಸ್ತಕವನ್ನು ಕೇವಲ 'ಕ್ಯಾಶ್ ಕ್ರೆಡಿಟ್' ಖಾತೆಯಗೋಸುಗವೇ ಕೊಡುವರು. ಈ ಮಾರ್ಗವಾಗಿ ದೊರಕಿದ ಹಣವನ್ನು ಬಳಿಕೆ (ಚಾಲತಿ) ಖಾತೆಯಲ್ಲಿ ಹಾಕಿ ಅದನ್ನೇ ಮುಂದೆ ಸಾಗಿಸಬೇಕು, ಇಲ್ಲವೆ ಈ ಖಾತೆಯಲ್ಲಿಯ ಚೆಕ್ಕನ್ನೇ ವ್ಯವಹಾರದಲ್ಲಿ ಕೊಡುತ್ತ ಹೋಗಬೇಕು. 'ಕ್ಯಾಶ್ ಕ್ರೆಡಿಟ್' ಈ ಶಬ್ದಗಳನ್ನು ಅನುವಾದಿಸಲು ಕಠಿಣವಾದುದರಿಂದ ಅವುಗಳನ್ನು ಹಾಗೆಯೇ ಉಪಯೋಗಿಸುವದು ವಿಹಿತವಾಗುವದು.

ಬ್ಯಾಂಕುಗಳಿಂದ ಸಾಲವನ್ನು ಪಡೆಯುವ ಮಾರ್ಗಗಳು ಮೂರು ತರಹದವು. (೧) ಬಳಿಕೆ (ಚಾಲತಿ) ಖಾತೆಯಲ್ಲಿ 'ಓವ್ಹರ ಡ್ರಾಫ್ಟ' ಯೋಜನೆಯು; (೨) 'ಕ್ಯಾಶ್ ಕ್ರೆಡಿಟ್' ಯೋಜನೆಯು; (೩) 'ಲೋನ್' ಅಂದರೆ ಸಾಮಾನ್ಯವಾಗಿ ಪಡೆಯುವ ಸಾಲ. ನಾವು 'ಓವ್ಹರ ಡ್ರಾಫ್ಟ'ದ

ಬಗ್ಗೆ ಮೇಲೆ ಸ್ವಲ್ಪದರಲ್ಲಿ ಹೇಳಿದೆವು. ಇನ್ನು 'ಕ್ಯಾಶ್ ಕ್ರೆಡಿಟ್' ಖಾತೆಯ ಬಗ್ಗೆ ವಿಚಾರಿಸುವಾ.

ಈ ಯೋಜನೆಯು ಧನಿಕ ವ್ಯಾಪಾರಿಗರಿಗೆ ಉಪಯುಕ್ತವಾದದ್ದು. ತಮ್ಮ ನಿಯೋಜಿತ ವ್ಯಾಪಾರದಲ್ಲಿ ವಿಪುಲವಾಗಿ ಸರಕುಗಳನ್ನು ಇಡಬೇಕಾದರೆ ಮತ್ತು ಆ ವಸ್ತುವನ್ನು ದೊರಕಿಸುವದಕ್ಕೆ ಅನಿಶ್ಚಿತ ಕಾಲಾವಧಿಯಿದ್ದರೆ ಅದಕ್ಕಾಗಿ ಹೆತ್ತುವ ಹಣದ ಪೂರ್ವಯೋಜನೆಯನ್ನು ಕಲ್ಪಿಸಬೇಕಾಗುವದು. ಇದ್ದ ದುಡ್ಡನ್ನು ಬಳಿಕೆ (ಚಾಲತಿ) ವ್ಯಾಪಾರದಿಂದ ಒಮ್ಮೆಲೇ ತೆಗೆದು ಸಂಚಯಿಸುವದು ಕಠಿಣವಾಗಿ ಕಂಡಕೂಡಲೆ ಬೇರೊಂದು ಯೋಜನೆಯನ್ನು ಕಲ್ಪಿಸಬೇಕಾಗುವದು. ಇಂಥ ಕಾಲಕ್ಕೆ ಬ್ಯಾಂಕಿನವರು ಕೊಡತಕ್ಕ 'ಕ್ಯಾಶ್ ಕ್ರೆಡಿಟ್' ಖಾತೆಗನುಸಾರವಾಗಿ ಮುಂದೆ ಬೇಕಾಗುವ ಹಣದ ಬಗ್ಗೆ ವಿಚಾರಿಸಬೇಕು.

ದೊಡ್ಡ ವ್ಯಾಪಾರಿಗಳು ಹೆಸರಾದವರೂ ವಿಪುಲ ಆಸ್ತಿಯುಳ್ಳವರೂ ಇದ್ದುದು, ಬ್ಯಾಂಕಿನವರಿಗೆ ಗೊತ್ತಿರುವದು. ಮತ್ತು ಅವರ ಇತರ ಖಾತೆಗಳಾದರೂ ಬ್ಯಾಂಕಿನಲ್ಲಿದ್ದುದರಿಂದ, ಅದರ ಮುಖಾಂತರವಾಗಿ ಎಷ್ಟೋ ಸಂಗತಿಗಳು ಗೊತ್ತಾಗುವವು. ಇಂಥ ಶ್ರೀಷ್ಠಿಗಳು ಬೇಡಿದಾಗ ಸುರಕ್ಷಿತವಾಗಿ ಬ್ಯಾಂಕಿನವರು ಹಣವನ್ನು ಪೂರೈಸಬಲ್ಲರು. ಈ ಪ್ರಕಾರ ವಿಶೇಷ ತೊಂದರೆಯಿಲ್ಲದೆ, ಹಣವನ್ನು ದೊರಕಿಸಬಹುದಾದ್ದರಿಂದ ಖಾತೆದಾರರಾದರೂ ತಮ್ಮ ಪಟ್ಟಿಗೆ ಬ್ಯಾಂಕಿನವರ ಕೂಡ ಇದ್ದ ವ್ಯವಹಾರವನ್ನು ಮತ್ತು ಕೈಕೊಂಡ ವ್ಯವಹಾರವನ್ನು ತಾವು ನಿಯೋಜಿಸಿದ ಮತ್ತು ಬ್ಯಾಂಕಿನವರಿಗೆ ಆಶ್ವಾಸನ ಕೊಟ್ಟ ಮೇರೆಗೆ ನಡೆಯುವಂತೆ ಮಾಡಬೇಕು. ಕಾರಣ, ಇಂಥ ಯೋಜನೆಯು ಕೇವಲ ಖಾತೇದಾರರ ವ್ಯವಹಾರ ದಕ್ಷತೆಯ ಮೂಲಕವಾಗಿಯೇ ಮಾಡಲಾಗುವದು. ಅದವು ಕೇವಲ ಖಾತೇದಾರರ ವೈಯಕ್ತಿಕ ಸ್ವರೂಪದ್ದಿರುವದು. ಪಡೆದ ಹಣವನ್ನು ಇಂತಿಷ್ಟು ಅವಧಿಯಲ್ಲಿ ಬ್ಯಾಂಕಿನವರಿಗೆ ತಿರುಗಿ ಕೊಡುವ ಬಗ್ಗೆ ಬರೆದು ಕೊಟ್ಟ ವಚನಪತ್ರವೊಂದೇ ಅದವು. ಈ ಪತ್ರವನ್ನು ಒಬ್ಬರಾಗಲಿ, ಇಲ್ಲವೆ ಅವರ ಜೊತೆಗೆ ಇನ್ನೊಬ್ಬ ಸಹೋದ್ಯೋಗಿಯಾಗಲಿ ಸಹಿ ಮಾಡುವರು.

ಈ ಕ್ರಮದಿಂದ ಮಾಡಿಟ್ಟ ಯೋಜನೆಯ ಪ್ರಕಾರ ಖಾತೇದಾರರು ತಮಗೆ ಕೊಡಲ್ಪಟ್ಟ ಚೆಕ್ಕಿನ ಮುಖಾಂತರವಾಗಿ ಬೇಕಾದಾಗ ಬೇಕಾದಷ್ಟು ಹಣವನ್ನು ತೆಗೆಯಬಹುದು. ಅಂದರೆ, ಬ್ಯಾಂಕಿನವರು ೧ ಲಕ್ಷ ರೂಪಾಯಿಗಳನ್ನು ಕೊಡಲೊಪ್ಪಿದಾಗ, ಖಾತೇದಾರರು ಒಮ್ಮೆಲೇ ಒಂದು ಚೆಕ್ಕಿನಿಂದ ಎಲ್ಲ ಹಣವನ್ನಾದರೂ ತೆಗೆಯಬಹುದು, ಅಥವಾ ಕಾಲಕಾಲಕ್ಕೆ ಬೇಕಾದಷ್ಟು ಹಣವನ್ನು ಪಡೆಯಬಹುದು. ಹೀಗೆ ಹಣವನ್ನು ತೆಗೆಯುವಗೋಸುಗ ಬ್ಯಾಂಕಿನವರಿಗೆ ಪೂರ್ವಸೂಚನೆಯನ್ನು ಕೊಡಬೇಕೆಂಬ ಬಗ್ಗೆ ಮಾತಿಲ್ಲದ್ದರಿಂದ, ಬ್ಯಾಂಕಿನವರು ಯಾವಾಗಲೂ ಕೈಯಲ್ಲಿ ಸಾಕಷ್ಟು ಹಣವನ್ನು ಇಟ್ಟುಕೊಳ್ಳಬೇಕಾಗುವದರಿಂದ ಅಧಿಕಾರಿಗಳು ತಮಗೆ ಸಾಕಷ್ಟು ಬಡ್ಡಿಯು ಇಂಥ ಪ್ರಸಂಗದಲ್ಲಿ ಸಿಗುವಂತೆ ಮೂಲಯೋಜನೆಯಲ್ಲಿ ಒಂದು ಕಲಮು ಹಾಕಿರುವರು. ಅದರ ಪ್ರಕಾರ, ಖಾತೇದಾರರು ಹಣವನ್ನು ತೆಗೆಯದೆ ಇದ್ದರೂ ಸಹಿತ ಒಂದು ಲಕ್ಷ ರೂಪಾಯಿ ಮರ್ಯಾದೆಯ ಅರ್ಧ ರಕಮಿನ ಬಡ್ಡಿಯನ್ನು ವಸೂಲ ಮಾಡಲಾಗುವದು. ಇದಕ್ಕೆ 'ಕ್ಯಾಶ್ ಕ್ರೆಡಿಟ್' ಖಾತೆಯಲ್ಲಿಯ 'ಅರ್ಧ ಬಡ್ಡಿಯ ಕಲಮು' (Half Interest Clause) ಎಂದು ಹೆಸರಿರುರುವದು. ಈ ಪ್ರಕಾರ ಖಾತೆಯು ವಿಶೇಷ ರೂಢಿಯಲ್ಲಿ ಇಲ್ಲದ್ದರಿಂದ ಇನ್ನು ವಿಶೇಷ ಏನೂ ಹೇಳಬೇಕಾಗಿಲ್ಲ.

**ಬಳಿಕೆ (ಚಾಲತಿ) ಖಾತೆಯಲ್ಲಿಯ ಚೆಕ್ಕುಗಳ ವಸೂಲಿಯ ಕ್ರಮ:—** ಬ್ಯಾಂಕುಗಳು ಮಾಡತಕ್ಕ ವಿವಿಧ ತರದ ವ್ಯವಹಾರಗಳಲ್ಲಿ, ಚೆಕ್ಕುಗಳು ಮತ್ತು ಅವುಗಳಿಗೆ ಸಂಬಂಧಿಸಿದ ವಸೂಲಿಯು ಮಹತ್ವವಾದದ್ದಿರುವದು. ಹಣದ ವಸೂಲಿಯು ಕೇವಲ ಚೆಕ್ಕುಗಳಿಗೆಯೇ ಹೊಂದಿದ್ದು ಇರದೆ, ಇನ್ನೂ ತತ್ಸಮ ಅನೇಕ ಪ್ರಕಾರದ ವಸೂಲಿಯ ಕಾರ್ಯಭಾಗವನ್ನು ಬ್ಯಾಂಕಿನವರು ಸಾಗಿಸುವರು. ಪ್ರಸ್ತುತ ಭಾಗದಲ್ಲಿ ನಾವು ಚೆಕ್ಕುಗಳಿಗೆ ಸಂಬಂಧಿಸಿದ ವಿಷಯವನ್ನು ವಿಚಾರಿಸುವೆವು. ಕೆಳಗೆ ಹಾಕಿದ ಆಕೃತಿಯಿಂದ ಚೆಕ್ಕುಗಳಿಗೆ ಹೊಂದಿದ ವ್ಯವಹಾರದ ಬಗ್ಗೆ ಕಲ್ಪನೆ ಬರುವಂತಿದೆ.

## ಚೆಕ್ಕುಗಳು

(೧) ರೋಖು ಕೊಡತಕ್ಕ ಸಾದಾ ಚೆಕ್ಕುಗಳು

(೨) ಸಾದಾ ವಸೂಲಿ ಮಾಡತಕ್ಕ ಚೆಕ್ಕುಗಳು

(೩) ಅದೇ ಬ್ಯಾಂಕಿನಲ್ಲಿಯ ಇತರ ಖಾತೆಯ ಚೆಕ್ಕುಗಳು

(೪) ಬೇರೆ ಬ್ಯಾಂಕುಗಳ ಖಾತೆಗಳ ಚೆಕ್ಕುಗಳು

(೫) ಅದೇ ಪಟ್ಟಣದಲ್ಲಿಯ ಬೇರೆ ಬ್ಯಾಂಕುಗಳ ಖಾತೆಗಳ ಚೆಕ್ಕುಗಳು

(೬) ಇತರ ಪಟ್ಟಣಗಳಲ್ಲಿಯ ಬೇರೆ ಬ್ಯಾಂಕುಗಳ ಖಾತೆಗಳ ಚೆಕ್ಕುಗಳು

(೭) ಇತರ ಪಟ್ಟಣಗಳಲ್ಲಿಯ ಅದೇ ಬ್ಯಾಂಕಿನ ಶಾಖೆಗಳಲ್ಲಿಯ ಖಾತೆಗಳ ಚೆಕ್ಕುಗಳು

**೧. ರೋಖು ಹಣ ಪಡೆಯುತಕ್ಕ ಚೆಕ್ಕುಗಳು:**— ಚೆಕ್ಕಿನಲ್ಲಿ ಬರೆದ ವ್ಯಕ್ತಿಯಾಗಲಿ, ಆತನ ಚೆಕ್ಕುಗಳ ಸಲುವಾಗಿ ಇನ್ನೊಬ್ಬನಾಗಲಿ ಚೆಕ್ಕನ್ನು ಬ್ಯಾಂಕಿಗೆ ಒಯ್ದು ಹಣವನ್ನು ಪಡೆಯಬಹುದು. ಸುಲಭವಾಗಿ ಮತ್ತು ಕೂಡಲೆ ಹಣ ಸಿಗುವಂತೆ ಚೆಕ್ಕುಗಳನ್ನು ಖಾತೇದಾರರು ಹೇಗೆ ಬರೆಯಬೇಕೆಂಬುದರ ಬಗ್ಗೆ ನಾವು ಪೂರ್ವದಲ್ಲಿ ತಿಳಿಸಿರುವೆವು. ಚೆಕ್ 'ಕ್ರಾಸ್' ಇಲ್ಲದೆ ಇದ್ದು ಮತ್ತು 'ಬೇರರ್' ಇದ್ದರೆ, ಹಣ ಸಿಗಲು ವಿಲಂಬವಾಗುವದಿಲ್ಲ. ಅದು 'ಕ್ರಾಸ್' ಇದ್ದರೆ, ಯಾವ ವ್ಯಕ್ತಿಗೂ ಹಣ ಸಿಗುವದಿಲ್ಲ.

ಇದು 'ಆರ್ಡರ್' ಇದ್ದರೆ ಚೆಕ್ಕಿನಲ್ಲಿ ಬರೆದ ವ್ಯಕ್ತಿಯು ಚೆಕ್ಕಿನ ಹಿಂಭಾಗದಲ್ಲಿ ತನ್ನ ಹೆಸರನ್ನು ಬರೆದು ಮತ್ತು ಪರಿಚಯವನ್ನು ಸಲ್ಲಿಸಿದ ನಂತರವೇ ಹಣವು ಸಿಗುವದು. ಚೆಕ್ಕಿನಲ್ಲಿದ್ದ ಹೆಸರಿನ ಬ್ಯಾಂಕಿನಲ್ಲಿ, ಇಲ್ಲವೆ ಬ್ಯಾಂಕಿನ ಶಾಖೆಯಲ್ಲಿಯೇ ಹಣವು ಸಿಗುವದು. ಒಂದು ಬ್ಯಾಂಕಿನ ಚೆಕ್ಕನ್ನು ಇನ್ನೊಂದು ಬ್ಯಾಂಕಿಗೆ ಒಯ್ದರೆ ಹಣವು ಸಿಗುವಂತಿಲ್ಲ. ಆದರೆ, ತಕ್ಕ ಚೆಕ್ಕನ್ನು ತಕ್ಕ ಬ್ಯಾಂಕಿಗೆ ಇಲ್ಲವೆ ಬ್ಯಾಂಕಿನ ಶಾಖೆಗೆ ಒಯ್ದು ಹಣ ದೊರಕಿಸಬೇಕು.

ಚೆಕ್ಕನ್ನು ಒಯ್ಯತಕ್ಕವನು ಅದನ್ನು ಬ್ಯಾಂಕಿನ ಅಧಿಕಾರಿಗೆ ಒಪ್ಪಿಸಿ, ಅವರು ಸೂಚಿಸಿದ ಮೇರೆಗೆ ಸಹಿ ಮಾಡಬೇಕು. ಮತ್ತು ಯೋಗ್ಯ ವ್ಯಕ್ತಿಗೆ ಹಣವು ಮುಟ್ಟಬೇಕೆಂದು ಒಂದು ಪದಕವನ್ನು (Token) ಬ್ಯಾಂಕಿನವರು ಕೊಡುವರು. ಈ ಪದಕದಲ್ಲಿಯ ನಂಬರು ಚೆಕ್ಕನ್ನು ಖಾತೆಯಲ್ಲಿ ಬರೆಯುವಾಗ ಬರೆದಿಟ್ಟು, ಅದರ ಖತಾವಣಿ ಮಾಡಿದ ನಂತರ ಸಹಿಯು ಸರಿಯಾಗಿ ಇದ್ದ ಬಗ್ಗೆ ಮತ್ತು ಇತರ ಸಂಗತಿಗಳು ಯೋಗ್ಯವಾಗಿ ಬರೆದ ಬಗ್ಗೆ ನಿಶ್ಚಯ ಮಾಡಿಕೊಂಡು, ಅದನ್ನು, ಹಣವನ್ನು ಕೊಡತಕ್ಕವನ ಕಡೆಗೆ ಕಳಿಸುವರು. ನಂತರ, ಹಣ ಕೊಡುವ ಅಧಿಕಾರಿಯು ಚೆಕ್ಕಿನ ಹಿಂಭಾಗದಲ್ಲಿ ಸಹಿ ಮಾಡಿದವರನ್ನು ಕರೆದುಕೊಂಡು ಅವನ ಹತ್ತಿರಿದ್ದ ಪದಕವನ್ನು ತಿರುಗಿ ತೆಗೆದುಕೊಂಡು ಹಣವನ್ನು ಎರಡು ಮೂರು ಸಲ ಎಣಿಸಿ ಕೊಡುವನು.

ಚೆಕ್ಕಿನ ಹಣವು ತೀವ್ರವಾಗಿ ಸಿಗುವದಿಲ್ಲ. ಅಧಿಕಾರಿಗಳು ಹಣವನ್ನು ಕೊಡುವಾಗ ವಿನಾಕಾರಣ ವಿಲಂಬ ಮಾಡುವರೆಂಬ ದೂರನ್ನು ನಾವು ಆಗಾಗ್ಗೆ ಕೇಳುವೆವು. ಮತ್ತು ಈ ವಿಷಯವು ಬ್ಯಾಂಕಿನ ಬಗ್ಗೆ ಚರ್ಚೆಯ ಮೂಲ ವಿಷಯವಾಗಿರುವದು. ಸಾಧಾರಣವಾಗಿ, ಯೋಗ್ಯ ಚೆಕ್ಕಿನ ಹಣವು ೫–೧೦ ಮಿನಿಟಿನಲ್ಲಿ ಸಿಗಬೇಕೆಂಬುದರ ಬಗ್ಗೆ ಸಂದೇಹವಿಲ್ಲ. ಆದರೆ ಕೆಲವು ಕಚೇರಿಗಳಲ್ಲಿ ೩–೪ ತಾಸು ದಾರಿ ನೋಡಬೇಕಾಗುವದು. ಈ ವಿಧಾನವನ್ನು ನಾವು ನಿರಾಕರಿಸಲಾರೆವು. ಜನರು ಬ್ಯಾಂಕಿನ ರೂಢಿಯನ್ನು ವಿಚಾರಿಸಿದರೆ ಕೆಲಕಾಲ ವಿಲಂಬವಾಗದೇ ಇರಲಾರದೆಂಬುದು ತಿಳಿದು ಅವರಿಗೆ ಸಮಾಧಾನವಾಗಬಹುದು. ನಮ್ಮ ಬ್ಯಾಂಕುಗಳಲ್ಲಿಯು

ಖಾತೇದಾರರು, ಬರೆದ ಚೆಕ್ಕುಗಳ ಹಣವನ್ನು ತಡವಿಲ್ಲದೆ ಮುಟ್ಟಿಸುವಂತೆ ಸಾಕಷ್ಟು ಶಿಲ್ಕು ಇಡುವದಿಲ್ಲ. ಇದು ಖೇದದ ಸಂಗತಿಯು. ಇದಕ್ಕೆ ಅನೇಕ ಅಪವಾದಗಳು ಇದ್ದರೂ ಸಾಮಾನ್ಯ ವಸ್ತುಸ್ಥಿತಿಯನ್ನು ನಾವು ತಿಳಿದುಕೊಳ್ಳಬೇಕು. ಪರಊರಿನಲ್ಲಿಯ ಬ್ಯಾಂಕುಗಳ ಚೆಕ್ಕುಗಳನ್ನು ಖಾತೆಯಲ್ಲಿ ತುಂಬಿ ಅವುಗಳ ಹಣವು ಬರದೆ ಇದ್ದರೂ, ಹಣದ ವಸೂಲಿ ಆಗಿರಬಹುದೆಂದು ಅನುಮಾನಿಸಿ ಚೆಕ್ಕುಗಳನ್ನು ಕೊಟ್ಟುಬಿಡುವರು. ಇದೆಲ್ಲವನ್ನು ಸೂಕ್ಷ್ಮವಾಗಿ ಪರೀಕ್ಷಿಸದ ಹೊರತು ಕೊಟ್ಟ ಚೆಕ್ಕು ಯೋಗ್ಯವಿದ್ದಂತೆ ತತ್ಕಾಲ ಹಣವನ್ನು ಕೊಡಲಾಗದು. ಇದಕ್ಕೆ ತುಸು ವಿಲಂಬವಾಗಬಹುದು. ಒಬ್ಬ ಅಧಿಕಾರಿಯು ಸುಮಾರು ೨೫೦-೩೦೦ ಖಾತೆಗಳನ್ನಿಡುವವನಿದ್ದುದರಿಂದ ಒಂದೇ ಸಮಯಕ್ಕೆ ಹತ್ತೆಂಟು ಜನರು ತಮ್ಮ ಚೆಕ್ಕುಗಳನ್ನು ಕೊಟ್ಟಾಗ, ಒಂದೊಂದು ಖಾತೆಯನ್ನು ತೆಗೆದು ಒಂದೊಂದು ಚೆಕ್ಕನ್ನು ದಕ್ಷತೆಯಿಂದ ಬರೆಯಲಿಕ್ಕಾದರೂ ಕೆಲಕಾಲ ಅವಧಿಯು ಬೇಕು. ಚೆಕ್ಕುಗಳನ್ನು ಖಾತೆಗಳಲ್ಲಿ ಬರೆದ ನಂತರ ಅದರ ಹಣವನ್ನು ಕೊಡುವ ಬಗ್ಗೆ ಪಡೆಯುವಗೋಸುಗ ಅವುಗಳನ್ನು ವರಿಷ್ಠ ಅಧಿಕಾರಿಯ ಅನುಮೋದನೆಗೆ ಕಳಿಸಲಾಗುವವು. ಈ ಅಧಿಕಾರಿಯು ಬೇರೊಂದು ಕೆಲಸದಲ್ಲಿ ತೊಡಗಿದ್ದರೆ ಮತ್ತಷ್ಟು ಕಾಲ ಅವನೆದುರಿಗೆ ಇವು ಇಡಲಾಗುವವು. ಚೆಕ್ಕುಗಳನ್ನು ಒಂದು ನಿಟ್ಟಿನಿಂದ ಇನ್ನೊಂದು ನಿಟ್ಟಿಗೆ ಒಯ್ಯುವವನು ಎಲ್ಲಿಯಾದರೂ ಹೋಗಿದ್ದರೆ ಮತ್ತಿಷ್ಟು ವಿಲಂಬವಾಗುವದು. ಈಚೆಗೆ ಈ ರೂಢಿಯು ಬದಲಾಗುತ್ತಿದೆ, ಮತ್ತು ಜನರಿಗೆ ಚೆಕ್ಕಿನ ಹಣವು ಶೀಘ್ರವಾಗಿ ಸಿಗುವಂತೆ ಯೋಜನೆಯನ್ನು ಅನೇಕ ಬ್ಯಾಂಕಿನವರು ಮಾಡಿರುವರು. ಕೆಲವು ಬ್ಯಾಂಕುಗಳಲ್ಲಿ ಒಬ್ಬ ಅಧಿಕಾರಿಯು ಕೇವಲ ಜನರ ಸಹಾಯಕ್ಕಾಗಿ ಅತ್ತಿತ್ತ ಅಡ್ಡಾಡಿ ಜನರ ಕೆಲಸವನ್ನು ಶೀಘ್ರವಾಗಿ ಮಾಡಿಕೊಡುವನು.

ಪರರಾಷ್ಟ್ರಗಳಲ್ಲಿ ಪ್ರವಾಸ ಮಾಡಿದವರು ಆ ದೇಶಗಳಲ್ಲಿಯ ಬ್ಯಾಂಕಿನವರು ನಾಲ್ಕಾರು ಮಿನಿಟುಗಳಲ್ಲಿ ಚೆಕ್ಕುಗಳ ಹಣವನ್ನು ಕೊಡುವಾಗ ನಮ್ಮ ಬ್ಯಾಂಕಿನವರು ಮಾತ್ರ ಹಾಗೆ ಮಾಡದ್ದಕ್ಕೆ ನಮಗೆ ಎಷ್ಟೋ ಸಲ ನಿಂದಿಸುವರು. ಇದಾದರೂ ನಿಜವಾದ ಮಾತು. ಲಂಡನದಲ್ಲಿಯ ಒಂದು ಬ್ಯಾಂಕಿಂಗ ಕಂಪನಿಯಲ್ಲಿ ನಮ್ಮದೇ ಖಾತೆ ಇದ್ದು, ಹಣ ತೆಗೆಯಲಿಕ್ಕೆ

ಹೋದಾಗ ಒಂದೆರಡು ಮಿನಿಟುಗಳಲ್ಲಿಯೇ ಹಣ ಪಡೆದದ್ದು ನಮ್ಮ ಪ್ರತ್ಯಕ್ಷ ಅನುಭವವಿರುವದು. ಅದರ ಕಾರಣವೇನಂದರೆ, ಆ ದೇಶದಲ್ಲಿಯ ಬ್ಯಾಂಕುಗಳ ಖಾತೇದಾರರು ತೀರ ದಕ್ಷತೆಯಿಂದ ತಮ್ಮ ಖಾತೆಯನ್ನಿಡುವರು. ಮತ್ತು ಸಾಮಾನ್ಯವಾಗಿ ಅವರು ವ್ಯವಹಾರದಲ್ಲಿಯೂ ವಿಶೇಷ ನಿಯಮಿತರಾದುದರಿಂದ ಇಂಥ ನಾಗರಿಕರ ಖಾತೆಗಳಾದರೂ ಸುಸೂತ್ರವಾಗಿರುವವು. ಖಾತೆದಾರರು ತಮ್ಮ ಚೆಕ್ಕುಗಳನ್ನು ಪ್ರತ್ಯಕ್ಷ ಹಣ ಕೊಡತಕ್ಕ ಅಧಿಕಾರಿಗೆ ಒಪ್ಪಿಸುವರು, ಮತ್ತು ಅದೇ ಸಮಯಕ್ಕೆ ಹಣ ತೆಗೆದುಕೊಳ್ಳುವರು. ಈ ಕ್ರಮದ ನಂತರ, ಆ ಚೆಕ್ಕು ಖಾತೆಯಲ್ಲಿ ಬರೆಯಲಾಗುವದು. ಅಂದರೆ, ನಮ್ಮ ಕಡೆಗಿದ್ದ ರೂಢಿಯ ವಿರುದ್ಧ ಪದ್ಧತಿಯಿಂದ ಆ ದೇಶದಲ್ಲಿಯ ಬ್ಯಾಂಕುಗಳ ಕಾರ್ಯ ನಡೆಯುವದು. ನಮ್ಮ ಬ್ಯಾಂಕಿನವರು ಮೊದಲು ಚೆಕ್ಕನ್ನು ಖಾತೆಯಲ್ಲಿ ಬರೆದ ನಂತರ ಹಣವನ್ನು ಕೊಡುವರು. ಅಲ್ಲಿಯವರು ಹಣ ಕೊಟ್ಟ ನಂತರ ಚೆಕ್ಕನ್ನು ಖಾತೆಯಲ್ಲಿ ಬರೆಯುವರು. ಇನ್ನೊಂದು ಕಾರಣವೇನಂದರೆ, ಆ ದೇಶದಲ್ಲಿಯ ಬ್ಯಾಂಕುಗಳಲ್ಲಿ ಕಾಗದಗಳನ್ನು ಅತ್ತಿಂದಿತ್ತ ಒಯ್ಯುವ 'ಪಟ್ಟೇವಾಲಾ' ಜನರಿರುವದಿಲ್ಲ. ತಮ್ಮ ಕೆಲಸವನ್ನು ಕಾರಕೂನರು ತಾವೇ ಸಾಗಿಸುವರು. ನಮ್ಮ ಬ್ಯಾಂಕುಗಳಲ್ಲಿ ಮಾತ್ರ 'ಪಟ್ಟೇವಾಲಾ' ಜನರ ಹಾವಳಿ ಬಹಳ. ಅವರ ಹೊರತು ಕಾಗದಗಳು ಒಂದು ಮೇಜಿನಿಂದ ಇನ್ನೊಂದು ಕಡೆಗೆ ಸರಿಯುವದಿಲ್ಲ. ಇದೊಂದು ಕಟುಸತ್ಯವಾದ ಸಂಗತಿಯು. ನಮ್ಮ ದೇಶದಲ್ಲಿಯ ಬ್ಯಾಂಕಿನವರು 'ಪಟ್ಟೇವಾಲಾ' ಜನರನ್ನು ಕಡಿಮೆ ಮಾಡಿ, ಕೆಲಸ ಮಾಡುವ ವ್ಯಕ್ತಿಯು ತನ್ನ ಕಾಗದವನ್ನು ತಾನೇ ಮುಂದೆ ಸಾಗಿಸಿದರೆ ಕಚೇರಿಯಲ್ಲಿಯ ಕೆಲಸವು ಶೀಘ್ರವಾಗಿ ಸಾಗುವದೆಂಬುದರ ಬಗ್ಗೆ ನಮ್ಮ ದೃಢವಿಶ್ವಾಸವಿರುವದು.

೨. **ಹಣ ವಸೂಲಿ ಮಾಡತಕ್ಕ ಚೆಕ್ಕುಗಳು**:— ಮೇಲಿನ ಆಕೃತಿಯಲ್ಲಿಯ ವರ್ಗೀಕರಣದ ಮೇರೆಗೆ ಈ ತರದ ಚೆಕ್ಕುಗಳು ನಾಲ್ಕು ಪ್ರಕಾರದ್ದಿರುವವು.

(೧) ಠೇವುದಾರರ ಖಾತೆಗಳಿದ್ದ ಬ್ಯಾಂಕಿನಲ್ಲಿಯ ಇತರ ಖಾತೇದಾರರು ಅವರವರ ವ್ಯವಹಾರಕ್ಕನುಸರಿಸಿ ಮುಟ್ಟಿಸತಕ್ಕ ಹಣವನ್ನು ಚೆಕ್ಕಿನ

ಮು ಖಾಂತರವಾಗಿ ಕೊಟ್ಟರೆ ಇಂಥ ಚೆಕ್ಕುಗಳನ್ನು ಠೇವುದಾರರು ರೋಖ ಹಣವನ್ನು ತುಂಬುವಂತೆಯೇ ಅವುಗಳನ್ನು ತಮ್ಮ ಖಾತೆಗಳಲ್ಲಿ ತುಂಬ ಬಹುದು. ದಿನದ ಲೆಕ್ಕದಲ್ಲಿ ಈ ಚೆಕ್ಕುಗಳ ಖತಾವಣಿಮಾಡಲಾಗಿ ಠೇವು ದಾರರ ಖಾತೆಕ್ಕೆ ಈ ಚೆಕ್ಕುಗಳ ಹಣವು ಜಮಾ ಮಾಡಲಾಗುವದು. ಆದರೆ ಇಂಥ ಚೆಕ್ಕುಗಳ ರಕಮು ಠೇವುದಾರರಿಗೆ ಅದೇ ದಿವಸ ವಸೂಲಿ ಮಾಡಿ ಕೊಡಲಾಗುವದು. ಮಾತ್ರ, ಈ ರೀತಿಯಿಂದ ತುಂಬಿದ ಚೆಕ್ಕುಗಳು ಬ್ಯಾಂಕಿನ ವ್ಯವಹಾರದ ಯೋಗ್ಯ ಸಮಯದಲ್ಲಿ ತುಂಬಿದಾಗ ಅವುಗಳ ವಸೂಲಿ ಅದೇ ದಿನವೇ ಆಗುವದು. ಏನಾದರೊಂದು ಕಾರಣದ ಮೂಲಕ ಚೆಕ್ಕಿನ ಹಣವು ವಸೂಲಾಗದಿದ್ದರೆ, ತುಂಬಿದ ಚೆಕ್ಕು ಠೇವುದಾರರಿಗೆ ಮರುದಿನ ಪರತು ಮುಟ್ಟುವಂತೆ ಮಾಡಲಾಗುವದು. ಅದೇ ಬ್ಯಾಂಕಿನ ಲ್ಲಿಯ ಖಾತೆಗಳ ಚೆಕ್ಕುಗಳ ಹಣವಾಗಲಿ, ಇಲ್ಲವೆ ತಿರುಗಿ ಕೊಟ್ಟ ಚೆಕ್ಕಾ ಗಲಿ, ೨೪ ತಾಸಿನ ಅವಧಿಯಲ್ಲಿ ಠೇವುದಾರರಿಗೆ ಸಿಗುವದು. ಮಧ್ಯಂತರ ದಲ್ಲಿ ಬ್ಯಾಂಕಿಗೆ ರಜಾ ಇದ್ದರೆ ಒಂದು ದಿವಸ ಈ ಕ್ರಮವು ಮುಗಿಯಲಿಕ್ಕೆ ತಡವಾಗಬಹುದು.

(ii) ಇದರಂತೆಯೇ ಬೇರೊಂದು ಬ್ಯಾಂಕಿನಲ್ಲಿಯ ಖಾತೆಗಳ ಚೆಕ್ಕುಗಳು ಖಾತೇದಾರರು ಸ್ವೀಕರಿಸಿದಾಗ ಮೇಲೆ ತಿಳಿಸಿದಂತೆ ಅವುಗಳ ನ್ನಾದರೂ ತಮ್ಮ ಖಾತೆಗಳಲ್ಲಿ ತುಂಬಬಹುದು. ಆ ಬ್ಯಾಂಕು ಬೇರೆ ಪಟ್ಟಣದಲ್ಲಿದ್ದದ್ದಾಗಿರಬಹುದು. ಇಲ್ಲವೆ ಬೇರೆ ಪಟ್ಟಣದಲ್ಲಿಯದಾಗಿರ ಬಹುದು. ಅದೇ ಪಟ್ಟಣದಲ್ಲಿಯ ಖಾತೇದಾರರ ಬ್ಯಾಂಕಿನವರು ಅದೇ ದಿವಸ ಅದರ ವಸೂಲಿ ಮಾಡುವರು. ಕಾರಣ ಆ ಆ ಬ್ಯಾಂಕುಗಳ ಪರಸ್ಪರ ಯೋಜನೆಯ ಮೇರೆಗೆ ಅವರವರಲ್ಲಿಯ ವ್ಯವಹಾರವು ದಿನದ ತಕ್ಕ ಸಮ ಯಕ್ಕೆ ಮುಗಿಯಬೇಕಾಗುವದು. ಈ ತರದ ವಸೂಲಿಗೋಸುಗ ಬ್ಯಾಂಕಿ ನವರು ಸುಮಾರು ಮಧ್ಯಾನ್ಹ ೧೨ ಗಂಟೆಯ ವರೆಗೆ ಅದೇ ಊರಲ್ಲಿಯ ಇತರ ಬ್ಯಾಂಕುಗಳ ಚೆಕ್ಕುಗಳನ್ನು ಒತ್ತಟ್ಟಿಗೆ ಮಾಡಿ ತಮ್ಮ ಪ್ರತಿನಿಧಿ ಯನ್ನು ಪ್ರತಿ ಒಂದು ಬ್ಯಾಂಕಿಗೆ ಕಳಿಸುವರು. ಬ್ಯಾಂಕುಗಳಲ್ಲಿ ಪರಸ್ಪರ ಯೋಜನೆಯ ಮೇರೆಗೆ ಚೆಕ್ಕುಗಳ ಹಣದ ರೋಖ ವಸೂಲಿಯಿಂದಾಗಲಿ, ಇಲ್ಲವೆ ಒಂದೇ ಬ್ಯಾಂಕಿನಲ್ಲಿ ಎರಡೂ ಬ್ಯಾಂಕುಗಳು ಖಾತೆಯನ್ನಿಟ್ಟಿದ್ದರೆ

ಆ ಬ್ಯಾಂಕಿನ ಖಾತೆಯ ಮೇರೆಗೆ ತಮ್ಮ ತಮ್ಮ ಚೆಕ್ಕಿನಿಂದಾಗಲಿ, ರಕಮು ಮುಟ್ಟಿಸಿಕೊಳ್ಳುವರು. ಮೊದಲನೆಯ ಕ್ರಮದಿಂದ ಅಂದರೆ ರೋಖ ರಕಮಿನ ವಸೂಲಿಯಿಂದ—ಒಬ್ಬ ಪ್ರತಿನಿಧಿಯು ಒಂದು ಬ್ಯಾಂಕು ಕಚೇರಿಯಿಂದ ಇನ್ನೊಂದು ಬ್ಯಾಂಕು ಕಚೇರಿಗೆ ರಕಮನ್ನು ಹೇರಿಕೊಂಡು ಓಡಾಡುವ ಪ್ರಸಂಗ ಬರುವದು. ಕ್ರಮವು ಸುರಕ್ಷಿತವಾದದ್ದಲ್ಲೆಂದು ಕಂಡುಬಂದು, ಆ, ಆ, ಬ್ಯಾಂಕುಗಳು ತಮ್ಮ ಪರಸ್ಪರ ಅನಕೂಲತೆಯಿದ್ದ ಮೇರೆಗೆ ತಮ್ಮ ಸ್ವಂತ ಖಾತೆಗಳಲ್ಲಿಯ ಚೆಕ್ಕುಗಳ ಮುಖಾಂತರವೇ ವಸೂಲಿಯ ಕೆಲಸವನ್ನು ಸಾಗಿಸುವರು. ಎರಡನೆಯ ಬ್ಯಾಂಕಿನವರು ತಮ್ಮ ಖಾತೇದಾರರ ಚೆಕ್ಕುಗಳನ್ನು ಯಾವದೇ ಕಾರಣದ ಮೂಲಕ ಪರತು ಮಾಡಬೇಕಾಗಿದ್ದರೆ, ಅದನ್ನಾದರೂ ಅದೇ ದಿನ ಅದೇ ಕಾಲಕ್ಕೆ ಪರತು ಮಾಡುವರು. ಅಂದರೆ, ಒಂದೇ ಊರಲ್ಲಿಯ ಖಾತೆಗಳ ಚೆಕ್ಕುಗಳ ಲೆಕ್ಕವು ಅದೇ ದಿವಸ ಮುಗಿಯುವದು. ಉದಾಹರಣೆ — ಪುಣೆ ಪಟ್ಟಣದಲ್ಲಿ ಸುಮಾರು ೨೮-೩೦ ಬ್ಯಾಂಕು ಕಚೇರಿಗಳಿರುವವು. ಇವುಗಳಲ್ಲಿ ಸುಮಾರು ೪-೬ ಸಹಕಾರೀ ಬ್ಯಾಂಕುಗಳು ಸಮಾವೇಶವಾಗಿರುವವು. ಕೆಲವು ಕಚೇರಿಗಳಲ್ಲಿಯ ದಿನದ ಕಾರ್ಯವು ಮುಂಜಾನೆ ಸಂಜೆಗೆ ಸಾಗುವದು. ವ್ಯಾಪಾರೀ ಬ್ಯಾಂಕುಗಳು ರೂಢಿಯ ಮೇರೆಗೆ. ಬೆಳಿಗ್ಗೆ ೧೦-೩೦ಯಿಂದ ೭-೩೦ ಮಧ್ಯಾಹ್ನದ ವರೆಗೆ ದಿನದ ವ್ಯವಹಾರವನ್ನು ಮಾಡುವರು. ಶನಿವಾರದ ದಿವಸ ಸಹಕಾರೀ ಬ್ಯಾಂಕುಗಳು ಮಧ್ಯಾಹ್ನದಲ್ಲಿ ೧೨-೩೦ ಗಂಟೆಗೆ ಬಂದಾಗುವವು. ಇವೆಲ್ಲ ೨೮-೩೦ ಬ್ಯಾಂಕು ಕಚೇರಿಗಳ ಮೇಲಿನ ಚೆಕ್ಕುಗಳು ನೂರಾರು ಇದ್ದು ಅವುಗಳ ವಸೂಲಿಯು ದಿನದಿನಕ್ಕೆ ಮೇಲೆ ತಿಳಿಸಿದಂತೆ ಆಗುವದು. ರೋಖ ವಸೂಲಿಯ ಪ್ರಮಾಣವು ಇಂಥ ನೂರಾರು ಚೆಕ್ಕುಗಳ ಲೆಕ್ಕವನ್ನು ಮಾಡಲಾಗಿ ಸಾವಿರಾರು ರೂಪಾಯಿಗನ್ನು ಒಂದು ಕಚೇರಿಯಿಂದ ಇನ್ನೊಂದು ಕಚೇರಿಯ ಮಾರ್ಗವಾಗಿ ಬ್ಯಾಂಕು ಪ್ರತಿನಿಧಿಗಳ ಕೈಯಲ್ಲಿ ಬೀದಿಯಲ್ಲಿ ಹಣ ಬಿಟ್ಟುಕೊಡುವದು ಅಪಾಯಕರವಾದದ್ದೆಂದು ಕಂಡುಬಂದ ನಂತರ, ಬ್ಯಾಂಕು ಬ್ಯಾಂಕಿನವರು ತಮ್ಮ ತಮ್ಮ ಖಾತೆಗಳಿಗೆ ಹೊಂದಿದ ಚೆಕ್ಕುಗಳ ಮುಖಾಂತರವಾಗಿ ವಸೂಲಿ ಕೆಲಸವನ್ನು ಸಾಗಿಸುತ್ತಿರುವರು.

(iii) ಇತರ ಪಟ್ಟಣಗಳಲ್ಲಿಯ ಬೇರೆ ಬ್ಯಾಂಕುಗಳಲ್ಲಿಯ ಖಾತೆಗಳ

ಚೆಕ್ಕುಗಳನ್ನಾದರೂ ಖಾತೇದಾರರು ಸ್ವೀಕರಿಸಿ ಅವುಗಳ ವಸೂಲಿಯನ್ನು ತಮ್ಮ ಬ್ಯಾಂಕಿನಲ್ಲಿಯ ಖಾತೆಯಲ್ಲಿ ಹಾಕಿ ಮಾಡಿಕೊಳ್ಳಬಹುದು. ಈ ವಿಷಯದಲ್ಲಿ ಮಾತ್ರ ರೋಖ ವಸೂಲಿಯು ಆಗುವಂತೆ ಇಲ್ಲವೇ ಇಲ್ಲ. ಖಾತೇದಾರರ ಬ್ಯಾಂಕಿನವರು ತಮ್ಮ ಕೈಸೇರಿದ ಬೇರೂರುಗಳ ಚೆಕ್ಕುಗಳನ್ನು ಟಪಾಲ ಮಾರ್ಗವಾಗಿ ಕಳಿಸಬೇಕಾಗುವದು ಆ ಆ ಪಟ್ಟಣದಲ್ಲಿ ಖಾತೇ ದಾರರ ಬ್ಯಾಂಕಿನ ಶಾಖೆಗಳಿದ್ದರೆ, ಆ ಪಟ್ಟಣಕ್ಕೆ ಸಂಬಂಧಿಸಿದ ಎಲ್ಲ ಚೆಕ್ಕುಗಳನ್ನು ತಮ್ಮ ಬ್ಯಾಂಕಿನ ಕಚೇರಿಗೆ ಕಳಿಸಿ, ನಂತರ ಆ ಪಟ್ಟಣದ ಶಾಖೆಯವರು ನಾವು ಮೇಲೆ ವರ್ಣಿಸಿದ ಮಾರ್ಗವನ್ನು ಅವಲಂಬಿಸಿ ಚೆಕ್ಕುಗಳ ವಸೂಲಿಯನ್ನು ಮಾಡಿಕೊಡುವರು ಈ ತರದ ಖಾತೇದಾರರ ಬ್ಯಾಂಕಿನ ಶಾಖೆಯು ಆ ಪಟ್ಟಣದಲ್ಲಿ ಇಲ್ಲದಿದ್ದರೆ, ತಮ್ಮ ವ್ಯವಹಾರಕ್ಕಾಗಿ ಸಂಬಂಧವನ್ನು ಹೂಡಿದ ಬೇರೆ ಬ್ಯಾಂಕಿಗೆ ಕಳಿಸಿ ಚೆಕ್ಕುಗಳ ವಸೂಲಿ ಯನ್ನು ಮಾಡಿಕೊಳ್ಳುವರು. ಇವೆರಡೂ ಮಾರ್ಗಗಳು ಸಾಧ್ಯವಿಲ್ಲದೆ ಹೋದರೆ, ತಮ್ಮ ಕೈಸೇರಿದ ಚೆಕ್ಕುಗಳನ್ನು ಅದೇ ಬ್ಯಾಂಕಿಗೆ ಕಳಿಸಿ ವಸೂಲಿ ಮಾಡಿಕೊಡುವರು. ಈ ವಿಷಯದಲ್ಲಿ ಎರಡು ಮಹತ್ವವಾದ ಸಂಗತಿಗಳ ಬಗ್ಗೆ ವಿಚಾರ ಮಾಡಬೇಕಾಗುವದು:—(೧) ಈ ತರದ ಪರವೂರಿನ ಚೆಕ್ಕುಗಳ ಹಣವು ವಸೂಲಿಯಾಗಲಿಕ್ಕೆ ಹತ್ತುವ ಅವಧಿಯು (೨) ಮತ್ತು ಹಣದ ವಸೂಲಿಯನ್ನು ಮಾಡುವ ಬಗ್ಗೆ ಹತ್ತುವ ಖರ್ಚು. ಒಂದೇ ಪಟ್ಟಣದಲ್ಲಿಯ ಅದೇ ಬ್ಯಾಂಕಿನ ಚೆಕ್ಕುಗಳು ಮತ್ತು ಅದೇ ಪಟ್ಟಣದಲ್ಲಿಯ ಇತರ ಬ್ಯಾಂಕುಗಳ ಚೆಕ್ಕುಗಳು ವಿನಾಮೂಲ್ಯ ವಸೂಲಿ ಮಾಡಲಾಗುವವು. ಬೇರೊಂದು ಊರಲ್ಲಿಯ ಬ್ಯಾಂಕಿನ ಚೆಕ್ಕುಗಳ ವಸೂಲಿಯ ಮಾರ್ಗವು ಅನ್ಯ ಪ್ರಕಾರದ್ದಿದ್ದುದರಿಂದ, ಅವುಗಳ ವಸೂಲಿಯ ಕೆಲಸವು ವಿನಾಮೂಲ್ಯ ಆಗಲಾರದೆಂಬ ಮಾತು ಎಲ್ಲರಿಗೂ ಗೊತ್ತುಂಟು. ಟಪಾಲ ಮಾರ್ಗವಾಗಿ ಚೆಕ್ಕುಗಳನ್ನು ಕಳಿಸಬೇಕಾಗಿರುವದರಿಂದ, ಖಾತೇ ದಾರರು ಟಪಾಲುಖರ್ಚು ವಹಿಸಬೇಕು. ಒಂದು ಊರಿಂದ ಇನ್ನೊಂದು ಊರಿಗೆ ಹಣವನ್ನು ದೊರಕಿಸುವ ಕ್ರಮಕ್ಕೆ ಎಲ್ಲರಿಗೂ 'ಮನಿ ಆರ್ಡರ್'ದ ಅಥವಾ ಬೇರೆ ಮಾರ್ಗವಾಗಿ ಖರ್ಚು ಮಾಡಲೇಬೇಕಾಗುವದು. ಬ್ಯಾಂಕಿನವರು ಮಾಡುವ ಖರ್ಚು ಎರಡನೆಯದಕ್ಕಿಂತ ತೀರ ಕಡಿಮೆ ಇರುವದರ

ಬಗ್ಗೆ ಏನೂ ಸಂದೇಹವಿಲ್ಲ. ಕಾರಣ, ಅದೇ ಊರ ಬ್ಯಾಂಕುಗಳ ಮೇಲಿನ ಎಷ್ಟೋ ಚೆಕ್ಕುಗಳ ವಸೂಲಿಯನ್ನು ಬ್ಯಾಂಕಿನವರು ದಿನಾಲು ಮಾಡುವದ ರಿಂದ ಅವರಿಗೆ ಮಾಡಬೇಕಾದ ಖರ್ಚು ಎಲ್ಲ ಖಾತೇದಾರರಲ್ಲಿ ಹಂಚಿ ಹೋಗುವದರಿಂದ ಬ್ಯಾಂಕು ಪಡೆಯುವ ದರ ತೀರ ಕಡಿಮೆಯಿದ್ದು ಅತ್ಯಂತ ಸಯುಕ್ತಿತವಾದದ್ದಿರುವದು. (೨) ಖಾತೆಯಲ್ಲಿ ತುಂಬಿದ ಚೆಕ್ಕಿನ ವಸೂಲಿ ಯಾಗಲಿಕ್ಕೆ ಹತ್ತುವ ಕಾಲವು ಒಂದು ಪಟ್ಟಣದಿಂದ ಎರಡನೆಯ ಪಟ್ಟಣದ ಅಂತರದ ಮೇಲೆ ಅವಲಂಬಿಸಿರುವದು. ಮೇಲಗಾಡಿಯು ಒಂದು ನಿಟ್ಟನಿಂದ ಎರಡನೆಯ ಊರಿಗೆ ಹೋಗಿ ಮುಟ್ಟುವ ಅವಧಿಯಲ್ಲಿ ಒಂದೆರಡು ದಿವಸ ಕೂಡಿಸಿ ಲೆಕ್ಕಮಾಡಲಾಗಿ ಮತ್ತು ಚೆಕ್ಕು ವಸೂಲಾದ ಬಗ್ಗೆ ಎರಡನೆಯ ಊರಿನ ಬ್ಯಾಂಕಿನವರು ನಮ್ಮ ಊರಿನ ಬ್ಯಾಂಕಿನವರಿಗೆ ತಿಳಿಸಬೇಕಾದ ಪತ್ರವು ಮುಟ್ಟುವ ಕಾಲವನ್ನು ಹಿಡಿದು ಒಟ್ಟಾಗಿ ವಿಚಾರಿಸಿದರೆ, ಅನ್ಯ ಪಟ್ಟಣದ ಚೆಕ್ಕಿನ ವಸೂಲಿಯ ಬಗ್ಗೆ ಹತ್ತುವ ಅವಧಿಯು ಸಾಧಾರಣವಾಗಿ ಗೊತ್ತಾಗಬಹುದು. ಒಂದೊಂದು ಸಲ ಪರವೂರಿನ ಬ್ಯಾಂಕಿನವರು ಅವರಿಗೆ ಮುಟ್ಟಿದ ಚೆಕ್ಕಿನ ಜಮಾಖರ್ಚು ಮಾಡಿಯೂ ನಮ್ಮ ಊರಿನ ಬ್ಯಾಂಕಿ ನವರಿಗೆ ತಿಳಿಸುವದಿಲ್ಲ. ಆದ್ದರಿಂದ, ಖಾತೇದಾರರಿಗೆ ಎಷ್ಟೋ ಕಾಲದವರೆಗೆ ಚೆಕ್ಕು ವಸೂಲಾದ ಬಗ್ಗೆ ತಿಳಿಯದೆ ಹೋಗುವದು. ಮೇಲೆ ತಿಳಿಸಿದ ಮೇರೆಗೆ ಖಾತೇದಾರರು ಲೆಕ್ಕ ಹಾಕಬೇಕು. ಮತ್ತು ಆ ಅವಧಿಯಲ್ಲಿ ತಾವು ತುಂಬಿದ ಚೆಕ್ಕು ತಮಗೆ ತಿರುಗಿ ಬರದಿದ್ದರೆ, ಅದು ವಸೂಲಾಗಿದ್ದ ಬಗ್ಗೆ ನಿಶ್ಚಿತರಾಗಬೇಕು. ಉದಾಹರಣ:— ಪುಣೆ ಪಟ್ಟಣದಲ್ಲಿಯ ಖಾತೇ ದಾರರು ಮುಂಬಯಿ ಬ್ಯಾಂಕಿನ ಚೆಕ್ಕನ್ನು ತುಂಬಿದಾಗ ಆರು ದಿನದಲ್ಲಿ ತುಂಬಿದ ಚೆಕ್ಕು ತಮ್ಮ ಕೈಯಲ್ಲಿ ತಿರುಗಿ ಬರದಿದ್ದರೆ, ಆ ಚೆಕ್ಕು ವಸೂ ಲಾಯಿತೆಂದು ತಿಳಿಯಬಹುದು.

ಕಳೆದ ಮೂರು ನಾಲ್ಕು ವರುಷಗಳಲ್ಲಿ ಬ್ಯಾಂಕುಗಳ ಶಾಖೆಗಳು ಹೆಚ್ಚಾಗುತ್ತ ಹೋಗಿ ಸಾಧಾರಣವಾಗಿ ಎಲ್ಲ ಮುಖ್ಯ ಪಟ್ಟಣಗಳಲ್ಲಿ ಬೇರೆ ಬೇರೆ ಬ್ಯಾಂಕುಗಳ ಕಚೇರಿಗಳಿರುವವು. ಖಾತೇದಾರರು ಯಾವುದೇ ಬ್ಯಾಂಕಿನಲ್ಲಿ ಖಾತೆಯನ್ನಿಟ್ಟಿದ್ದರೂ ಸಹಿತ,ಅವರ ಪರಊರಿನ ಚೆಕ್ಕುಗಳನ್ನು ಬ್ಯಾಂಕಿನವರು ತಮ್ಮ ಖಾತೇದಾರರ ಅನುಕೂಲತೆಯ ಸಲುವಾಗಿ ಆದಷ್ಟು

ಕಡಿಮೆ ಖರ್ಚಿನಲ್ಲಿ ವಸೂಲ ಮಾಡಿಕೊಡುವರು. ಆದಕ್ಕೆ ಅದೇ ಪಟ್ಟಣದಲ್ಲಿಯ ಇತರ ಬ್ಯಾಂಕುಗಳ ಕಚೇರಿಗಳ ಸಾನ್ನಿಧ್ಯವು ಉಪಯುಕ್ತವಾದುದು. ನಮ್ಮ ಬ್ಯಾಂಕಿನ ಕಚೇರಿಯು ನಮಗೆ ಬೇಕಾದ ಪಟ್ಟಣದಲ್ಲಿದ್ದರೆ, ನಮ್ಮ ಚೆಕ್ಕಿನ ವಸೂಲಿಯು ವಿನಾಮೂಲ್ಯವಾದರೂ ಆಗುವದು. ಇವೆರಡೂ ಮಾರ್ಗಗಳು ಉಪಲಬ್ಧವಿಲ್ಲದಿದ್ದರೆ ಮತ್ತೆ ಆ ಚೆಕ್ಕು, ಚೆಕ್ಕಿನಲ್ಲಿಯ ಖಾತೇದಾರರ ಬ್ಯಾಂಕಿಗೆಯೇ ಕಳಿಸಬೇಕಾಗುವದು, ಮತ್ತು ಖಾತೇದಾರರು ಅದರ ವಸೂಲಿಗಾಗಿ ಹೆಚ್ಚು ಆಕಾರ (ಚಾರ್ಜು) ಮಾಡಬೇಕಾಗುವದು. ಅಂದರೆ, ಖಾತೇದಾರರ ಬ್ಯಾಂಕಿನವರು ತಮಗೆ ಯೋಗ್ಯವಾದ ಆಕಾರ (ಚಾರ್ಜು) ಮಾಡುವರು. ಆದಕ್ಕೆ ಹೊಂದಿ ಎರಡನೆಯ ಪಟ್ಟಣದಲ್ಲಿಯ ಬ್ಯಾಂಕಿನವರು ಚೆಕ್ಕಿನ ಹಣವನ್ನು ಕಳಿಸುವಗೋಸುಗ ಮಾಡುವ ಆಕಾರ (ಚಾರ್ಜು) ಕೂಡುವದು.

**ಮುಂಬಯಿ ಪಟ್ಟಣದಲ್ಲಿಯ ಬ್ಯಾಂಕುಗಳ ಚೆಕ್ಕಿನ ವಸೂಲಿಯ ಮಾರ್ಗವು**:—ಮುಂಬಯಿ ಪಟ್ಟಣದಲ್ಲಿ ನಮ್ಮ ದೇಶದಲ್ಲಿಯ ಎಲ್ಲ ದಿಕ್ಕಿನಿಂದಲೂ ಸಾವಿರಾರು ಚೆಕ್ಕುಗಳು ಒಟ್ಟುಗೂಡುವವು. ಅವುಗಳ ವಸೂಲಿಯು ದಿನದಿನಕ್ಕೆ ಸುಖವಾಗಿ ಸಾಗಬೇಕೆಂದು ನಮ್ಮ ಮಧ್ಯವರ್ತಿ ಬ್ಯಾಂಕಿನವರು ತಮ್ಮ ತಮ್ಮ ಚೆಕ್ಕುಗಳನ್ನು ನಿಯಮಿತ ಕಾಲಕ್ಕೆ ಆ ಕಚೇರಿಗೆ ಕಳಿಸುವರು. ಅದರ ಹೆಸರು 'ಕ್ಲಿಅರಿಂಗ್ ಹೌಸ್.' ಅಲ್ಲಿ ಎಲ್ಲ ಬ್ಯಾಂಕಿನವರು ತಮಗೆ ಸಂಬಂಧಿಸಿದ ಚೆಕ್ಕುಗಳನ್ನು ಇನ್ನೊಬ್ಬರಿಂದ ಸ್ವೀಕರಿಸಿ, ತಾವು ಕೊಡತಕ್ಕ ಇಲ್ಲವೆ ಪಡೆಯತಕ್ಕ ರಕಮಿನ ತಪಶೀಲನ್ನು ತಯಾರಿಸುವರು. ನಂತರ ಆ ಆ ಬ್ಯಾಂಕುಗಳ ಪ್ರತಿನಿಧಿಯು ತನ್ನ ಚೆಕ್ಕುಗಳನ್ನು ಸ್ವಂತ ಕಚೇರಿಗೆ ಒಯ್ಯುವನು. ಮತ್ತು ಅಲ್ಲಿಯ ಅಧಿಕಾರಿಗಳು ಅವುಗಳನ್ನು ತಕ್ಕ ಖಾತೆಗಳಲ್ಲಿ ಜಮಾಖರ್ಚು ಮಾಡುವರು. ಈ ಕ್ರಮವು ತಾಸೆರಡು ತಾಸು ನಡೆಯುವದು. ನಂತರ, ಆ ಆ ಬ್ಯಾಂಕಿನವರು ತಾವು ತಿರುಗಿ ಕಳಿಸಬೇಕಾದ ಚೆಕ್ಕುಗಳನ್ನು ಕೊಟ್ಟು ತಮ್ಮ ಪ್ರತಿನಿಧಿಯನ್ನು ಮತ್ತೊಮ್ಮೆ 'ಕ್ಲಿಅರಿಂಗ್' ಕಚೇರಿಗೆ ಕಳಿಸುವರು. ತಿರುಗಿ ಕಳಿಸಿದ ಚೆಕ್ಕುಗಳು ವಿವಿಧ ಬ್ಯಾಂಕುಗಳಿಗೆ ಕೊಡಲ್ಪಟ್ಟು ಕೊನೆಗೆ ದಿನದ ಬ್ಯಾಂಕು ಬ್ಯಾಂಕುಗಳ ಜಮಾಖರ್ಚು ಮುಗಿಸಲಾಗುವದು. ಈ ಕ್ರಮದ ತಪಶೀಲು

ಸಾರಕ್ಕೊಮ್ಮೆ ವೃತ್ತಪತ್ರದಲ್ಲಿ ಪ್ರಕಟಿಸಲಾಗುವದು. ಮುಂಬಯಿ ಪಟ್ಟಣದಲ್ಲಿಯ 'ಕ್ಲಿಅರಿಂಗ್ ಹೌಸ್'ದ ಮುಖಾಂತರ ೨೦ನೆಯ ಜೂನ ೧೯೪೫ ಸಪ್ತಾಹದಲ್ಲಿ ಒಟ್ಟು ೪೦ ಕೋಟಿ, ೮೭ ಲಕ್ಷ, ೨೫ ಸಾವಿರ, ೯೦೨ ರೂಪಾಯಿ ೧೩ ಆಣೆ, ೫ ಪೈ ರಕಮಿನ ೧ ಲಕ್ಷ, ೪೩ ಸಾವಿರ, ೧೨೧ ಚೆಕ್ಕುಗಳ ಹಣದ ವಸೂಲಿ ಮಾಡಲಾಯಿತು. ಈ ತರದ 'ಕ್ಲಿಅರಿಂಗ್' ಕಚೇರಿಗಳು ಅಹಮದಾಬಾದ, ಕಲಕತ್ತಾ, ಮದ್ರಾಸ ಪಟ್ಟಣಗಳಲ್ಲಿದ್ದು, ಇತರ ಪಟ್ಟಣಗಳಲ್ಲಿಯಾದರೂ ಇದೇ ಕ್ರಮವನ್ನು ಅವಲಂಬಿಸಿ ಬ್ಯಾಂಕಿನವರು ತಮ್ಮ ವಸೂಲಿಯ ಕೆಲಸವನ್ನು ಸಾಗಿಸಹತ್ತಿರುವರು.

**ತಿರುಗಿ ಕಳಿಸತಕ್ಕ ಚೆಕ್ಕುಗಳಿಗೆ ಹೊಂದಿದ ವಿವಿಧ ಕಾರಣಗಳು**: ಖಾತೇದಾರರು ಬರೆದ ಚೆಕ್ಕಿನ ಹಣವನ್ನು ಬ್ಯಾಂಕಿನವರು ಕೊಡಲೇಬೇಕು. ಮಾತ್ರ, ಆ ಚೆಕ್ಕುಗಳು ಸರಿಯಾಗಿರಬೇಕಾಗುವದು. ಅಂದರೆ, ಅದರಲ್ಲಿಯ ಎಲ್ಲ ವಿಷಯುಗಳು ಯೋಗ್ಯ ಕಂಡ ನಂತರ, ಚೆಕ್ಕಿನ ಹಣವು ಖಾತೇದಾರರ ಲೆಕ್ಕಕ್ಕೆ ಹಚ್ಚಲಾಗುವದು. ಕೆಳಗೆ ಕೊಟ್ಟ ಕಾರಣಗಳ ಮೂಲಕ ಬ್ಯಾಂಕಿನವರು ಚೆಕ್ಕುಗಳ ಹಣವನ್ನು ಕೊಡಲಾರರು. ಇಂಥ ಕಾರಣಗಳು ಇಂಗ್ರೇಜಿ ಭಾಷೆಯಲ್ಲಿ ಕೊಡಲಾಗುವದರಿಂದ ಅವುಗಳ ಬಗ್ಗೆ ಇನ್ನು ವಿಚಾರ ಮಾಡುವೆವು. ಕೆಲವು ಬ್ಯಾಂಕಿನವರು ಈ ಕಾರಣಗಳದೊಂದು ಯಾದಿಯನ್ನೇ ಮುದ್ರಿಸಿರುವರು. ಮತ್ತು ತಿರುಗಿ ಕೊಡತಕ್ಕ ಚೆಕ್ಕಿಗೆ ಸಂಬಂಧಿಸಿದ ಕಾರಣವನ್ನು ಗುರುತು ಹಾಕಿ ಆ ಚೆಕ್ಕಿಗೆ ಯಾದಿಯನ್ನು ಜೋಡಿಸಿ ಕೊಡುವರು. ಆ ಯಾದಿಯು ಈ ಪ್ರಕಾರದ್ದಿರುವದು:—

**ಬ್ಯಾಂಕ, ಲಿಮಿಟೆಡ್.**

ತಾರೀಖು

ಹೆಸರು ______

(ಚೆಕ್ಕು ಕೊಟ್ಟವರ ಹೆಸರು)

ನಂ. ______ ರೂ. ______

(ಚೆಕ್ಕಿನ ನಂಬರು) (ರಕಮು)

ಕೆಳಗೆ ಬರೆದ ಕಾರಣದ ಮೂಲಕ ಚೆಕ್ ತಿರುಗಿ ಕೊಡಲಾಗಿದೆ:—

೧. Payee's endorsement required :—ಚೆಕ್ಕಿನ ಮೇಲೆ ಬರೆದವರ ಹೆಸರಿನ ಅನುಮತಿ ಬೇಕು.

(ಇದು " ಆರ್ಡರ್ " ಚೆಕ್ಕು ಇದ್ದು, ಅದರಲ್ಲಿ ಬರೆದವರು ತಮ್ಮ ಅನುಮತಿಯಗೋಸುಗ ಚೆಕ್ಕಿನ ಹಿಂಭಾಗದಲ್ಲಿ ಸಹಿ ಮಾಡದಿದ್ದ ಮೂಲಕ ಅವರ ಸಹಿಯನ್ನು ಪಡೆದು ಚೆಕ್ಕನ್ನು ಇನ್ನೊಮ್ಮೆ ತರಬೇಕೆಂಬ ಬಗ್ಗೆ ಸೂಚನೆಯು.)

೨. Payee's endorsement irregular:–ಚೆಕ್ಕಿನ ಹಿಂಭಾಗದಲ್ಲಿಯ ಬರಹ ಸರಿಯಾಗಿಲ್ಲದ ಮೂಲಕ ಅದನ್ನು ಸರಿಯಾಗಿ ಮಾಡಿಸಿಕೊಂಡು ತರಬೇಕು.

೩. Payee's endorsement irregular–will pay on Bank's confirmations :–ಚೆಕ್ಕಿನ ಹಿಂಭಾಗದಲ್ಲಿ ಬರೆದ ಅನುಮತಿಯ ಬಗ್ಗೆ ಮಾಡಿದ ಸಹಿಯು ನಮಗೆ ಸರಿಯಾಗಿಲ್ಲವೆಂದು ತೋರುವದು. ಚೆಕ್ಕಿನ ರಕಮು ವಸೂಲಿ ಮಾಡುವ ಬ್ಯಾಂಕಿನವರು ಅದರ ಲೇಖೀ ಹೊಣೆಯನ್ನು ತೆಗೆದುಕೊಂಡರೆ ಚೆಕ್ಕಿನ ಹಣವನ್ನು ಕೊಡಬಲ್ಲೆವು.

೪. Cheque is post–dated / out of date :—ಇದು ಮುಂದಿನ ತಾರೀಖಿನ ಚೆಕ್ಕಿರುವದು. / ಇದು ೬ ತಿಂಗಳ ಹಿಂದಿನ ತಾರೀಖಿನ ಚೆಕ್ಕು ಇರುವದು.

೫. Amount in words and figures differs :—ಅಂಕಿಯಲ್ಲಿ ಬರೆದ ಮತ್ತು ಅಕ್ಷರದಲ್ಲಿ ವಿವರಿಸಿದ ರಕಮಿನ ತಪಶೀಲಿನಲ್ಲಿ ಭೇದವಿರುವದು.

೬. Drawer's signature differs :— ಖಾತೇದಾರರ ಸಹಿಯು ಸರಿಯಾಗಿಲ್ಲ.

೭. Full cover not received :—ಖಾತೆಯಲ್ಲಿ ಸಾಕಷ್ಟು ಹಣವಿಲ್ಲ.

೮. Refer to drawer :—ಚೆಕ್ಕನ್ನು ತಿರುಗಿ ಕಳಿಸಿದ ಬಗ್ಗೆ ಖಾತೇದಾರರಿಗೆ ಕೇಳಬೇಕು.

೯. Effects not cleared, please present again :—ಖಾತೆಯಲ್ಲಿ ತುಂಬಿದ ಚೆಕ್ಕುಗಳ ವಸೂಲಿ ಆಗತಕ್ಕದ್ದಿದೆ—ಮತ್ತೊಮ್ಮೆ ಚೆಕ್ಕನ್ನು ತರಬಹುದು.

೧೦. Effects drawn against cheque returned unpaid :—ವಸೂಲಿಯಗೋಸುಗ ತುಂಬಿದ ಚೆಕ್ಕು ಹಣ ಬಾರದೆ ತಿರುಗಿ ಬಂದಿವೆ.

೧೧. Title of the account required :—ಚೆಕ್ಕಿನಲ್ಲಿ ಖಾತೆಯ ಹೆಸರನ್ನು ಬರೆಯಬೇಕು.

೧೨. Cancellation / Alteration requires drawer's Full Signature :—ಚೆಕ್ಕಿನ ಬರಹದಲ್ಲಿ ಬದಲಾಯಿಸಿದ ಬಗ್ಗೆ / ರದ್ದು ಮಾಡಿದ ಬಗ್ಗೆ ಖಾತೇದಾರರ ಸಂಪೂರ್ಣ ಸಹಿ ಬೇಕು.

೧೩. Payment stopped by the drawer :—ಈ ಚೆಕ್ಕಿನ ಹಣವನ್ನು ಕೊಡಬಾರದೆಂದು ಖಾತೇದಾರರು ಆದೇಶಿಸಿರುವರು.

೧೪. Amount in figures illegible :—ಅಂಕಿಯಲ್ಲಿ ಬರೆದ ತಪಶೀಲು ಸುವಾಚ್ಯವಿಲ್ಲ.

೧೫. Crossed Cheque-to be presented through a Bank :—ಇದು ಕ್ರಾಸ್ಡ್ ಚೆಕ್ಕು ಇದ್ದುದರಿಂದ ಬ್ಯಾಂಕಿನ ಖಾತೆಯ ಮುಖಾಂತರವಾಗಿ ವಸೂಲಿಯ ಬಗ್ಗೆ ಕೊಡಬೇಕು.

ಇವೇ ಮುಖ್ಯವಾದ ಕಾರಣಗಳ ಸಲುವಾಗಿ ಖಾತೇದಾರರು ತುಂಬಿದ ಚೆಕ್ಕುಗಳಾಗಲಿ ರೋಖ ವಸೂಲಿಯಗೋಸುಗ ಬ್ಯಾಂಕಿಗೆ ಒಯ್ದ ಚೆಕ್ಕುಗಳಾಗಲಿ, ತಿರುಗಿ ಕಳಿಸಲಾಗುವವು. ಮೇಲಿನ ಕಾರಣಗಳಲ್ಲಿ ೭, ೮, ೯, ೧೦, ೧೧ನೆಯ ಕಾರಣಗಳ ವರ್ಣನೆಯನ್ನು ಮಾಡಬೇಕಾಗಿದೆ.

**ನಂಬರ ೭—'ಖಾತೆಯಲ್ಲಿ ಸಾಕಷ್ಟು ಹಣವಿಲ್ಲ',** ಅಂದರೆ ಖಾತೇದಾರರು ಖಾತೆಯ ಪುಸ್ತಕವನ್ನು ನೋಡದೆ ಇಲ್ಲವೆ ಅವರು ಇತರ ಬ್ಯಾಂಕುಗಳ ಚೆಕ್ಕುಗಳನ್ನು ತಿರುಗಿ ಕಳಿಸಿದ್ದನ್ನು ಪರೀಕ್ಷಿಸದೆ, ತಾವು ಕೊಟ್ಟ ಚೆಕ್ಕು ಶಿಲ್ಕಿಗಿಂತ ಹೆಚ್ಚು ಇದ್ದರೂ ಬ್ಯಾಂಕಿನವರು ಅದರ ಹಣವನ್ನು ಕೊಡುವಂತೆ ಅನ್ಯಯೋಜನೆಯನ್ನು ಅವರೊಂದಿಗೆ ಮಾಡಿಲ್ಲವೆಂದು ಅರ್ಥವಾಗುವದು.

**ನಂಬರ ೮—'ಚೆಕ್ಕನ್ನು ಪರತು ಮಾಡಿದ ಬಗ್ಗೆ ಖಾತೆದಾರರಿಗೆ ಕೇಳಬೇಕು',** ಈ ಕಾರಣವಾದರೂ ಮೇಲಿನ ಕಾರಣದಲ್ಲಿ ಸಮಾವೇಶವಾಗುವದು. ಆದ್ದರಿಂದ ಖಾತೇದಾರರು ತಕ್ಕ ವಿಚಾರ ಮಾಡದೆ ಚೆಕ್ಕನ್ನು ಬರೆದು, ಅದರ ವಸೂಲಿಯು ಆಗದೆ ಚೆಕ್ಕನ್ನು ಹಾಜರ ಮಾಡಿದವರಿಗೆ ಮರಳಿ ಕೊಟ್ಟ ನಂತರ, ಹೀಗೆ ಮಾಡಿದ ಬಗ್ಗೆ ಬ್ಯಾಂಕಿನವರು ಸಂಪೂರ್ಣ ತಪಶೀಲು ಕೊಟ್ಟು, ಖಾತೆದಾರರಿಗೆ ಪತ್ರವನ್ನು ಬರೆದು ತಿಳಿಸುವರು. ಅದೇ ಪತ್ರದಲ್ಲಿ ಅವರು ಈ ರೀತಿಯಿಂದ ಇನ್ನೊಮ್ಮೆ ಚೆಕ್ಕನ್ನು ಬರೆಯಬಾರದೆಂದು ಖಾತೇದಾರರಿಗೆ ವಿನಂತಿಸುವರು. ಈ ಕ್ರಮದಿಂದ ಖಾತೇದಾರರು ಎಚ್ಚರಾಗದೆ ಮತ್ತೂ ಹಾಗೆಯೇ ಚೆಕ್ಕುಗಳನ್ನು ಬರೆಯುತ್ತ ಹೋದರೆ, ಅವರ ಖಾತೆಯನ್ನು ಬಂದುಮಾಡಲಾದೀತೆಂಬುದರ ಬಗ್ಗೆ ಸೂಚನೆಯನ್ನು ಕೊಟ್ಟು, ಕೊನೆಗೆ ಅದನ್ನು ಬಂದು ಮಾಡುವರು.

**ನಂಬರ ೯—'ಖಾತೆಯಲ್ಲಿ ತುಂಬಿದ ಚೆಕ್ಕುಗಳ ವಸೂಲಿಯು ಆಗತಕ್ಕದ್ದಿದೆ',** "ಇನ್ನೊಮ್ಮೆ ಚೆಕ್ಕನ್ನು ಕಳಿಸಬೇಕು". ಖಾತೇದಾರರು ತಮ್ಮ ಖಾತೆಯಲ್ಲಿ ತುಂಬಿದ ಇತರ ಪಟ್ಟಣದಲ್ಲಿಯ ಬ್ಯಾಂಕುಗಳ ಚೆಕ್ಕುಗಳು ವಸೂಲಾದ ಬಗ್ಗೆ ಗೊತ್ತುಮಾಡಿಕೊಂಡ ನಂತರ ಖಾತೆಯಲ್ಲಿ ಸಾಕಷ್ಟು ಶಿಲ್ಕು ಉಳಿಯುವದರಿಂದ, ಆನಂತರ ತಮ್ಮ ಚೆಕ್ಕುಗಳನ್ನು ಬರೆಯಬೇಕೆಂಬದರ ಬಗ್ಗೆ ಸೂಚನೆಯಿರುವದು. ಇಂಥ ಚೆಕ್ಕನ್ನು ತಂದವರಿಗೆ ಈ ಸಂಗತಿಯನ್ನು ತಿಳಿಸಿ ಹೇಳಲಾಗುವದು. ಮತ್ತು ಇಂತಿಷ್ಟು ಅವಧಿಯ ನಂತರ ಚೆಕ್ಕನ್ನು ಇನ್ನೊಮ್ಮೆ ತಂದರೆ. ಅದರ ರಕಮು ಸಿಗಬಹುದೆಂಬದರ ಬಗ್ಗೆ ಸೂಚಿಸಲಾಗುವದು.

**ನಂ. ೧೦ :**—ಮೇಲೆ ಹೇಳಿದ ಪ್ರಕಾರ ಖಾತೆಯ ಪರಿಸ್ಥಿತಿಯಿದ್ದು, ಖಾತೇದಾರರು ತಮ್ಮ ಖಾತೆಯಲ್ಲಿಯ ಪರವೂರಿನ ಚೆಕ್ಕುಗಳು ವಸೂಲಾದ ಬಗ್ಗೆ ಬ್ಯಾಂಕಿನವರಿಂದ ತಿಳಿದ ನಂತರ ಆ ಚೆಕ್ಕುಗಳಿಗೆ ಹೊಂದಿದ ಹಣವನ್ನು ತಮ್ಮ ಚೆಕ್ಕಿನಿಂದ ತೆಗೆಯಬಹುದು. ಕೇವಲ ಈ ಪ್ರಕಾರದ ಚೆಕ್ಕುಗಳ ಹಣದ ಮೇಲೆಯೇ ವ್ಯವಹಾರವು ಸಾಗಬೇಕಾಗಿದ್ದಾಗ ಮತ್ತು ಆ ಚೆಕ್ಕುಗಳನ್ನು ತಿರುಗಿ ಕೊಟ್ಟಾಗ ಈ ತರದ ಕಾರಣವನ್ನು ಕೊಡಲಾಗುವದು.

**ನಂ. ೧೧—'ಚೆಕ್ಕಿನಲ್ಲಿ ಖಾತೆಯ ಹೆಸರನ್ನು ಬರೆಯಬೇಕು.'** ಚೆಕ್ಕಿನಲ್ಲಿ ಖಾತೆಯ ಹೆಸರು ಎರಡು ಕಾರಣಗಳ ಮೂಲಕ ಬರೆಯಬೇಕಾಗುವದು. (೧) ಒಬ್ಬ ಖಾತೆದಾರನ ಖಾತೆಗಳು ಒಂದಕ್ಕಿಂತ ಹೆಚ್ಚು ಇದ್ದರೆ, ಅವನು ಬರೆದ ಚೆಕ್ಕಿನ ಹಣವನ್ನು ಯಾವ ಖಾತೆಯಲ್ಲಿ ಖರ್ಚು ಹಾಕಬೇಕು ಎಂಬುದರ ಬಗ್ಗೆ ಸಾಶಂಕಿತರಾಗಿ ಬ್ಯಾಂಕಿನವರು ಸ್ಪಷ್ಟೀಕರಣಗೋಸುಗ ಖಾತೆಯ ಹೆಸರನ್ನು ತಿಳಿದುಕೊಳ್ಳಬೇಕಾಗಿ ಈ ಕಾರಣವನ್ನು ಕೊಡುವರು. (೨) ಭಾಗೀದಾರಿಯ ಖಾತೆಯಲ್ಲಿಯ ಚೆಕ್ಕಾಗಲಿ, ಕಂಪನಿಯ ಖಾತೆಯಲ್ಲಿಯ ಚೆಕ್ಕಾಗಲಿ, ಅದನ್ನು ಸಹಿ ಮಾಡಿದವನು ಒಂದು ಕಾಲಕ್ಕೆ ತಪ್ಪಿ ಬ್ಯಾಂಕಿಗೆ ಕೊಟ್ಟ ನಮೂನೆಯಂತೆ ಯಾರಿಗೋಸುಗ ತಾನು ಸಹಿ ಮಾಡಿದ್ದನ್ನು ನಿರ್ದೇಶಿಸದೆ ಕೇವಲ ತಮ್ಮ ವೈಯ್ಯಕ್ತಿಕ ಸಹಿಯನ್ನೇ ಮಾಡಿದರೆ ಚೆಕ್ಕಿನಲ್ಲಿಯ ಬರಹವು ಅಪೂರ್ಣವಾಗುವದು. ಈ ಪ್ರಮುಖ ಖಾತೇದಾರನ ಹೆಸರನ್ನು ಹಾಕಿ ಅವನಿಗೋಸುಗ ಇಂಥವನು ಸಹಿ ಮಾಡಿದ್ದನ್ನು ಪೂರ್ಣ ಮಾಡಿಸಿಕೊಳ್ಳಬೇಕು. ಈ ಕಾರಣವನ್ನು ಕೊಟ್ಟು, ಚೆಕ್ಕನ್ನ ಬ್ಯಾಂಕಿನವರು ತಿರುಗಿ ಕಳಿಸುವರು.

ಇದೇ ಸಂದರ್ಭದಲ್ಲಿ ಖಾತೇದಾರರು ಪರಸ್ಥಳಕ್ಕೆ ತಾವು ಕಳಿಸಿದ ಚೆಕ್ಕಿನ ರಕಮು ಚೆಕ್ಕು ಕೊಟ್ಟ ಕೂಡಲೆ ತಮ್ಮ ಜನರಿಗೆ ಸಿಗಬೇಕೆಂದೆನಿಸಿದರೆ, ಅವರು ಬ್ಯಾಂಕಿನವರಿಗೆ ಆ ಚೆಕ್ಕನ್ನು 'ಮಾರ್ಕ್ಡ್ ಗುಡ್ ಫಾರ್ ಪೇಮೆಂಟ್' (Marked good for payment) ಅಂದರೆ ಈ ಚೆಕ್ಕಿನ ಹಣವನ್ನು ಕೊಟ್ಟೇಕೊಡಲಾಗುವದೆಂದೂ ಅದರ ಬಗ್ಗೆ ಬ್ಯಾಂಕಿನವರು ಬರೆದುಕೊಟ್ಟ ಜಾಮೀನಿನ ಸರಿಯಾದ ನೋಂದು—ಎಂದು ಶಿಕ್ಕೆಯನ್ನು

ಹಾಕಿಸಿ ಕಳಿಸಿದರೆ ಬೇರೊಂದು ಸ್ಥಳದಲ್ಲಿಯ ವಸೂಲಿಯನ್ನು ಮಾಡತಕ್ಕ ಬ್ಯಾಂಕಿನವರು ಅದರ ರಕಮನ್ನು ತಮ್ಮ ಖಾತೇದಾರರಿಗೆ ಕೂಡಲೆ ಕೊಡಲು ಒಪ್ಪುವರು. ಒಂದು ಸ್ಥಳದಿಂದ ಕಳಿಸಿದ ಚೆಕ್ಕು ಬೇರೆ ಸ್ಥಳಕ್ಕೆ ಮುಟ್ಟಿ, ಅಲ್ಲಿಂದ ತಿರುಗಿ ಮೊದಲಿನ ಸ್ಥಳಕ್ಕೆ ಬಂದು, ಅಲ್ಲಿ ಅದರ ಖಿತಾವಣಿ ಆದ ನಂತರ ಅದರ ರಕಮು ವಸೂಲಿ ಮಾಡತಕ್ಕ ಬ್ಯಾಂಕಿಗೆ ಮುಟ್ಟಿಸಲಿಕ್ಕೆ ಅವಧಿ ಹತ್ತುವದು. ಅದು ವರೆಗೆ ಪರಸ್ಥಳದ ಜನರು ರಕಮಿಗೆ ಕೈಹಚ್ಚ ಬಾರರು. ಈ ಪ್ರಕಾರ ವ್ಯಾಪಾರದಲ್ಲಿ ತೊಡಗಿಹೋಗುವ ರಕಮು ಉಪಯೋಗಕ್ಕೆ ಕೆಲವು ಕಾಲ ಬಾರದ್ದರಿಂದ ಮತ್ತು ಚೆಕ್ಕನ್ನು ಪಡೆದವರು ತಮಗೆ ಅದರ ರಕಮು ಕೂಡಲೆ ಸಿಗಬೇಕೆಂದು ವಿನಂತಿಸಿದರೆ, ಮೇಲೆ ಹೇಳಿದಂತೆ ಖಾತೇದಾರರು, ತಾವು ಕಳಿಸತಕ್ಕ ಚೆಕ್ಕನ್ನು ಮಾರ್ಕ ಮಾಡಿಸಿ ಕೊಳ್ಳಬೇಕು. ಈ ರೀತಿಯಿಂದ ಮಾರ್ಕ ಮಾಡುವ ಕಾಲಕ್ಕೆ ಮಾತ್ರ ಬ್ಯಾಂಕಿನವರು ಇಂಥ ಚೆಕ್ಕಿನಲ್ಲಿಯ ರಕಮನ್ನು ಖಾತೆಕ್ಕೆ ಖರ್ಚು ಹಾಕಿ ಒಂದು ಅನಾಮತ ಖಾತೆಯಲ್ಲಿ ಜಮಾ ಮಾಡುವರು. ಅನ್ಯ ಸ್ಥಳದಿಂದ ಹೀಗೆ ಕಳಿಸಿದ ಚೆಕ್ಕು ಖಾತೇದಾರರ ಬ್ಯಾಂಕಿಗೆ ಬಂದ ನಂತರ ಅದನ್ನು ಅನಾಮತ ಖಾತೆಕ್ಕೆ ಖರ್ಚು ಹಾಕಿ ಚೆಕ್ಕವನ್ನು ಮುಗಿಸುವರು.

**ಚೆಕ್ಕುಗಳ ಮುಖಾಂತರ ಆಗುವ ಹಣದ ಸ್ಥಳಾಂತರ** :— ಇದುವರೆಗೆ ವರ್ಣಿಸಿದ ಸಂಗತಿಗಳು ಕೇವಲ ಬ್ಯಾಂಕು ಖಾತೇದಾರರ ಚೆಕ್ಕುಗಳ ವಿಷಯಕ್ಕೆ ಇದ್ದರೂ, ಈ ಚೆಕ್ಕುಗಳಿಗೆ ಸಂಬಂಧಿಸಿದ ರಕಮು ದೇಶದಲ್ಲಿಯ ಒಂದು ಭಾಗದಿಂದ ಎರಡನೆಯ ಭಾಗಕ್ಕೆ ಒಯ್ಯಲ್ಪಡುವದು. ಈ ಹಣದ ವಿಪುಲತ್ವವು ನಾವು 'ಕ್ಲಿಅರಿಂಗ್' ಕಚೇರಿಯ ವಿಷಯಕ್ಕನು ಸರಿಸಿ ಕೊಟ್ಟ ಉದಾಹರಣದಿಂದ ಗೊತ್ತಾಗಬಹುದು; ಆದರೆ ಒಂದು ಸಪ್ತಾಹದಲ್ಲಿ ಮುಂಬಯಿ ಪಟ್ಟಣದಿಂದ ದೇಶದಲ್ಲಿಯ ಇತರ ಭಾಗಕ್ಕೆ ಸುಮಾರು ೪೧ ಕೋಟಿ ಹಣ ಬ್ಯಾಂಕು-ಬ್ಯಾಂಕಿನಿಂದ ಕಳಿಸಲಾಗುವದು. ಹಣದ ಸ್ಥಳಾಂತರವು ಕೇವಲ ಖಾತೇದಾರರ ಚೆಕ್ಕುಗಳಿಗೆಯೇ ಮರ್ಯಾದಿತ ಇರದೆ ಒಂದು ಬ್ಯಾಂಕು ಕಚೇರಿಯು ಮೇಲೆ ಇಲ್ಲವೆ ಒಂದು ಬ್ಯಾಂಕು ಕಚೇರಿಯು ಅದೇ ಬ್ಯಾಂಕಿನ ಇನ್ನೊಂದು ಕಚೇರಿಯ ಮೇಲೆ ತಮ್ಮ ಚೆಕ್ಕುಗಳನ್ನು ಬರೆಯುವರು. ಇಂಥ ಚೆಕ್ಕಿನ ಹೆಸರು 'ಬ್ಯಾಂಕ್

ಡ್ರಾಫ್ಟ್' (Bank draft) ಅಂತ ಇರುವದು. ಖಾತೇದಾರರಾಗಲಿ, ಬೇರೆ ಯಾರಾದರೂ ಬೇಕಾದ ಬ್ಯಾಂಕಿಗೆ ಅರ್ಜಿ ಮಾಡಿ 'ಬ್ಯಾಂಕ್ ಡ್ರಾಫ್ಟ್' ಕೊಂಡುಕೊಳ್ಳಬಹುದು. ಹೀಗೆ 'ಡ್ರಾಫ್ಟ್' ಮಾಡುವ ಕೆಲಸಕ್ಕೆ ಬ್ಯಾಂಕಿನವರು ೧೦೦ ರೂಪಾಯಿಗಳಿಗೆ ಒಂದಾಣೆಯಂತೆ ಫೀ ತೆಗೆದುಕೊಳ್ಳಬಹುದು. ಈಚೆಗೆ ಬ್ಯಾಂಕು ಬ್ಯಾಂಕಿನಲ್ಲಿಯ ಸ್ಪರ್ಧೆಯ ಮೂಲಕ ಬ್ಯಾಂಕುಗಳ ದಲ್ಲಾಲಿ (ಕಮೀಶನ್) ತೀರ ಕಡಿಮೆಯಾಗಿರುವದು. ನಮಗೆ ಗೊತ್ತಿದ್ದ ಮಟ್ಟಿಗೆ ಕೆಲವು ಬ್ಯಾಂಕಿನವರು ಸುಮಾರು ೨-೩ ಸಾವಿರದ ರಕಮನ್ನು ದೇಶದಲ್ಲಿಯ ಯಾವ ಸ್ಥಳಕ್ಕಾದರೂ ಕ್ರಯವಿಲ್ಲದೆ ಸುಖವಾಗಿ ಕಳಿಸಬಹುದು.

**ಚೆಕ್ಕು, ಡ್ರಾಫ್ಟುಗಳ ಪ್ರಕಾರ ಬ್ಯಾಂಕುಗಳು ಮಾಡಬಲ್ಲ ಇತರ ವಸೂಲಿಯ ಕೆಲಸ:**— ಖಾತೇದಾರರ ಚೆಕ್ಕುಗಳ ಬ್ಯಾಂಕು ಡ್ರಾಫ್ಟುಗಳ ವಸೂಲಿಯ ಹೊರತಾಗಿ, ಅವರಿಗೋಸುಗ ಪಗಾರ ಇಲ್ಲವೆ ಪೆನ್ಶನ್ ಬಿಲ್ಲುಗಳ ವಸೂಲಿಯನ್ನಾದರೂ ಮಾಡಬಲ್ಲರು. ಕೆಲವು ಸರಕಾರದಲ್ಲಿಯ ಶಾಖೆಗಳು ಮತ್ತು ಕಂಪನಿಗಳು ತಮ್ಮ ನೌಕರರಿಗೆ ಸಂಬಳದ ಮೂಲಕ ರೋಖು ರಕಮು ಕೊಡದೆ ಬ್ಯಾಂಕಿನ ಚೆಕ್ಕುಗಳ ರೂಪದಲ್ಲಿ ಅವರಿಗೆ ಪ್ರತಿ ತಿಂಗಳ ಹಣವನ್ನು ಮುಟ್ಟಿಸುವರು. ಈ ತರದ ಚೆಕ್ಕುಗಳು 'ಕ್ರಾಸ್ಡ್' ಇದ್ದುದರಿಂದ ಆ ನೌಕರರಿಗೆ ಬ್ಯಾಂಕಿನಲ್ಲಿ ತಮ್ಮದೊಂದು ಖಾತೆಯನ್ನಿಟ್ಟು ಅವುಗಳ ವಸೂಲಿಯನ್ನು ಮಾಡಿಸಿಕೊಳ್ಳಬೇಕಾಗುವದು. ಈ ಕ್ರಮವು ಹಿತದ್ದಿದ್ದು ಬಂದ ಸಂಬಳದಲ್ಲಿ ಕೆಲವು ಭಾಗವಾದರೂ ತಿಂಗಳದ ಕೊನೆಗೆ ಉಳಿಯಲೇಬೇಕಾಗಿ ವಿಶೇಷ ಪ್ರಯತ್ನ ಮಾಡದೆ ಸ್ವಲ್ಪ ಸ್ವಲ್ಪ ರಕಮು ತಿಂಗಳ ಪ್ರತಿ ತಿಂಗಳ ಉಳಿಯುತ್ತ ಹೋಗುವದು. ಇದರಿಂದ ಜನರಲ್ಲಿ ಬ್ಯಾಂಕಿಂಗದ ಚಟವು ಉತ್ಪನ್ನವಾಗುವದು. ಕೆಲವು ಸರಕಾರದಲ್ಲಿಯ ನೌಕರರು ತಮ್ಮ ಸಂಬಳದ ಬಿಲ್ಲನ್ನು ತಿಂಗಳದ ಕೊನೆಯ ಸಪ್ತಾಹದಲ್ಲಿ ತಯಾರಿಸಿ ಬ್ಯಾಂಕಿನವರಿಗೆ ಒಪ್ಪಿಸಿದರೆ ಚೆಕ್ಕುಗಳಂತೆಯೇ ಬ್ಯಾಂಕಿನವರು ಅವನ್ನು ಟ್ರೇಝರಿ ಕಚೇರಿಗೆ ಕಳಿಸಿ ಅದರ ವಸೂಲಿ ತಕ್ಕ ಕಾಲಕ್ಕೆ ಬ್ಯಾಂಕಿನವರು ಮಾಡಿಕೊಡುವರು. ಇದೆಲ್ಲ ವಸೂಲಿಯನ್ನು ಮಾಡುವಗೋಸುಗ ಅವರು ತೀರ ಕಡಿಮೆ ದಲ್ಲಾಲಿ (ಕಮಿಶನ್) ಸ್ವೀಕರಿಸುವರು. ಸಂಬಳವಾಗಲಿ ಇಲ್ಲವೆ

ಪೆನ್‌ಶನ್‌ದ ರಕಮುಸ್ಸಾಗಲಿ ವಸೂಲಿಯನ್ನು ಮಾಡಿಕೊಡಲಿಕ್ಕೆ ಅವುಗಳ ರಕಮು ಎಷ್ಟೇ ಇದ್ದರೂ ನಾಲ್ಕಾರು ಆಣೆಗಳನ್ನು ಮಾತ್ರ ಆಕರಿಸುವರು. ಇಷ್ಟು ತುಸು ಖರ್ಚಿನಲ್ಲಿ ವಿನಾಪ್ರಯಾಸ ಖಾತೇದಾರರ ಕೆಲಸವು ಆಗಿ ಬಿಡುವದರಿಂದ ಜನರು ಈ ಕೆಲಸವನ್ನು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಬ್ಯಾಂಕಿನವರಿಗೆ ಒಪ್ಪಿಸಬೇಕು.

ಆದರಂತೆ, ವ್ಯಾಪಾರಿಗರು ಇತರ ಭಾಗದಲ್ಲಿದ್ದ ತಮ್ಮ ವ್ಯವಸಾಯ ಬಾಂಧವರಿಗೆ ಸರಕುಗಳನ್ನು ಕಳಿಸುವ ಕಾಲಕ್ಕೆ ತಮ್ಮ ರೇಲ್ವೆ ರಸೀದಿಗಳನ್ನು ಬ್ಯಾಂಕಿನವರಿಗೆ ಒಪ್ಪಿಸಿದರೆ ಅವರು ಬರತಕ್ಕ ರಕಮಿನ ವಸೂಲಿಯನ್ನು ಆ ಭಾಗದಲ್ಲಿದ್ದ ತಮ್ಮ ಪ್ರತಿನಿಧಿಯ ಮುಖಾಂತರ ಮಾಡಿಕೊಡುವರು. ಮಾತ್ರ ಈ ಪ್ರಕಾರದ ಕೆಲಸವನ್ನು ಒಪ್ಪಿಸುವಾಗ ರೇಲ್ವೆರಸೀದಿಯ ಗೂಡ ಖಾತೇದಾರರು ತಮ್ಮ ಗಿರಾಕಿಗಳನ್ನು ಉದ್ದೇಶಿಸಿ ಒಂದು ಹುಂಡಿಯನ್ನು ಬರೆಯಬೇಕು. ಆದು ಈ ಮೇರಿಗೆ ಇದ್ದರೆ ನಡೆಯಬಹುದು:—

"ಈ ಹುಂಡಿಯನ್ನು ತಂದವರಿಗೆ ಅದನ್ನು ಕಂಡಕೂಡಲೆ ಇಂತಿಷ್ಟು ರೂಪಾಯಿಗಳನ್ನು ಕೊಡಲಾಗಿ ನಮಗೆ ಬರತಕ್ಕ ರಕಮು ಮುಟ್ಟಿತೆಂದು ನಾವು ತಿಳಿಯುವೆವು."

ಶ್ರೀ........................

..........................

........................ ಸಹಿ...............

ಆದರೆ ಪಡೆಯತಕ್ಕ ರಕಮಿನ ವಸೂಲಿಯು ಕೆಲ ಅವಧಿಯನಂತರ ಮಾಡತಕ್ಕದ್ದಿದ್ದರೆ, ಖಾತೇದಾರರು ಸಾಕಷ್ಟು ಸ್ಟಾಂಪ ಕಾಗದದಮೇಲೆ ಮೇಲಿನಂತೆ ಹುಂಡೀ ಪತ್ರವನ್ನು ಹೀಗೆ ಬರೆಯಬೇಕು.

"ಈ ಹುಂಡಿಯನ್ನು ಹಾಜರ ಮಾಡುವವರಿಗೆ ಅವರಲ್ಲಿಯ ರಕಮು ಇಂತಿಷ್ಟು ರೂಪಾಯಿಗಳನ್ನು ಇಂತಿಷ್ಟು ದಿನಗಳ ನಂತರ ಕೊಡಬೇಕು."

ಶ್ರೀ........................

..........................

........................ ಸಹಿ...............

ಈ ಮೇರೆಗೆ ಹುಂಡಿಯ ಪತ್ರವನ್ನು ಬರೆದು ರೇಲ್ವೆ ರಸೀದಿಗಳನ್ನು ಜೋಡಿಸಿ ಬ್ಯಾಂಕಿನವರಿಗೆ ಬರೆಯುತಕ್ಕ ಪತ್ರದಲ್ಲಿ ಈ ಪ್ರಕಾರದ ಮುದತಿ ಹುಂಡಿಯ ವೇಳೆ ನಿರ್ಣಯಿಕರ ಅನುಮತಿಯ ಬಗ್ಗೆ ಸಹಿಯನ್ನು ಮಾಡಿಸಿ ಕೊಂಡು ರೇಲ್ವೆ ರಸೀದಿಗಳನ್ನು ಕೊಡಬೇಕೆಂಬವರ ಬಗ್ಗೆ ಸ್ಪಷ್ಟವಾಗಿ ತಿಳಿಸ ಬೇಕು. ಕೆಲವರು ಮುದ್ದತಿ ಹುಂಡಿಪತ್ರವನ್ನು ಕೊಟ್ಟು ಅದು ಸ್ವೀಕರಿಸಿ ದ್ದಾಗಿಯಾದರೂ ರಸೀದಿಗಳನ್ನು ರಕಮಿನ ವಸೂಲಿಯಾದ ನಂತರವೇ ಕೊಡಬೇಕೆಂಬ ಯೋಜನೆಮಾಡಿದ್ದರೆ ಇವೆರಡರಲ್ಲಿಯ ಭೇದವನ್ನು ಸ್ಪಷ್ಟ ವಾಗಿ ಬರೆದು ತಿಳಿಸಬೇಕು.

ಈ ತರದ ಮುದ್ದತಿ ಹುಂಡಿಗಳ ವಸೂಲಿಯ ಹೊರತಾಗಿ ಬ್ಯಾಂಕಿ ನವರು ಅವುಗಳನ್ನು ವಿಶಿಷ್ಟ ಖಾತೇದಾರರಿಗೋಸುಗ ಬಡ್ಡಿಯನ್ನು ತೆಗೆದು ಕೊಂಡು ಕೊಂಡುಕೊಳ್ಳುವರು. ಈ ವಿಷಯವನ್ನು ನಾವು ಮುಂದಿನ ಪ್ರಕರಣದಲ್ಲಿ ಚರ್ಚಿಸುವೆವು. ಈ ಕಾರ್ಯವು ಸಾಲದ ರೂಪದ್ದಿದ್ದುದ ರಿಂದ ಅದೇ ಸಂದರ್ಭದಲ್ಲಿ ಅದರ ವಿವರಣೆಯನ್ನು ಮಾಡುವದು ವಿಹಿತವಾಗುವದು.

ಅದರಂತೆ, ಧನಿಕ ಖಾತೇದಾರರು ತಮ್ಮ ಹತ್ತಿರಿದ್ದ ಶೇಅರ ಪೇಟೆ ಯಲ್ಲಿ ಮಾರಬಲ್ಲ ಭಾಗಗಳನ್ನಾಗಲಿ, ಸರಕಾರದ ವಿಶ್ವಾಸಪತ್ರಗಳನ್ನಾಗಲಿ ಮಾರಬೇಕಾದಾಗ, ಬ್ಯಾಂಕಿನವರು ಸೂಚಿಸಿದ ಮೇರೆಗೆ ಅವುಗಳನ್ನು ಒಪ್ಪಿಸಿದರೆ ಅವುಗಳ ರಕಮಿನ ವಸೂಲಿಯನ್ನಾದರೂ ಮಾಡಿಕೊಡುವರು. ಸರಕಾರದ ವಿಶ್ವಾಸಪತ್ರಗಳನ್ನು ಮಾರಬೇಕಾದರೆ, ಖಾತೇದಾರರು ವಿಶ್ವಾಸಪತ್ರಗಳ ಹಿಂಭಾಗದಲ್ಲಿ ಕಾದಿಟ್ಟ ಸ್ಥಳದಲ್ಲಿ ವಿಶ್ವಾಸಪತ್ರಗಳ ರಕಮನ್ನು ಇಂತಹ ಬ್ಯಾಂಕಿನವರಿಗೆ ಕೊಡಬೇಕೆಂದು ಬರೆಯಬೇಕು. ತಾವು ಅವುಗಳನ್ನು ಸ್ವೀಕರಿಸುವ ಕಾಲಕ್ಕೆ ತಮ್ಮ ಹೆಸರು ಯಾವ ಪ್ರಕಾರ ವಿಶ್ವಾಸಪತ್ರಗಳಲ್ಲಿ ಇರುವದೋ ಅದೇ ಪ್ರಕಾರ ಯಾವ ಅಕ್ಷರದಲ್ಲಿಯೂ ಭೇದ ಮಾಡದೆ ಸ್ಪಷ್ಟವಾಗಿ ಬರೆಯಬೇಕು. ಈ ತರದ ಸಹಿಯು ಇಂಗ್ರೇಜಿ ಭಾಷೆಯಲ್ಲಿದ್ದರೆ ಸಾಗುವದು. ಪ್ರಾಂತಿಕ ಭಾಷೆಯಲ್ಲಿ ಸಹಿಯನ್ನು ಮಾಡ ಬೇಕಾಗಿದ್ದರೆ ಅದನ್ನು ಮ್ಯಾಜಿಸ್ಟ್ರೇಟರ ಸಮಕ್ಷ ಮಾಡಿ ಅವರ ಕಚೇರಿಯ

ಸ್ಟ್ಯಾಂಪ ಹಾಕಿಸಿಕೊಳ್ಳಬೇಕು. ಕಾರಣ, ಈ ವಿಶ್ವಾಸಪತ್ರಗಳು 'ಪಬ್ಲಿಕ್ ಡೆಟ್ ಆಫೀಸಿಗೆ' ಕಳಿಸಲಾಗುವವು. ಅಲ್ಲಿಯ ಅಧಿಕಾರಿಗಳಿಗೆ ಪ್ರತಿಯೊಂದು ಪ್ರಾಂತದ ಭಾಷೆಯ ಪರಿಚಯವಿರದ್ದರಿಂದ ಸಾಮಾನ್ಯವಾಗಿ ನಡೆಯುತ್ತ ಬಂದ ವ್ಯವಹಾರವು ಇಂಗ್ರೇಜಿ ಭಾಷೆಯಲ್ಲಿಯೇ ಸಾಗುವದು. ಈ ಪ್ರಕಾರ ವಿಶ್ವಾಸಪತ್ರಗಳನ್ನು ಸಹಿಮಾಡಿ ಬ್ಯಾಂಕಿನವರಿಗೆ ಒಪ್ಪಿಸುವಕಾಲಕ್ಕೆ ಒಂದು ಪತ್ರವನ್ನು ಬರೆದು ಮಾರಾಟದ ನಂತರ ವಸೂಲಾದ ಹಣವನ್ನು ತಮ್ಮ ಖಾತೆಕ್ಕೆ ಜಮಾ ಮಾಡುವ ಬಗ್ಗೆ ತಿಳಿಸಬೇಕು. ಅದೇ ಮೇರೆಗೆ ಕಂಪನಿ ಶೇಅರುಗಳನ್ನು ಮಾರಬೇಕಾದಾಗ ಖಾತೇದಾರರು ತಮ್ಮ ಹತ್ತಿರಿದ್ದ ಶೇಅರ ಸರ್ಟಿಫಿಕೇಟುಗಳನ್ನೂ ಅವುಗಳಿಗೆ ಸಂಬಂಧಿಸಿದ ಸಾಕಷ್ಟು ಕೋರಾ ಟ್ರಾನ್ಸಫರ್ ಫಾರ್ಮುಗಳನ್ನು ತುಂಬಿ ಮೇಲೆ ತಿಳಿಸಿದಂತೆ ಪತ್ರವನ್ನು ಬರೆದು ಬ್ಯಾಂಕಿನವರಿಗೆ ಒಪ್ಪಿಸಬೇಕು. ಕೋರಾ ಟ್ರಾನ್ಸಫರ್ ಫಾರ್ಮುಗಳನ್ನು ಬ್ಯಾಂಕಿನವರು ಕೊಡಬಹುದು. ಆ ಫಾರ್ಮಿನಲ್ಲಿ ಶೇಅರು ಮಾರತಕ್ಕವರಿಗೆ ಸಹಿಯನ್ನು ಮಾಡಲಿಕ್ಕೆ ಸ್ಥಾನವಿರುವದು. ಸರ್ಟಿಫಿಕೇಟುಗಳು ಇಬ್ಬರ ಹೆಸರಿನಲ್ಲಿದ್ದರೆ ಇಬ್ಬರೂ ಸಹಿಗಳನ್ನು ಮಾಡಬೇಕು. ಮತ್ತು ಮಾಡಿದ ಸಹಿಗಳಿಗೆ ಅದರ ಹತ್ತರಿದ್ದ ಸ್ಥಾನದಲ್ಲಿ ಸಾಕ್ಷಿಯನ್ನಾದರೂ ಹಾಕಿಸಬೇಕು. ಶೇಅರುಗಳನ್ನು ಕೊಳ್ಳುವಾಗ ಕಂಪನಿಯವರಿಗೆ ಒಪ್ಪಿಸಿದ ನಮೂನೆಯ ಮೇರೆಗೆ ಸಹಿಯನ್ನು ಮಾಡಬೇಕು. ಭಿನ್ನ ಭಿನ್ನ ಶೇಅರುಗಳಿಗೆ ವಿಶಿಷ್ಟ ನಂಬರುಗಳ ಟ್ರಾನ್ಸಫರ್ ಫಾರ್ಮುಗಳು ಬೇಕಾಗುವವು. ಅದರ ಬಗ್ಗೆ ಪೂರ್ಣ ವಿಚಾರವನ್ನು ಮೊದಲು ಮಾಡಿಕೊಂಡು ಸಾಕಷ್ಟು ಫಾರ್ಮುಗಳನ್ನು ಕೊಡಬೇಕು.

ವಿಶ್ವಾಸಪತ್ರಗಳನ್ನಾಗಲಿ ಶೇಅರುಗಳನ್ನಾಗಲಿ ಮಾರುವ ಕಾಲಕ್ಕೆ ವೃತ್ತಪತ್ರದಲ್ಲಿ ಅವುಗಳ ಬಗ್ಗೆ ಪೇಟೆಯಲ್ಲಿಯ ಪ್ರಚಲಿತಕ್ರಯವನ್ನು ತಿಳಿದುಕೊಂಡು ಇಂತಿಷ್ಟು ರಕಮಿನ ತನಕ ಮಾರಬೇಕೆಂದು ಬ್ಯಾಂಕಿನವರಿಗೆ ತಿಳಿಸಬೇಕು. ಅವರೆ ಹೀಗೆ ತಿಳಿಸಿದಾಗ, ಮಾರಾಟವನ್ನು ಮಾಡುವ ಸಮಯಕ್ಕೆ ಖಾತೇದಾರರು ನಿಯಮಿಸಿದ ಕ್ರಯವು ಬರದಿದ್ದರೆ ವ್ಯವಹಾರವು ನಿಂತು ಹೋಗಬಹುದು. ಆದಕಾರಣ, ತಕ್ಕ ಕ್ರಯವನ್ನು ದೊರಕಿಸಬೇಕೆಂದು ಬ್ಯಾಂಕಿನವರಿಗೆ ಬರೆಯತಕ್ಕ ಪತ್ರದಲ್ಲಿ ತಿಳಿಸಿದರೆ, ವ್ಯವಹಾರವು

ತೊಂದರೆಯಿಲ್ಲದೆ ಆಗುವದು. ಕೆಲವು ಜನರು ಶೇಅರುಗಳ ಕ್ರಯವು ಹೆಚ್ಚಾಗುತ್ತಿದ್ದನ್ನು ಕಂಡು ಅವುಗಳ ಮಾರಾಟವನ್ನು ಇಂತಹ ಕ್ರಯಕ್ಕೆಯೇ ಮಾರಬೇಕೆಂದು ತಿಳಿಸುವರು. ಒಂದುಸಲ ಈ ಕ್ರಯವು ದಿನದಲ್ಲಿ ಯಾವ ಕಾಲಕ್ಕಾದರೂ ಸಿಗುವಂತೆ ಇದ್ದರೂ ಕೂಡ ಅದು ಸಿಗದೆ ಹೋಗುವದು ಇದರ ಕಾರಣವು ತಿಳಿಯಬೇಕೆಂದು ನಾವು ಸ್ವಲ್ಪದರಲ್ಲಿ ಶೇಅರ ಬಾಜಾರದಲ್ಲಿಯ ವ್ಯವಹಾರದ ವರ್ಣನೆಯನ್ನು ಮಾಡುವೆವು. ಆದರಿಂದ ಈ ಬಗ್ಗೆ ವಿಷಯಾಂತರವಾಗಬಹುದಾದರೂ ಓದುಗರಿಗೆ ತುಸು ಅದರ ಕಲ್ಪನೆಯನ್ನು ಕೊಡಬೇಕೆಂಬ ನಮ್ಮ ವಿಚಾರವಿರುವದು. ವಿಶ್ವಾಸಪತ್ರಗಳಾಗಲಿ, ಶೇಅರುಗಳಾಗಲಿ ತಮ್ಮ ಕೈಯಲ್ಲಿ ಬಂದನಂತರ ಬ್ಯಾಂಕಿನವರು ನಿಯೋಜಿಸಿದ ಪೇಟೆಯಲ್ಲಿಯ ದಲಾಲರನ್ನು ಕರೆಸಿಕೊಂಡು ಅವರಿಗೆ ಮಾರಾಟದ ಇಲ್ಲವೆ ಕೊಳ್ಳುವ ವ್ಯವಹಾರವನ್ನು ಒಪ್ಪಿಸುವರು. ಈ ಪೇಟೆಯಲ್ಲಿಯ ವ್ಯವಹಾರವು ದಲಾಲರ ಮುಖಾಂತರವೇ ಆಗುವದರಿಂದ ಅವರ ಹೊರತಾಗಿ ಯಾರೂ ಅಲ್ಲಿಗೆ ಹೋಗಲಾರರು. ಕೊಟ್ಟ ಅಪ್ಪಣೆಯ ಪ್ರಕಾರ ದಲಾಲರು ಈ ವ್ಯವಹಾರದ ಪೂರ್ತಿಗಾಗಿ ಎರಡನೆಯ ದಲಾಲರ ಕಡೆಗೆ ಹೋಗುವರು. ಈ ತರದ ಉದ್ಯೋಗದಲ್ಲಿ ಮುಂಬಯಿಯಲ್ಲಿಯ ಶೇಅರ ಪೇಟೆಯಲ್ಲಿ ಸುಮಾರು ೧೦೦೦ ದಲಾಲರಿರುವರು ಅವರೆಲ್ಲರ ಪ್ರತಿನಿಧಿಗಳು ತಕ್ಕ ಸಮಯಕ್ಕೆ ಪೇಟೆಯು ಪ್ರಾರಂಭವಾದ ಕೂಡಲೆ ಒಂದು ವರ್ತುಲಾಕಾರದ ವಿಶಾಲವಾದ ಸ್ಥಳದಲ್ಲಿ (Ring) ಒಟ್ಟುಗೂಡುವರು. ಸಾವಿರ ದಲಾಲರ ನೂರಾರು ಪ್ರತಿನಿಧಿಗಳೂ, ಪೇಟೆಯಲ್ಲಿಯ ವ್ಯವಹಾರದಲ್ಲಿದ್ದ ನೂರಾರು ಪ್ರಕಾರದ ಶೇಅರುಗಳ ಮಾರಾಟವೂ ತಮ್ಮ ಕುಳಗಳಿಗೆ ತಕ್ಕ ಕ್ರಯವನ್ನು ದೊರಕಿಸಬೇಕೆಂಬುದರ ಬಗ್ಗೆ ತತ್ಪರತೆಯೂ ಕೂಡಿ, ಪೇಟೆಯು ಮುಗಿಯುವ ತನಕ ಆ ಸ್ಥಳದಲ್ಲಿ ಒಳ್ಳೇ ಗದ್ದಲವಿರುವದು. ದಲಾಲರ ಕಚೇರಿಗಳು ಸಮೀಪದಲ್ಲಿಯೇ ಇದ್ದರೂ ಅವರ ಪ್ರತಿನಿಧಿಗಳು ಅಪ್ಪಣೆಯನ್ನು ಪಡೆದುಕೊಂಡು ಈ 'ರಿಂಗ'ದ ವರೆಗೆ ಮುಟ್ಟುವ ಅವಧಿಯಲ್ಲಿ ಕ್ರಯದಲ್ಲಿ ಹೆಚ್ಚುಕಡಿಮೆ ಆಗುವ ಸಂಭವವಿರುವದು, ಮತ್ತು ವಿಶಿಷ್ಟ ದರದಿಂದಲೇ ಮಾರಬೇಕೆಂದು ಬ್ಯಾಂಕಿನವರಿಗೆ ತಿಳಿಸಿದರೆ ಮೇಲೆ ವಿವರಿಸಿದ ಕಾರಣದ ಮೂಲಕ ದರವು ಸಿಗದೇ ಹೋಗುವದು. ಆದ್ದರಿಂದ

ಶೇಅರುಗಳನ್ನು ಕೊಳ್ಳುವಾಗಾಗಲಿ. ಮಾರಾಟಮಾಡುವಾಗಾಗಲಿ ಬ್ಯಾಂಕಿನ ವರಿಗೆ ಬರೆಯುತಕ್ಕ ಪತ್ರದಲ್ಲಿ ಯೋಗ್ಯದರಲ್ಲಿ (Best rate) ವ್ಯವಹಾರ ವನ್ನು ಮುಗಿಸಬೇಕೆಂದು ತಿಳಿಸುವದರಿಂದ ಯಾವ ಬಗೆಯ ಗೊಂದಲವೂ ಆಗುವಂತಿಲ್ಲ. ಬ್ಯಾಂಕಿಂಗದಲ್ಲಿಯ ಪ್ರತಿಯೊಂದು ವ್ಯವಹಾರವು ಖಾತೇ ದಾರರ ಹಿತಕ್ಕಾಗಿಯೇ ಸಾಗುವದೆಂಬದರಲ್ಲಿ ಸಂದೇಹವಿಲ್ಲ. ಖಾತೇದಾರರ ಉತ್ಕರ್ಷವು ಬ್ಯಾಂಕಿಂಗದ ಬೆಳವಣಿಗೆಗೆ ಪ್ರತ್ಯಕ್ಷ ಸಹಾಯಕವಾದದ್ದು. ಇದೇ ತತ್ವಕ್ಕನುಸರಿಸಿ ಬ್ಯಾಂಕಿನವರಿಗೆ ಖಾತೇದಾರರು ಯಾವದೇ ಕೆಲಸ ವನ್ನು ಒಪ್ಪಿಸಿದರೂ ಅವರು ಅದನ್ನು ದಕ್ಷತೆಯಿಂದ ತಮ್ಮ ಖಾತೇದಾರರ ಹಿತಕ್ಕಾಗಿಯೇ ಮಾಡುವರು

## ಬಳಿಕೆ (ಚಾಲತಿ) ಖಾತೆಯ ವಿಷಯಕ್ಕೆ ಸಾಮಾನ್ಯ ಟಿಪ್ಪಣಿಗಳು

ಬ್ಯಾಂಕಿಂಗ್ ವ್ಯವಸಾಯಕ್ಕೆ ಹೊಂದಿದ ಅನೇಕ ಭಾಗಗಳಲ್ಲಿ ಖಾತೇ ದಾರರಿಂದ ಬಳಿಕೆ (ಚಾಲತಿ) ಖಾತೆಯನ್ನು ಸಾಗಿಸುವದಕ್ಕೆ ರಕಮನ್ನು ಸ್ವೀಕರಿಸುವದು ಮತ್ತು ಚೆಕ್ಕಿನ ಮುಖಾಂತರ ಆ ರಕಮಿನ ವಿನಿಯೋಗ ವನ್ನು ಮಾಡುವದೊಂದು ಮುಖ್ಯ ಕಾರ್ಯಭಾಗವಿರುವದು. ಅದರಂತೆ ಇತರ ಠೇವುಗಳನ್ನಾದರೂ ಬ್ಯಾಂಕು ಸ್ವೀಕರಿಸುವದು. ಚೆಕ್ಕುಗಳ, ವಿಶ್ವಾಸಪತ್ರಗಳ, ಶೇಅರುಗಳ, ಹಣದ ವಸೂಲಿಯನ್ನು ಮಾಡುವದು ಮತ್ತು ಜನರು ವಿನಂತಿಸಿದಂತೆ ದೇಶದಲ್ಲಿಯ ಇತರ ಪಟ್ಟಣಗಳಿಗೆ ಹಣ ವನ್ನು ಡ್ರಾಫ್ಟ್ ರೂಪದಿಂದ ಕಳಿಸುವದು, ಬ್ಯಾಂಕಿನ ಇತರ ವ್ಯವಸಾಯ ವಾದರೂ ಇರುವದು. ತಾರಣವನ್ನಿಟ್ಟುಕೊಂಡು ಸಾಲವನ್ನು ಕೊಡುವದು, ಖಾತೇದಾರರಿಗೋಸುಗ ಅವರು ನಿಯಮಿಸಿದ ಮೇರೆಗೆ ಕಾಲಕಾಲಕ್ಕೆ ಇತ್ತಿತ್ತ ಕೊಡಬಹುದಾದ ರಕಮು ಸರಿಯಾಗಿ ತಪ್ಪದೆ ಕೊಡುವದು, ಮುಂತಾದ ತರತರದ ಉದ್ಯೋಗವನ್ನು ಬ್ಯಾಂಕಿನವರು ಮಾಡಬಲ್ಲರು.

ಚಾಲತಿ ಖಾತೆಯನ್ನು ಪ್ರಾರಂಭಮಾಡುವ ಪೂರ್ವದಲ್ಲಿ ಪರಿಚಯದ ಮೂಲಕ ಬ್ಯಾಂಕಿನ ಅಧಿಕಾರಿಯು ತನ್ನ ಖಾತೇದಾರರನ್ನು ಆರಿಸಿ ಸ್ವೀಕರಿ ಸುವ ಅಧಿಕಾರವನ್ನು ಉಪಯೋಗಿಸುವರು. ಅದೇ ಸಮಯಕ್ಕೆ ಬ್ಯಾಂಕಿ ನವರು ನಿಯಮಿಸಿದ ಕಲಮುಗಳನ್ನು ಮಾನ್ಯಮಾಡುವದರಲ್ಲಿ ಬರುವ

ದೆಂಬುವರ ಒಗ್ಗೆ ಅರ್ಜಿದಾರರಿಂದ ಬರೆಯಿಸಿಕೊಳ್ಳುವನು. ಇದೆಲ್ಲ ಸಮಾಧಾನಕರವಾಗಿ ಸಾಗಿಹೋದ ನಂತರ ಖಾತೆಯು ಪ್ರಾರಂಭವಾಗಿ, ಅದನ್ನು ಸಾಗಿಸುವ ಜವಾಬದಾರಿಯು ಬ್ಯಾಂಕಿನದು. ಖಾತೇದಾರರು ಬರೆದ ಚೆಕ್ಕುಗಳು ಸರಿಯಾಗಿದ್ದರೆ ಅವುಗಳ ರಕಮನ್ನು ಕೂಡಲೇ ಕೊಡಬೇಕು. ಅವರು ಇಂತಹ ಚೆಕ್ಕಿನ ರಕಮನ್ನು ಕೊಡಬಾರದೆಂದು ಬರೆದು ತಿಳಿಸಿದರೆ ಅದರ ನೋಂದವನ್ನು ಬುಕ್ಕುಗಳಲ್ಲಿ ಮಾಡಿಟ್ಟು ಆ ನಂಬರಿನ ಮತ್ತು ಇತರ ಕಲಮುಗಳು ಹೊಂದಿದ ಚೆಕ್ಕು ವಸೂಲಿಯಗೋಸುಗ ತಂದರೆ ಅದನ್ನು ಬ್ಯಾಂಕಿನವರು ತಿರುಗಿ ಕೊಡುವರು. ಮಾತ್ರ, ಖಾತೆಯಲ್ಲಿದ್ದ ಶಿಲ್ಕಿಗಿಂತ ಹೆಚ್ಚಾದ ರಕಮಿನ ಚೆಕ್ಕುಗಳನ್ನು ಬರೆಯತಕ್ಕದ್ದಲ್ಲೆಂದು ನಿಯಮವಿರುವದು. ಈ ನಿಯಮವನ್ನು ದುರ್ಲಕ್ಷಿಸಿ ಖಾತೇದಾರರು ಮನಬಂದಂತೆ ಚೆಕ್ಕುಗಳನ್ನು ಬರೆಯುತ್ತಾ ಹೋದರೆ ಬ್ಯಾಂಕಿನವರು ಅವರಿಗೆ ನೋಟೀಸು ಕೊಟ್ಟು ಖಾತೆಯನ್ನು ನಿಲ್ಲಿಸುವರು. ಎಷ್ಟೋ ತರದ ಸಣ್ಣ-ದೊಡ್ಡ ಖಾತೆಗಳು ಬ್ಯಾಂಕಿನಲ್ಲಿರುವದರಿಂದ ಮತ್ತು ಈ ಖಾತೇದಾರರು ಆಗಾಗ್ಗೆ ಬರೆದು ತಿಳಿಸಿದಂತೆ ಅವರ ಹಿತಕ್ಕಾಗಿ ದಕ್ಷತೆಯಿಂದ ಕೆಲಸಮಾಡುತ್ತಾ ಹೋದಂತೆ, ಬಳಿಕೆಯ ಖಾತೆಗಳನ್ನು ಸಾಗಿಸುವ ಉಪಕ್ರಮವು ಬಹಳೇ ಖರ್ಚಿನ ವ್ಯಾಪವಿದ್ದದ್ದು ಕಂಡುಬಂದದ್ದರಿಂದ ಸಾಧಾರಣವಾಗಿ ವರ್ಷದಲ್ಲಿ ಎರಡು ಸಲ ಎಲ್ಲ ಖಾತೆಗಳಿಂದ ಕಮಿಶನ್‌ಪರವಾಗಿ ಕೆಲವು ರಕಮು ಬ್ಯಾಂಕಿನವರು ಖರ್ಚು ಹಾಕಿ ತೆಗೆದುಕೊಳ್ಳುವರು, ಮತ್ತು ಖಾತೆಯು ಪ್ರಾರಂಭವಾಗುವ ಕಾಲಕ್ಕೆ ಈ ತರದ ಕಮಿಶನ್‌ದ ರಕಮನ್ನು ಖಾತೆಯಲ್ಲಿ ಖರ್ಚು ಹಾಕಿ ತೆಗೆದುಕೊಳ್ಳಬಹುದೆಂದು ಅಪ್ಪಣೆಯನ್ನಾದರೂ ಪಡೆಯುವರು. ಪರದೇಶದಲ್ಲಿಯ ಒಂದು ಬ್ಯಾಂಕಿನವರು ಬಳಿಕೆಯ (ಚಾಲತಿ) ಖಾತೇದಾರರು ಪಡೆಯುವ ಸಹಾಯವು ಬ್ಯಾಂಕು ಮಾಡುವ ಖರ್ಚಿಗಿಂತ ಹೆಚ್ಚಾಗಿದ್ದು ಕಂಡುಬಂದದ್ದನ್ನು ಹೇಳಿರುವರು. ಮತ್ತು ಅವರು ಸೂಕ್ಷ್ಮವಾಗಿ ಈ ಬಗ್ಗೆ ವಿಚಾರಿಸುತ್ತಿರುವರು.

ಬ್ಯಾಂಕು ಮತ್ತು ಖಾತೇದಾರರ ಪರಸ್ಪರ ಸಂಬಂಧದ ಬಗ್ಗೆ ವಿಚಾರಿಸುವಾ. ಬ್ಯಾಂಕು ಖಾತೇದಾರರ ಏಜೆಂಟರಲ್ಲ, ಟ್ರಸ್ಟೀ ಅಲ್ಲ. ಖಾತೇದಾರರು ಬ್ಯಾಂಕಿನವರ ಧನಕೋ (Creditor) ಮತ್ತು ಬ್ಯಾಂಕು ಋಣಕೋ

(Debitor) ಆದ್ದರಿಂದ, ಖಾತೇದಾರರು ಚೆಕ್ಕುಗಳನ್ನು ಬರೆದಂತೆ ಬ್ಯಾಂಕು ಈ ಸಾಲವನ್ನು ಮುಟ್ಟಿಸತಕ್ಕದ್ದು. ಠೇವುದಾರರು ಬ್ಯಾಂಕಿನವರಿಗೆ ತಮ್ಮ ರಕಮನ್ನು ಒಪ್ಪಿಸಿದ ಕೂಡಲೇ, ಆ ಹಣವು ಠೇವುದಾರರದೆಂದು ಹೇಳಲಾಗದು. ಅದು ಬ್ಯಾಂಕಿನವರ ಹಣವಾಗುವದು. ಮಾತ್ರ ಠೇವಿನ ರಕಮು ಕರಾರದ ಮೇರೆಗೆ ಮುಟ್ಟಿಸಲಾಗುವದು. ಬ್ಯಾಂಕಿನಲ್ಲಿರುವ ರಕಮಿ ನಲ್ಲಿ ಠೇವುದಾರರು ತಾವಾಗಿಯೇ ತಮ್ಮ ಹಣವನ್ನು ಒಪ್ಪಿಸಿದ ನಂತರ ಆದು ಬ್ಯಾಂಕಿನವರ ವಶದಲ್ಲಿ ಹೋಗುವದು. ಅದು ಬ್ಯಾಂಕಿನ ಹಣವಾ ಗುವದು. ಈ ಹಣದ ಉಪಯೋಗವು ಬ್ಯಾಂಕಿನವರು ತಮಗೆ ಯೋಗ್ಯ ಕಂಡಂತೆ ಮಾಡಬಲ್ಲರು. ಹೀಗೆ ಉಪಯೋಗಿಸಿ ಲಾಭವನ್ನಾದರೂ ಪಡೆ ಯುವರು. ಈ ತರದಿಂದ ಪಡೆದ ಲಾಭದ ಹಣವಾದರೂ ಬ್ಯಾಂಕಿನವರ ಕಡೆಗೆ ಉಳಿಯುವದು. ಈ ಮೇರೆಗೆ ಹಣದ ಉಪಯೋಗವನ್ನು ಅವರು ಮಾಡಿದ ಬಗ್ಗೆ, ಬ್ಯಾಂಕಿನವರು ಖಾತೇದಾರರ ವಿಶ್ವಾಸಘಾತ ಮಾಡಿದ ರೆಂದು ಅನ್ನಲಾಗದು. ಠೇವುದಾರರು ಬ್ಯಾಂಕಿನವರಿಂದ ತಮ್ಮ ಠೇವಿನ ರಕಮು ಮತ್ತು ಬಡ್ಡಿಯನ್ನಷ್ಟೇ ಬೇಡಬಹುದು. ಮತ್ತು ಕರಾರದಮೇರೆಗೆ ಈ ರಕಮು ಮುಟ್ಟಿಸಲಾಗುವದು. ಈ ಹಣವನ್ನು ಒಂದೊಂದು ಸಲ ಬ್ಯಾಂಕಿನವರು ಅನಿಷ್ಟ ವ್ಯವಹಾರದಲ್ಲಿಯೂ ತೊಡಕಿಸಬಹುದು. ಠೇವು ದಾರರು ತುಂಬಿದ ರಕಮು ಅದೇ ಸ್ವರೂಪದಲ್ಲಿ ಇರಲಾರದು ಮತ್ತು ಆ ರಕಮು ಠೇವುದಾರರ ಆಸ್ತಿಯೆಂದಾದರೂ ಮನ್ನಿಸಲಾಗದು. ಬ್ಯಾಂಕಿನವರ ಮತ್ತು ಖಾತೇದಾರರ ಸಂಬಂಧವು ಈ ಪ್ರಕಾರದ್ದಿದ್ದುದರಿಂದ ಬ್ಯಾಂಕು ಈ ಸಂಸ್ಥೆಯು ಖಾತೇದಾರರ ಏಜನ್ಸಿ ತರಹದ ಸಂಸ್ಥೆಯಲ್ಲ.

ಮಾತ್ರ, ಖಾತೇದಾರರು ಬ್ಯಾಂಕಿನ ಸಾಲಗಾರರಿದ್ದರೆ, ಬ್ಯಾಂಕಿ ನವರ ವಶದಲ್ಲಿದ್ದ ಖಾತೇದಾರರ ಇತರ ವ್ಯವಹಾರದಲ್ಲಿ ಬ್ಯಾಂಕಿನವರ ಹತ್ತರಿದ್ದ ಹಣವಾಗಲಿ, ವಿಶ್ವಾಸಪತ್ರಗಳಾಗಲಿ, ಸರಕುಗಳಾಗಲಿ ಬ್ಯಾಂಕಿ ನವರು ಸಾಲದ ವಸೂಲಿಯಗೋಸುಗ ಅದನ್ನು ಉಪಯೋಗಿಸುವ ಅಧಿಕಾರ ಪ್ರಾಪ್ತವಾಗುವದು. ಇದಕ್ಕೆ ಸರ್ವಸಾಧಾರಣ ತಾಬೇದಾರಿಯೆಂದೆನ್ನ ಬಹುದು. (General lien) ಈ ತರದ ಆಸ್ತಿಯು ಕೇವಲ ಸುರಕ್ಷಿತೆಯ ಗೋಸುಗ ಬ್ಯಾಂಕಿಗೆ ಅವನ್ನು ಒಪ್ಪಿಸಿದ್ದರೆ (Safe custody)

ಮೇಲೆ ವಿವರಿಸಿದಂತಹ ತಾಬೇದಾರಿ ಹಕ್ಕು ಪ್ರಸ್ಥಾಪಿತವಾಗಲಾರದು. ಕಾರಣ, ಈ ಸಂದರ್ಭದಲ್ಲಿ ಬ್ಯಾಂಕಿನವರು ಟ್ರಸ್ಟಿಯಾಗುವರು. ಒಬ್ಬ ಖಾತೇದಾರನು ಅದೇ ಬ್ಯಾಂಕಿನಲ್ಲಿಯ ಎರಡು ಭಿನ್ನ ಶಾಖೆಗಳಲ್ಲಿ ಬೇರೆ ಬೇರೆ ಖಾತೆಗಳನ್ನಿಟ್ಟಾಗ ಬ್ಯಾಂಕಿನ ಸಾಲದ ವಸೂಲಿಯಗೋಸುಗ ಎಲ್ಲ ಖಾತೆಗಳಲ್ಲಿಯ ಹಣವನ್ನು ಒತ್ತಟ್ಟಿಗೆ ಮಾಡುವ ಅಧಿಕಾರವಾದರೂ ಬ್ಯಾಂಕಿಗೆ ಇರುವದು.

ಬ್ಯಾಂಕಿನ ಮತ್ತು ಖಾತೇದಾರರ ಸಂಬಂಧವು ಯಾವದೇ ಪ್ರಕಾರ ದ್ದಿದ್ದರೂ ಸಹಿತ ಬ್ಯಾಂಕಿನವರು ಖಾತೆಯ ವಿಷಯಕ್ಕೆ ಯಾವ ಸಂಗತಿ ಯನ್ನು ಹೊರಗೆಡವಲಾರರು. ಈ ತರದ ಜವಾಬದಾರಿಯು ಬ್ಯಾಂಕಿನ ಮತ್ತು ಖಾತೇದಾರರ ಸಂಬಂಧದಲ್ಲಿ ಇದ್ದೇ ಇರುವದು. ಕೆಳಗೆ ವಿವರಿಸಿದ ಮೂರು ಕಾರಣಗಳ ಮೂಲಕ ಮಾತ್ರ ಬ್ಯಾಂಕಿನವರು ಖಾತೆಯ ವಿಷಯಕ್ಕೆ ತಮ್ಮ ಮತವನ್ನು ಕೊಡಬಲ್ಲರು.

೧. ಖಾತೇದಾರರು ತಾವಾಗಿಯೋ ಇತರರಿಗೆ ತಮ್ಮ ಖಾತೆಯ ವಿಷಯಕ್ಕೆ ಬ್ಯಾಂಕಿನವರಿಗೆ ಕೇಳಬಹುದೆಂದು ತಿಳಿಸಿದಾಗ;

೨. ಕಾಯಿದೆಯ ಮೇರೆಗೆ ತಿಳಿಸಲೇಬೇಕಾದಾಗ;

೩. ಖಾತೆಯಲ್ಲಿದ್ದ ರಕಮು ದೇಶದ್ರೋಹದ ಉದ್ಯೋಗದಲ್ಲಿ ತೊಡಗಿರಬಹುದೆಂದು ಕಂಡಾಗ.

ಇದರ ಹೊರತಾಗಿ ಒಂದು ಬ್ಯಾಂಕಿನವರು ಇನ್ನೊಂದು ಬ್ಯಾಂಕಿನವ ರಿಗೆ ಯಾವದೇ ಖಾತೆಯ ವಿಷಯಕ್ಕೆ ಮತವನ್ನು ಕೇಳಿದರೆ ಅವರವರಲ್ಲಿ ಸೌಜನ್ಯದ ಮೂಲಕ ತೀರ ದಕ್ಷತೆಯಿಂದ ತಮ್ಮ ಮತವನ್ನು ಕೊಡಬಲ್ಲರು.

---

೨

# ಬ್ಯಾಂಕು ಮತ್ತು ಸಾಲದ ವ್ಯವಹಾರ

ಇದು ವರೆಗೆ ನಾವು ಠೇವು ಖಾತೆಗಳ ಬಗ್ಗೆ ತಕ್ಕಮಟ್ಟಿಗೆ ಸವಿಸ್ತಾರವಾಗಿ ವಿಚಾರಿಸಿದೆವು. ಠೇವನ್ನಿಟ್ಟುಕೊಳ್ಳುವದೊಂದು ಬ್ಯಾಂಕಿನವರ ಪ್ರಧಾನವಾದ ಕಾರ್ಯವಿದ್ದಂತೆಯೇ ಈ ಮಾರ್ಗದಿಂದ ಕೈಸೇರಿದ ಹಣದ ವಿನಿಯೋಗವು ಅದಕ್ಕೂ ಮಹತ್ವವಾದ ಕಾರ್ಯಭಾಗವಿರುವದು. ಕಾರಣ, ಬ್ಯಾಂಕು ಈ ಸಂಸ್ಥೆಯಾದರೂ ಸಾಲ ಪಡೆದ ಹಣದ ಮೇಲೆ ಉಪಜೀವಿಸುವದು. ಉಪಜೀವನಕ್ಕಾಗಿ ತಮ್ಮ ಖಾತೇದಾರರ ಹಣವನ್ನು ಮನಬಂದಂತೆ ತೊಡಕಿಸುವದು ಇಷ್ಟವಲ್ಲ. ಬ್ಯಾಂಕಿನವರು ಕೊಡತಕ್ಕ ಸಾಲವು ಸಮಾಜಕ್ಕೆ ಉಪಯುಕ್ತವಾದದ್ದಿರಬೇಕು. ಕೊಡತಕ್ಕ ಹಣವು ಅಡವು ಇಲ್ಲದೆ ಕೊಡಲಾಗದು. ಎಲ್ಲ ಆರ್ಥಿಕ ಉಪಕ್ರಮದ ಅಂತಿಮ ಧ್ಯೇಯವು ಹೆಚ್ಚು ಹೆಚ್ಚು ಹುಟ್ಟಿಸುವದರಲ್ಲಿ ಕೇಂದ್ರಿತವಾಗಿರುವದು. ಈ ಮೇರೆಗೆ ಹಣವನ್ನು ಹೆಚ್ಚಿಸುವ ಪ್ರಯತ್ನದಲ್ಲಿ ಲಾಭವನ್ನು ಪಡೆಯಬೇಕೆಂಬ ಉದ್ದೇಶವಾದರೂ ನೆಲಗೊಂಡಿರುವದು. ಸಾಲವನ್ನು ಕೊಟ್ಟ ಖಾತೇದಾರರು ತಕ್ಕ ಲಾಭವನ್ನು ಪಡೆದ ಮೂಲಕವೇ ಬ್ಯಾಂಕಿನವರು ಕೊಟ್ಟ ಹಣವು ತಿರುಗಿ ಬರುವದು. ಆದ್ದರಿಂದ ಪರಸ್ಪರ ಹಿತಕ್ಕಾಗಿ ಮತ್ತು ಪರಸ್ಪರ ಲಾಭದ ಉದ್ದೇಶದ ಮೂಲಕ ಬ್ಯಾಂಕಿನವರು ತೀರ ದಕ್ಷತೆಯಿಂದ ತಮ್ಮ ಸಾಲಗಾರರನ್ನು ಆರಿಸಬೇಕಾಗುವದು. ಬ್ಯಾಂಕಿಂಗದ ವ್ಯವಹಾರದಲ್ಲಿ ಸಾಲವನ್ನು ಕೊಡುವದೊಂದು ಲಾಭದಾಯಕವಾದ ವಿಷಯವಿದ್ದುದರಿಂದ ಬ್ಯಾಂಕಿನವರು ಸಾಮಾನ್ಯವಾಗಿ ತಮ್ಮೆದುರಿಗೆ ಬಂದ ಪ್ರಕರಣವನ್ನು ತ್ರಿವಿಧವಾಗಿ ವಿಚಾರಿಸುವರು. (೧) ಸಾಲದ ಬಗ್ಗೆ ಕೊಟ್ಟ ತಾರಣವು ಸಾಕಷ್ಟು ಇದ್ದಿದು. (೨) ಸಾಲವನ್ನು ಕೊಟ್ಟ ಹಣದಿಂದ ಖಾತೇದಾರರಿಗೆ ತಕ್ಕ ಲಾಭವು ಅವರ ಉದ್ಯೋಗದಲ್ಲಿ ಸಿಗಬಹುದು. (೩) ಈ ಲಾಭದ ಮೂಲಕ ಸಾಲದ

ರಕವು ತಿರುಗಿ ಬರುವದು. ಇದಕ್ಕೆ ಇಂಗ್ರೇಜಿಯಲ್ಲಿ 'Self liquidating indebtedness' ಎಂದೆನ್ನಬಹುದು. ಈ ದೃಷ್ಟಿಯ ಮೇರೆಗೆ ವಿಚಾರಿಸಿದರೆ, ಕೇವಲ ವರ್ಷಾಶನದ ಮೇಲೆ ಬಾಳುವವನಿಗೆ ಸಾಲವನ್ನು ಕೊಡುವದು ಘಾತುಕವಾದುದು. ಅವನು ತೆಗೆದುಕೊಂಡ ಸಾಲವನ್ನು ತನ್ನ ಜೀವನದಲ್ಲಿ ಸೇರಿಸಿ ಶೀರ ಹೆಚ್ಚಿಗೆ ಖರ್ಚು ಮಾಡುವ ಮೋಹದಲ್ಲಿ ಬೀಳುವನು. ಈ ರೀತಿಯಿಂದ ಬ್ಯಾಂಕಿನ ಸಾಲವು ಆತನ ಆಲಸ್ಯಕ್ಕೆ ಕೈಕೊಟ್ಟರೆ ಅವನ ವರ್ಷಾಶನಕ್ಕೆ ಹೊಂದಿದ ಆಸ್ತಿಯನ್ನು ಮಾರದ ಹೊರತು ಸಾಲ ಕೊಟ್ಟ ಹಣವು ವಸೂಲಾಗುವಂತಿಲ್ಲ. ಈ ಪ್ರಯೋಗವು ಖಾತೇದಾರನಿಗೂ ಮತ್ತು ಬ್ಯಾಂಕಿನವರಿಗೂ ಅಪಾಯಕರವಾಗುವದು.

ಈ ಮಾತು ಸಾಮಾನ್ಯವಿದ್ದು, ಬ್ಯಾಂಕಿನವರು ಮಾಡತಕ್ಕ ಸಾಲದ ವ್ಯವಹಾರದ ಬಗ್ಗೆ ಸವಿಸ್ತರ ನಿರೂಪಣೆಯಾಗದಿದ್ದರೂ, ಬ್ಯಾಂಕಿನ ಸಾಲವು ಯಾವ ಮಾರ್ಗವನ್ನು ಸ್ವೀಕರಿಸಬೇಕೆಂಬುದರ ಬಗ್ಗೆ ಸ್ವಲ್ಪದರಲ್ಲಿ ಹೇಳಿದಂತಾಗಿರುವದು ಇದೇ ಮಾರ್ಗವನ್ನು ಹಿಡಿದ ಬ್ಯಾಂಕುಗಳು ಸುಸ್ಥಿತಿಯಲ್ಲಿದ್ದುದು ಕಂಡುಬಂದು, ಅದನ್ನು ಬಿಟ್ಟು ಅಡವೀ ಪಾಲಾದ ಬ್ಯಾಂಕುಗಳ ಉದಾಹರಣೆಗಳಾದರೂ ಇರುವವು.

ಬ್ಯಾಂಕಿಂಗ ಕಂಪನಿಯು ಠೇವಿನ ಹಣವನ್ನು ಕೇವಲ ತಿಜೂರಿಯಲ್ಲಿಟ್ಟು, ಖಾತೇದಾರರು ಬೇಡಿದ ಸಮಯಕ್ಕೆ ಕೊಡುವಬಗ್ಗೆ ಕಾದಿಟ್ಟರೆ, ಆ ಸಂಸ್ಥೆಯು ಬ್ಯಾಂಕ ಆಗದೆ 'ಸೇಫ್ ಡಿಪಾಜಿಟ್' ಕಂಪನಿಯಾಗುವದು. ಮತ್ತು ಠೇವನ್ನು ಕಾಯುವಗೋಸುಗ ಕಮಿಶನ್ ಮಟ್ಟಿಗೆ ಬಾಧ್ಯಸ್ಥವಾಗುವದು. ಇಟ್ಟುಕೊಂಡ ಹಣದ ಮೇಲೆ ಬ್ಯಾಂಕಿನಂತೆ ಬಡ್ಡಿಯನ್ನು ಕೊಟ್ಟರೆ ಆ ಸಂಸ್ಥೆಯು ಗಳಿಕೆಯಿಲ್ಲದೆ ದಿವಾಳಿಗೆ ಬರುವದು. ಆದ್ದರಿಂದ ಇಟ್ಟುಕೊಂಡ ಹಣವನ್ನು ಸಾಲವನ್ನು ಕೊಡುವವರಲ್ಲಿಯಾಗಲಿ ಬೇರೆ ಯಾವ ಸುರಕ್ಷಿತ ಉದ್ಯಮದಲ್ಲಿಯಾಗಲಿ ತೊಡಕಿಸುವದೇ ಬ್ಯಾಂಕಿನ ನಿಜವಾದ ವ್ಯವಹಾರವಿರುವದು. ಠೇವನ್ನಿಟ್ಟುಕೊಂಡು ಸಾಲವನ್ನು ಕೊಡುವದು ಪರಸ್ಪರ ಸಂಬಂಧಿಸಿದ ಕಾರ್ಯವು.

ತನ್ನ ಹಣವನ್ನಷ್ಟೇ ಸಾಲವಾಗಿ ಕೊಡುವವನು ಸಾವಕಾರನು. ಜನರ

ಹಣವನ್ನು ಸಾಲವಾಗಿ ಕೊಡುವದು ಬ್ಯಾಂಕಿನ ವ್ಯವಹಾರವು. ಸಾವಕಾರನು ತನ್ನ ಹಣವನ್ನಷ್ಟೇ ಉಪಯೋಗಿಸುವವನಾಗಿದ್ದು, ಬ್ಯಾಂಕು ಜನರ ಹಣದ ಮೇಲೆ ಅವಲಂಬಿಸಿರುವದು. ಅವರವರ ಬಂಡವಲದಲ್ಲಿದ್ದ ಭಿನ್ನತ್ವದ ಮೂಲಕ ಅವರವರ ವ್ಯವಹಾರದ ದೃಷ್ಟಿಯಲ್ಲಿಯಾದರೂ ಅದೇ ಮೇರೆಗೆ ಭಿನ್ನತ್ವವು ಕಂಡುಬರುವದು. ಮತ್ತು ಮೇಲಾಗಿ, ತಮ್ಮಲ್ಲಿಯ ಜಾಣತನ, ಶಕ್ತಿಯುಮಟ್ಟಿಗೆ ಈ ಸಾಲಕೊಡುವ ವ್ಯಾಪದಲ್ಲಿ ಸೇರುವರು. ಕೊಟ್ಟ ಸಾಲವು ತಿರುಗಿ ಬರದಿದ್ದರೆ, ಸಾವಕಾರನು ತನ್ನ ಹಣವನ್ನಷ್ಟೇ ಕಳೆದುಕೊಳ್ಳುವನು. ಆದರೆ, ಈ ಪರಿಸ್ಥಿತಿಯು ಬ್ಯಾಂಕಿಗೆ ಗಂಭೀರ ತರವಾದದ್ದು, ಕಾರಣ, ಅದರ ಪರಿಣಾಮವು ಎಲ್ಲ ಠೇವುದಾರರಿಗೆ ಬಡಿದುಕೊಳ್ಳುವದು. ಹೆಚ್ಚಿನ ಬಡ್ಡಿಯ ಆಸೆಗೆ ಒಳಗಾಗಿ ಸಾವಕಾರನು ತನ್ನ ಸಾಲದ ಹಣದ ಕಡೆಗೆ ದುರ್ಲಕ್ಷಿಸಬಹುದು. ಬ್ಯಾಂಕಿನವರು ಇಂಥ ಬಡ್ಡಿಯ ಮೂಲಕ ಇಂಥ ದುರವಸ್ಥೆಯಲ್ಲಿ ಬೀಳಲಾರರು. ಸಾವಕಾರನು ತನ್ನಷ್ಟಕ್ಕೆ ತಾನೇ ಜವಾಬದಾರಿ ಇದ್ದವನಾದ ಕಾರಣ, ಅವನಿಗೆ ಎರಡನೆಯ ಉಪದ್ರವವಿರುವದಿಲ್ಲ. ಬ್ಯಾಂಕಿನವರು ತಮ್ಮ ಠೇವುದಾರರಿಗೆ ಮತ್ತು ಭಾಗೀದಾರರಿಗೆ ಹೊಣೆಗಾರರಿದ್ದುದರಿಂದ ತಮ್ಮ ಹಣದ ವಿನಿಯೋಗವನ್ನು ಅತಿ ದಕ್ಷತೆಯಿಂದ ಮಾಡಬೇಕಾಗುವದು. ಇವೆಲ್ಲ ಕಾರಣಗಳ ಮೂಲಕ, ಬ್ಯಾಂಕಿನ ಅಧಿಕಾರಿಗಳು ಸಾಲವನ್ನು ಕೊಡುವ ಬಗ್ಗೆ ವಿವಿಧ ಸಾಲಗಾರರ ಪರವಾಗಿ ಕೆಳಗೆ ಬರೆದ ನಿಯಮಗಳನ್ನು ಪಾಲಿಸುವರು.

೧. ಖಾತೇದಾರರಿಗೆ ಅವರ ಉದ್ಯಮವನ್ನು ಸಾಗಿಸುವದಕ್ಕೆ ಭಾಂಡವಲವನ್ನು ಪೂರೈಸುವದು ಬ್ಯಾಂಕಿನವರ ಕೆಲಸವಲ್ಲ.

೨. ತಿರುಗಿ ಬರಲಶಕ್ಯವಿದ್ದ ಸಾಲವನ್ನು ಉಪಯೋಗಕ್ಕೆ ಬಾರದ ತಾರಣವನ್ನಿಟ್ಟು ಕೊಡುವದು ಘಾತುಕವಾದದ್ದು.

೩. ಒಬ್ಬನೆ ಖಾತೇದಾರರಿಗೆ ಹೊರಲಾರದಷ್ಟು ಹಣವನ್ನು ಕೊಟ್ಟು, ಕೊಟ್ಟ ಹಣ ತಿರುಗಿ ಬಾರದಂತೆ ಮಾಡಬಾರದು.

ಅದೇ ಪ್ರಕಾರ, ಸಾಲವನ್ನು ಬೇಡತಕ್ಕ ಖಾತೇದಾರರ ವಿಷಯಕ್ಕೆ ಅವರು ಸಮಾಜದಲ್ಲಿ ಸಂಪಾದಿಸಿದ ಕೀರ್ತಿಯ ಬಗ್ಗೆ, ಅವರ ವ್ಯವಹಾರದ

ಬಗ್ಗೆ, ತೆಗೆದುಕೊಂಡ ಹಣವು ತಿರುಗಿ ಬರುವ ಶಕ್ಯಾಶಕ್ಯತೆಯ ಬಗ್ಗೆ ಮತ್ತು ಅವರು ಉದ್ಯೋಗದಲ್ಲಿ ಹಾಕಿದ ಭಾಂಡವಲದ ಬಗ್ಗೆ ವಿಚಾರ ಮಾಡಲಾಗುವದು. ಇದರಗೂಡ, ಖಾತೇದಾರರು ಸಾಲವನ್ನು ತೆಗೆದುಕೊಳ್ಳಲು ಬಾಧ್ಯಸ್ಥರಿದ್ದ ಬಗ್ಗೆಯಾದರೂ ನಿಶ್ಚಿತ ಮಾಡಲಾಗುವದು. ಕಾರಣ ಅವರು ತಮ್ಮಗೋಸುಗ ಹಣವನ್ನು ಬೇಡಿರಬಹುದು, ಇಲ್ಲವೆ ಎರಡನೆಯವರ ಪ್ರತಿನಿಧಿಯಾಗಿ ಬೇಡಿರಬಹುದು. ಉದಾಹರಣೆ, ಅಜ್ಞಾನಿಯಗೋಸುಗ ಪಡೆದ ಸಾಲವನ್ನು, ಹುಡುಗನು ವಯಃಕ್ಕೆ ಬಂದನಂತರ ನಿರಾಕರಿಸಬಹುದು. ಕಂಪನಿಯಗೋಸುಗ ಕೊಟ್ಟ ಸಾಲವನ್ನು ಅವರ ಘಟನೆಯಲ್ಲಿ ಈ ತರದಿಂದ ಹಣವನ್ನು ದೊರಕಿಸುವ ಬಗ್ಗೆ ಸೂಚಿಸಿಲ್ಲೆಂದು ಕಂಡುಬಂದರೆ ಅಧಿಕಾರಿಗಳು ಸಾಲವನ್ನು ವಿಚಾರಮಾಡದೆ ಕೊಟ್ಟರೆಂಬೆನ್ನಬಹುದು.

ಈ ವಿಷಯವು ಮಹತ್ವವಾದುದರಿಂದ ಅದನ್ನು ಭಿನ್ನ ಭಿನ್ನ ತರಗತಿಯ ಖಾತೇದಾರರಿಗೆ ಹೊಂದಿಸಿ ವಿಚಾರಿಸುವಾ.

೧. ಅಜ್ಞಾನ ಮಕ್ಕಳ ಸಲುವಾಗಿ ಪಡೆಯತಕ್ಕ ಸಾಲವನ್ನು ಬ್ಯಾಂಕಿನವರು ಕೊಡಲೊಪ್ಪುವದಿಲ್ಲ. ಕಾರಣ, ಈ ತರದ ಕರಾರಿಗೆ ಅಜ್ಞಾನ ಮಕ್ಕಳ ಆಸ್ತಿಯು ಬಂಧನಕಾರಕವಾಗುವದಿಲ್ಲ. ಮತ್ತು ಪಡೆದ ಸಾಲವು ತಮ್ಮ ಹಿತಕ್ಕಾಗಿ ಪಡೆದಿಲ್ಲೆಂದಾಗಲಿ, ಅದು ಅನಾವಶ್ಯಕವಿತ್ತೆಂದಾಗಲಿ, ಅವರು ಸಜ್ಞಾನದ ನಂತರ ಅನ್ನಬಹುದು. ಆದ್ದರಿಂದ, ಬ್ಯಾಂಕಿನವರು ಸಾಲವನ್ನು ಬೇಡುವವರು ಕೋರ್ಟಿನ ಅಪ್ಪಣೆಯನ್ನು ಪಡೆದರೆ ಹಣ ಕೊಡಬಹುದೆಂದು ಅನ್ನುವರು.

೨. ಲಿಮಿಟೆಡ್ ಕಂಪನಿಯ ಘಟನೆಯಲ್ಲಿ ಕಂಪನಿಯ ಸಲುವಾಗಿ ಸಾಲವನ್ನು ತೆಗೆಯುವ ಬಗ್ಗೆ ಬರೆದಿಟ್ಟಿರುವದು. ಹೀಗಿಲ್ಲದಿದ್ದರೆ, ಕಂಪನಿಯ ಅಧಿಕಾರಿಗಳು ಕಂಪನಿಯ ಹೆಸರಿನಲ್ಲಿ ಸಾಲವನ್ನು ತೆಗೆಯಲಾರರು. ಆ ಪ್ರಕಾರ ಘಟನೆಯಲ್ಲಿ ದುರಸ್ತಿಯನ್ನು ಮಾಡಿದ ನಂತರ ಸಾಲದ ವಿಚಾರವನ್ನು ಮಾಡಲಾಗುವದು. ಅಧಿಕಾರಿಗಳು ಸಾಲವನ್ನು ತೆಗೆಯಬಹುದೆಂದು ಬರೆದಿಟ್ಟಿದ್ದರೂ

ಸಹಿತ ಯಾವ ಅಧಿಕಾರಿಯು ತೆಗೆಯಬಹುದು. ಮತ್ತು ಅದರ ಪೂರ್ವದಲ್ಲಿ ಡಾಯರೆಕ್ಟರರ ಸಮ್ಮತಿ ಬೇಕಾಗುವದೆಂಬದರ ವಿಷಯಕ್ಕೆ ಬ್ಯಾಂಕಿನವರಿಗೆ ನಿಶ್ಚಿತವಾಗಿ ತಿಳಿಸಬೇಕಾಗುವದು.

೩. ಸಾಮಾನ್ಯವಾಗಿ, ಒಬ್ಬ ಪಾಲುಗಾರನು ಭಾಗೀದಾರಿಯಲ್ಲಿದ್ದ ಇತರರಿಗೋಸುಗ ಪಾಲಿನಲ್ಲಿದ್ದ ಉದ್ಯೋಗದ ಸಲುವಾಗಿ ಸಾಲವನ್ನು ಪಡೆಯಬಲ್ಲನು. ಆದರೆ ಅವರವರಲ್ಲಿಯ ಕರಾರದ ಪ್ರಕಾರ ಹೀಗೆ ಒಂದು ಸಲ ಮಾಡಲಾರನು. ಸಾಲವನ್ನು ದೊರಕಿಸುವದಕ್ಕೆ ಪಾಲುಗಾರರ ಅಧಿಕಾರಗಳು ಮರ್ಯಾದಿತವಾಗಿರುವ ಸಂಭವವಿರುವದು. ಪಾಲುಗಾರರು ಬರೆದಿಟ್ಟ ಕರಾರ ಪತ್ರವನ್ನು ಬ್ಯಾಂಕಿನವರಿಗೆ ತೋರಿಸಿದ ನಂತರ ಸಾಲವನ್ನು ದೊರಕಿಸಬೇಕು. ಒಂದು ಸಮಯದಲ್ಲಿ ಕೆಲವು ಪಾಲುಗಾರರು ಪಾಲಿನ ಉದ್ಯೋಗಕ್ಕಾಗಿ ದೊರಕಿಸಿದ ಸಾಲದ ವಿಷಯಕ್ಕೆ ತಾವು ಇಂತಿಷ್ಟರ ಮಟ್ಟಿಗೆಯೇ ಹೊಣೆಗಾರರಿದ್ದ ಬಗ್ಗೆ ಬರೆದಿಡುವ ಸಂಭವವಿರುವದು. ಅದನ್ನೆಲ್ಲ ಪೂರ್ಣವಾಗಿ ವಿಚಾರಿಸಿದ ನಂತರ ತಮ್ಮ ಸಾಲದ ಹಣವು, ಸುರಕ್ಷಿತವಾಗಿ ತಿರುಗಿ ಬರುವದೆಂಬುದರ ನಿಶ್ಚಯ ಮಾಡಿಕೊಂಡು ಬ್ಯಾಂಕಿನವರು ಸಾಲವನ್ನು ಕೊಡಲೊಪ್ಪುವರು. ಈ ಪ್ರಕಾರದ ಬರೆದಿಟ್ಟ ಕರಾರವೇನೂ ಇಲ್ಲದಿದ್ದರೆ, ಒಬ್ಬ ಪಾಲುಗಾರನು ತಮ್ಮೆಲ್ಲರ ವ್ಯವಸಾಯದ ಸಲುವಾಗಿ ದೊರಕಿಸಿದ ಸಾಲದ ಹಣವನ್ನು ತಿರುಗಿ ಕೊಡುವ ಬಗ್ಗೆ ಎಲ್ಲ ಪಾಲುಗಾರರೂ ಒಪ್ಪಿದಂತಾಗುವದು. ಈ ವ್ಯವಹಾರಕ್ಕೆ ನಿಶ್ಚಿತವಾದ ಸ್ವರೂಪವನ್ನು ಕೊಡುವ ಸಲುವಾಗಿ ಪಾಲಿನಲ್ಲಿದ್ದ ಉದ್ಯೋಗವು ಬೆಳೆಯಬೇಕೆಂಬ ಉದ್ದೇಶದ ಮೂಲಕ ತಮ್ಮಲ್ಲಿಯ ಇಂಥವರೊಬ್ಬರು ಉಳಿದವರಿಗೋಸುಗ ಬ್ಯಾಂಕಿನಿಂದ ಸಾಲವನ್ನು ದೊರಕಿಸಬಹುದೆಂದು ಬ್ಯಾಂಕಿಗೆ ಉದ್ದೇಶಿಸಿ ಪತ್ರವನ್ನು ಬರೆದರೆ ಯಾವ ತೊಂದರೆಯೂ ಆಗುವದಿಲ್ಲ. ಈ ವಿಷಯಕ್ಕನುಸರಿಸಿ ಕೋರ್ಟಿನವರು ಕೊಟ್ಟ ಒಂದು ನಿರ್ಣಯವು ಉಪಯುಕ್ತವಾದದ್ದಿರುವದು. 'ಅ' ಮತ್ತು 'ಬ'

ಎಂಬ ಎರಡು ಭಾಗೀದಾರಿ ಕಂಪನಿಗಳಿದ್ದವು. ಎರಡೂ ಕಂಪನಿಗಳಲ್ಲಿ ಅನೇಕ ಭಾಗೀದಾರರಿದ್ದರು. ಎರಡೂ ಕಂಪನಿಗಳು ಕೂಡಿಕೊಂಡು 'ಕ' ಅಂತ ಹೆಸರಿನ ಮೂರನೆಯ ಕಂಪನಿಯನ್ನು ಸ್ಥಾಪಿಸಿದರು. 'ಕ' ಕಂಪನಿಯವರು ಬ್ಯಾಂಕಿನಿಂದ ಸಾಲವನ್ನು ತೆಗೆದರು. ಸಾಲದ ವಿಷಯದಲ್ಲಿ ಸಹಿಮಾಡಬೇಕಾದಾಗ ದಸ್ತಐವಜದ ಮೇಲೆ 'ಮ' ನು 'ಅ' ಕಂಪನಿಯ ವತಿಯಿಂದ 'ನ' ನು 'ಬ' ಕಂಪನಿಯ ವತಿಯಿಂದ ಸಹಿಮಾಡಿದರು. ಮತ್ತು 'ಅ' 'ಬ' ಕಂಪನಿಗಳಲ್ಲಿಯ ಪಾಲಗಾರರೆಲ್ಲ 'ಕ' ಕಂಪನಿಯಲ್ಲಿಯಾದರೂ ಪಾಲುಗಾರರಿದ್ದ ಬಗ್ಗೆ ಬರೆದು ತಿಳಿಸಿದರು. ಕೋರ್ಟಿನವರು ಕೊಟ್ಟ ನಿರ್ಣಯವೇನಂದರೆ ಭಾಗೀದಾರಿ ವ್ಯವಸಾಯವನ್ನು ಹೂಡುವುದು ಭಾಗೀದಾರೀ ಕಂಪನಿಗಳ ಸಾಮಾನ್ಯ ಕೆಲಸವಲ್ಲೆಂದು ಹೇಳಿ 'ಮ' ಮತ್ತು 'ನ' ಇವರು ಸಹಿಮಾಡಿದ ಬಗ್ಗೆ ಉಳಿದ ಸಾಲಗಾರರು ಹೊಣೆಗಾರರಿರುವದಿಲ್ಲ.

೪. ಅಧಿಕಾರಪತ್ರವನ್ನು ಪಡೆದ ಪ್ರತಿನಿಧಿಯು ಸಾಲವನ್ನು ಪಡೆಯಬೇಕಾದರೆ ಮೊದಲು ಅಧಿಕಾರಪತ್ರದಲ್ಲಿ ಸಾಲವನ್ನು ಪಡೆಯತಕ್ಕ ಅಧಿಕಾರವು ಸ್ಪಷ್ಟವಾಗಿ ಬರೆಯಿಸಿಕೊಳ್ಳಬೇಕು. ಒಬ್ಬನೇ ಪ್ರತಿನಿಧಿಯು ಹಣ ತೆಗೆಯಬಹುದೋ ಇಲ್ಲವೆ ಇನ್ನೊಬ್ಬರ ಸಮ್ಮತಿ ಇಲ್ಲದೆ ಮಾಡಲಾರರೆಂದು ಬರೆಯಿಸಬೇಕೋ ಎಂಬ ಮಾತನ್ನು ಪೂರ್ವದಲ್ಲಿಯೇ ನಿಶ್ಚಿತಮಾಡಬೇಕು. ಅಧಿಕಾರವನ್ನು ಕೊಡುವವರು ಒಂದು ಸಲ ತಮ್ಮ ಪ್ರತಿನಿಧಿಯ ಅಧಿಕಾರವನ್ನು ಸಾಲವನ್ನು ಪಡೆಯುವ ಬಗ್ಗೆಯಾಗಲಿ, ಇಲ್ಲವೆ ಕೆಲವು ಕರಾರದ ಮೇರೆಗೆ ಸಾಲವನ್ನು ದೊರಕಿಸುವದಕ್ಕಾಗಲಿ, ಇಲ್ಲವೆ ವಿಶಿಷ್ಟ ಪ್ರಕಾರದ ತಾರಣದ ಮೇಲೆಯೇ ಸಾಲವನ್ನು ದೊರಕಿಸಬಹುದೆಂದಾಗಲಿ ನಿಶ್ಚಿತಗೊಳಿಸುವರು. ಬ್ಯಾಂಕಿನವರು ಇವೆಲ್ಲ ವಿಷಯಗಳನ್ನು ದಕ್ಷತೆಯಿಂದ ನೋಡುವರಾದ್ದರಿಂದ

ಪ್ರತಿನಿಧಿಗಳು ತಮ್ಮ ಅಧಿಕಾರದ ಮರ್ಯಾದೆಯನ್ನು ಗೊತ್ತು ಮಾಡಿಕೊಳ್ಳಬೇಕು.

೫. ಮುನಿಸಿಪಾಲಿಟಿ, ಲೋಕಲ್‌ಬೋರ್ಡು ಇಂಥ ಸ್ಥಾನಿಕ ಸಂಸ್ಥೆಗಳು ಬ್ಯಾಂಕುಗಳಿಂದ ಸಾಲವನ್ನು ಪಡೆಯಬೇಕಾದರೆ ಬ್ಯಾಂಕಿನವರು ಮೊದಲು ಸಂಸ್ಥೆಗಳ ಕಾರಭಾರಾಂತರ್ಗತ ಕಾಯದೆಯನ್ನು ಪರೀಕ್ಷಿಸುವರು. ಆ ಕಾಯದೆಯಲ್ಲಿ ಬರೆದಿಟ್ಟಂತೆಯೇ ಅಧಿಕಾರಿಗಳಿಗೆ ಹಣ ದೊರಕುವದು.

೬. ಕ್ಲಬ್, ಶಾಲೆಗಳಂಥ ರಜಿಸ್ಟರಾದ ಸಂಸ್ಥೆಗಳ ಕಾರಭಾರವು ಅವುಗಳ ಘಟನೆಯ ಮೇಲೆ ಅವಲಂಬಿಸಿರುವದು. ಬ್ಯಾಂಕಿನವರು ಈ ಘಟನೆಯನ್ನು ಪರೀಕ್ಷಿಸುವರು, ಅದರಲ್ಲಿ ಬ್ಯಾಂಕುಗಳಿಂದ ಹಣವನ್ನು ದೊರಕಿಸುವದರ ಬಗ್ಗೆ ಇರುವ ಕಲಮುಗಳನ್ನು ಚನ್ನಾಗಿ ಓದಿ ಸಾಲವನ್ನು ಪಡೆಯುವಗೋಸುಗ ಬರೆದಿಟ್ಟಿದ್ದ ವಿಷಯದ ಬಗ್ಗೆ ಚನ್ನಾಗಿ ಗೊತ್ತುಮಾಡಿಕೊಳ್ಳುವರು ಕಾರಣವೇನಂದರೆ, ಕೆಲವು ಘಟನೆಗಳಲ್ಲಿ ಸಾಲವನ್ನು ತೆಗೆಯುವ ಬಗ್ಗೆ ಅದರಲ್ಲಿ ಉಲ್ಲೇಖವಿರುವದಿಲ್ಲ. ಇಲ್ಲವೆ ಉಲ್ಲೇಖ ಇದ್ದರೂ ಅದರ ಶಬ್ದರಚನೆಯು ಅಸ್ಪಷ್ಟವಾದದ್ದಿರುವ ಸಂಭವವಿರುವದು. ಹೀಗಿದ್ದ ಪರಿಸ್ಥಿತಿಯಲ್ಲಿ, ಅಧಿಕಾರಿಗಳು ಬ್ಯಾಂಕಿನವರ ಸೂಚನೆಯ ಪ್ರಕಾರ ಘಟನೆಯ ಕಲಮುಗಳನ್ನು ತಿದ್ದಿಕೊಳ್ಳಬೇಕು.

೭. ಅವಿಭಕ್ತ ಹಿಂದು ಕುಟುಂಬದಲ್ಲಿಯ ಹಿರಿಯ ಮಗನು ಕರ್ತಾ ಪುರುಷನಿದ್ದು ಆತನಿಗೆ ಕುಟುಂಬದ ಹಿತಕ್ಕಾಗಿ ಸಾಲವನ್ನು ದೊರಕಿಸುವ ಬಗ್ಗೆ ಅಧಿಕಾರವಿರುವದು. ಅವನಿಗೆ ಸಾಲವನ್ನು ಕೊಡಲೊಪ್ಪುವ ಪೂರ್ವದಲ್ಲಿ ಬ್ಯಾಂಕಿನವರು ಕುಟುಂಬದಲ್ಲಿಯ ಇತರ ಎಲ್ಲ ಪುರುಷರು ಸಹಿಮಾಡಿದ ಅರ್ಜಿಯನ್ನು ಬೇಡುವರು. ಅದರಲ್ಲಿ ಸಾಲವನ್ನು ತೆಗೆಯುವ ಕಾರಣವನ್ನು ಸ್ಪಷ್ಟವಾಗಿ ಬರೆಯಬೇಕು. ಏಕೆಂದರೆ ಸಾಲದ ವಸೂಲಿಯ

ಕಾಲಕ್ಕೆ ವಿಲಕ್ಷಣ ತೊಂದರೆಯು ಉದ್ಭವಿಸುವದು. ಒಂದು ವೇಳೆ. ಕುಟುಂಬದಲ್ಲಿಯ ಇತರ ಜನರು ಸಾಲದ ಹಣ ಕುಟುಂಬಕ್ಕೆ ಉಪಯೋಗಿಸಲಿಲ್ಲೆಂದು ಅನ್ನಬಹುದು. ಕರ್ತಾಪುರುಷನಿಗೆ ಹಣ ಪರತು ಮಾಡಲಸಾಧ್ಯವಾದಷ್ಟು ಕಂಡುಬಂದರೆ ಅವನಾದರೂ ಇತರರಂತೆಯೇ ಗೊಂದಲವನ್ನುಂಟುಮಾಡಬಹುದು. ಇಷ್ಟಾದರೂ, ಅಜ್ಞಾನ ಮಕ್ಕಳು ಇನ್ನೊಂದೇನಾದರೂ ಅನ್ನಬಹುದು. ಈ ಪರಿಸ್ಥಿತಿಯು ಬರಬಾರದೆಂದು ಮೇಲೆ ಹೇಳಿದ ಮೇರೆಗೆ ಎಲ್ಲ ಜನರು ಕೂಡಿ ಸಾಲದ ಸಲುವಾಗಿ ಅರ್ಜಿಯನ್ನು ಮಾಡಬೇಕು.

## ವಿಶ್ವಸನೀಯ ಸಾಲವೆಂದರೇನು ?

ಯಾವ ಸಾಲವು ಕರಾರದ ಮೇರೆಗೆ ತಿರುಗಿ ಕೊಡಲಾಗುವದೋ ಅದು ಯೋಗ್ಯ ಸಾಲವು. ಸಾಮಾನ್ಯವಾಗಿ ಸಾಲವನ್ನು ಬೇಡುವವನು ತೀರ ಆಶಾವಾದಿಯಿರುವನು. ಹಣ ದೊರಕಿಸುವ ಕಾಲಕ್ಕೆ ಆತನು ನಿಶ್ಚಯಿಸಿದ ಕಲ್ಪನೆಗಳು ಹಣ ಸಿಕ್ಕಕೂಡಲೆ ಬದಲಾಗುವವು. ಬ್ಯಾಂಕಿನವರು ಸೂಚಿಸಿದ ಎಲ್ಲ ಕರಾರುಗಳಿಗೆ ಮೊದಲು ಒಪ್ಪಿಕೊಂಡು, ನಂತರ ಆ ಕರಾರುಗಳ ಮೇರೆಗೆ ನಡೆಯಲಾರನು. ಆದ್ದರಿಂದ, ಬ್ಯಾಂಕಿನವರು ಆತನು ಎಷ್ಟರ ಮಟ್ಟಿಗೆ ತನ್ನ ಶಬ್ದವನ್ನು ಪಾಲಿಸಬಲ್ಲನೆಂಬುದರ ಬಗ್ಗೆ ನಿಶ್ಚಯಿಸುವರು. ಇದನ್ನು ನಿಶ್ಚಯಿಸುವ ಕಾಲಕ್ಕೆ ಆ ಮನುಷ್ಯನು ಯಾವ ಪ್ರಕಾರದ ವ್ಯವಸಾಯದಲ್ಲಿರುವನು, ಆತನ ಉತ್ಪನ್ನವೆಷ್ಟು, ಆತನಿಗೆ ಇತರ ಏನಾದರೂ ಸಾಧನಗಳಿರುವವೋ ಎಂಬುದರ ಬಗ್ಗೆ ಬ್ಯಾಂಕಿನ ಅಧಿಕಾರಿಗಳು ವಿಚಾರಿಸುವರು. ಈ ಮೇರೆಗೆ ಸಾಲಗಾರನ ಸಾಧನದ ಬಗ್ಗೆ ವಿಚಾರಿಸಿ, ಆತನ ಸಾಲದ ರಕಮನ್ನು ಸಂತೋಷದಿಂದ ಕರಾರದ ಮೇರೆಗೆ ಕೊಡುವವರ ಬಗ್ಗೆಯಾದರೂ ಗೊತ್ತುಮಾಡಿಕೊಳ್ಳುವರು. ಈ ವಿಷಯವು ಆ ಮನುಷ್ಯನ ಚಾರಿತ್ರ್ಯದ ಮೇಲೆ ಮತ್ತು ಪ್ರಾಮಾಣಿಕತನದ ಮೇಲೆ ಅವಲಂಬಿಸಿರುವದು. ಇದನ್ನು ಚನ್ನಾಗಿ ಗೊತ್ತುಮಾಡಿಕೊಳ್ಳುವವಕ್ಕೆ ಬ್ಯಾಂಕಿನವರು ಅನೇಕ ಮಾರ್ಗದಿಂದ ಪರೀಕ್ಷಿಸುವರು.

## ಸಾಲದ ಮುಖ್ಯ ಕರಾರುಗಳು

ಎಲ್ಲ ತರದ ಸಾಲವು ತಾರಣದ ಮೇಲೆ ಅವಲಂಬಿಸಿರುವದು. ತಾರಣವು ಬಳಕೆಗೆ ಬರುವಂಥದಿರಬೇಕು. ತಕ್ಕ ಸಮಯಕ್ಕೆ ಹಣ ತಿರುಗಿಬರಲಿಲ್ಲವೆಂದರೆ ಇಲ್ಲವೆ ತಿರುಗಿ ಬರಲು ಅಸಾಧ್ಯವಾದದ್ದೆಂದು ಕಂಡರೆ ಬ್ಯಾಂಕಿನವರು ತಾರಣದ ವಸ್ತುಗಳನ್ನು ಮಾರಬಲ್ಲರು. ಆದ್ದರಿಂದ ತಾರಣದ ವಸ್ತುಗಳು ತಾತ್ಕಾಲಿಕ ಮಾರಬಲ್ಲ ಸ್ವರೂಪದ್ದಿರುವದು ಅವಶ್ಯವಾದದ್ದು. ತಾವು ಕೊಡಬೇಕಾದ ಸಾಲದ ಬಗ್ಗೆ ಕರಾರುಗಳನ್ನು ಮತ್ತು ಹೊಂದುವ ತಾರಣವನ್ನು ಬ್ಯಾಂಕಿನವರೇ ಗೊತ್ತುಮಾಡಬೇಕಾದ ವಿಷಯವಿರುವದು. ವ್ಯಾಪಾರೀ ಬ್ಯಾಂಕಿನವರು ಕೇವಲ ಚಾಲತಿ ಮತ್ತು ಸ್ವಲ್ಪ ಮುದ್ದತಿ ಠೇವಿನ ಮೇಲೆ ಅವಲಂಬಿಸಿರುವದರಿಂದ ಅನೇಕ ವರ್ಷಗಳ ವರೆಗೆ ವಸೂಲಿ ಮಾಡಬೇಕಾಗುವ ಸಾಲಗಳನ್ನು ಕೊಡಲೊಪ್ಪುವದಿಲ್ಲ. ಉದಾಹರಣ : ತ್ವರಿತ ವಸೂಲಾಗತಕ್ಕ ಸಾಲವು ಕೂಡಲೆ ಮಾರಬಲ್ಲ ತಾರಣಕ್ಕೆ ಹೊಂದಿರುವದು ಸ್ವಾಭಾವಿಕವಾದದ್ದು. ಆದರೆ ಒತ್ತೀ ರೂಪವಿದ್ದ ಸಾಲವು ಅನೇಕ ವರ್ಷಗಳ ವರೆಗೆ ಸಾಗುವದಿದ್ದದರಿಂದ ವಸೂಲಿಯಾದರೂ ಸುಸೂತ್ರವಾಗಲಾರದು.

## ಬ್ಯಾಂಕುಗಳು ಹಿಡಿಯಬಲ್ಲ ತಾರಣಗಳ ಸ್ವರೂಪವು

ಬ್ಯಾಂಕಿನವರು ಸ್ವೀಕರಿಸುವ ಭಿನ್ನ ಭಿನ್ನ ತಾರಣಗಳು ಅನೇಕ ಪ್ರಕಾರದ್ದಿರುವವು. ವಿಶೇಷವಾಗಿ, ತಾರಣದ ಸ್ವರೂಪವು ಬ್ಯಾಂಕಿನ ಕಚೇರಿ ಇದ್ದ ಸ್ಥಳಕ್ಕೂ ಸಂಬಂಧಿಸಿರುವದು. ಉದಾಹರಣ, ಮುಂಬಯಿ ಪಟ್ಟಣ ಹೆಸರಾದ ಬಂದರವಿದ್ದು, ಅಲ್ಲಿಂದ ನಮ್ಮ ದೇಶದ ಪರರಾಷ್ಟ್ರದ ವ್ಯಾಪಾರವು ಸಾಗುವದು. ಆದ್ದರಿಂದ ಇಂಥ ವ್ಯಾಪಾರಕ್ಕೊಳಗಾದ ಸರಕುಗಳನ್ನು ಹಡಗಗಳಲ್ಲಿ ಹೇರಿಸಿದ ಬಗ್ಗೆ ಅನೇಕ ವ್ಯಾಪಾರಿಗರು ಪರದೇಶದಲ್ಲಿಯ ವ್ಯಾಪಾರಿಯ ಮೇಲೆ ಬರೆದ ಬಿಲ್ಲುಗಳನ್ನು ಬ್ಯಾಂಕಿನವರಿಗೆ ವಸೂಲಿಯಗೋಸುಗ ಸ್ವಾಧೀನ ಮಾಡಿ ಅವುಗಳನ್ನು ತಾರಣವನ್ನಾಗಿ ಕೊಟ್ಟು ಸಾಲವನ್ನು ದೊರಕಿಸುವರು. ಅವುಗಳಿಗೆ ಹೊಂದಿ ಹಡಗುಗಳ ಅಧಿಕಾರಿಗಳು ಮಾಲು

ಹೇರಿದ್ದ ಬಗ್ಗೆ ಮತ್ತು ಅದರ ವಿಮೆ ಇಳಿಸಿದ್ದರ ಬಗ್ಗೆ ಕಾಗದಗಳನ್ನು ತೋರಿಸುವರು. ಇಂಥ ಪಟ್ಟಣಗಳಲ್ಲಿ ಅನೇಕ ಧನಾಢ್ಯ ಗೃಹಸ್ಥರು ವಾಸ ಮಾಡುತ್ತಿರುವರು. ಅವರು ತಮ್ಮ ಶಿಲ್ಕಿನ ಹಣವನ್ನು ಸರಕಾರದ ವಿಶ್ವಾಸ ಪತ್ರಗಳಲ್ಲಿಯಾಗಲಿ, ಕಂಪನಿ ಶೇಅರುಗಳಲ್ಲಿಯಾಗಲಿ ಹಾಕಿರುವರು. ಈ ಕಾಗದಗಳನ್ನಾದರೂ ತಾರಣರೂಪದಿಂದ ಬ್ಯಾಂಕಿನವರು ಸ್ವೀಕರಿಸುವರು. ಬಂದರಗಳನ್ನು ಬಿಟ್ಟು ಇತರ ಪಟ್ಟಣವಾಸಿಯರು ತಮ್ಮ ಹೆಚ್ಚಿನ ಹಣವನ್ನು ಸರಕಾರದ ವಿಶ್ವಾಸಪತ್ರಗಳಲ್ಲಿ, ಕಂಪನಿ ಶೇಅರುಗಳಲ್ಲಿ ಹಾಕಿರುವರು. ಈ ತರದ ನಗರವಾಸಿಯರ ಕಡೆಯಿಂದ ಬ್ಯಾಂಕುಗಳಲ್ಲಿ ಈ ಪ್ರಕಾರದ ಕಾಗದ ಗಳನ್ನೂ ಮನೆಗಳ ಒತ್ತಿಯ ದಸ್ತಐವಜ ಕಾಗದಗಳನ್ನೂ ಸ್ವೀಕರಿಸುವರು. ಗಿರಣಿಗಳಿದ್ದ ಪಟ್ಟಣಗಳಲ್ಲಿ ಗಿರಣಿ ಕಂಪನಿಗಳು ತಮ್ಮ ಆಸ್ತಿಯ ಮೇಲೆ ಯಾಗಲಿ ಇಲ್ಲವೆ ಅವರ ಹತ್ತರಿದ್ದ ಕಚ್ಚಾಮಾಲಿನ ತಾರಣದ ಮೇಲಾಗಲಿ ಬ್ಯಾಂಕಿನಿಂದ ಸಾಲವನ್ನು ದೊರಕಿಸಬಹುದು. ಇತರ ಮಿಕ್ಕ ಸ್ಥಳಗಳಲ್ಲಿ ಧಾನ್ಯ ತಾರಣದ ಮೇಲೆ ಸಾಲವನ್ನು ತೆಗೆಯಬಹುದು. ಈ ಮೇರೆಗೆ ಬ್ಯಾಂಕಿ ನವರು ತಮ್ಮ ಹಣವನ್ನು ವಿವಿಧ ಸ್ವರೂಪದ ತಾರಣವನ್ನು ಸ್ವೀಕರಿಸಿ ಸಾಲ ವನ್ನಾಗಿ ಕೊಡಬಹುದು. ದೇಶದಲ್ಲಿಯ ಬೇರೆ ಬೇರೆ ಭಾಗಗಳಲ್ಲಿ ಪಸರಿಸಿದ ಕಚೇರಿಗಳಿದ್ದ ಬ್ಯಾಂಕಿನವರು ಒಂದು ಭಾಗದಿಂದ ಕಡಿಮೆ ದರದಿಂದ ದೊರಕಿ ಸಿದ ಠೇವಿನ ರಕಮನ್ನು ಇನ್ನೊಂದು ಭಾಗದಲ್ಲಿ ಸಾಲವನ್ನು ಕೊಡಬಲ್ಲರು. ಮತ್ತು ಈ ಪ್ರಕಾರದ ಅನೇಕ ತರದ ತಾರಣವು ಬ್ಯಾಂಕಿನವರ ಕೈಯಲ್ಲಿ ಇದ್ದದ್ದು ಅವರಿಗೆ ಸಮಾಧಾನಕಾರಕವಾದದ್ದು. ಕಾರಣ, ಒಂದೇ ವಿಶಿಷ್ಟ ತಾರಣದ ಮೇಲೆ ದೊಡ್ಡ ರಕಮು ಕೊಡುವದಕ್ಕಿಂತ ಸಣ್ಣ ರಕಮುಗಳನ್ನು ಬೇರೆ ಬೇರೆ ಜಾತಿಯ ತಾರಣಕ್ಕೆ ಹೊಂದಿಸಿದರೆ ಹಣವನ್ನು ಸುರಕ್ಷಿತವಾಗಿ ಹೊಂದಿಸಿದ್ದಾಗುವದು.

ಇನ್ನು ಈ ತಾರಣಗಳ ವಿಷಯಕ್ಕೆ ವಿಸ್ತಾರವಾಗಿ ವಿಚಾರಿಸುವಾ. ಬ್ಯಾಂಕುಗಳಲ್ಲಿಯ ರಕಮು ಕೆಳಗೆ ವಿವರಿಸಿದ ತಾರಣದ ಮುಖಾಂತರವಾಗಿ ಕೊಡಲಾಗುವದು :—

(೧) ಅಂತರ್ಗತ ವ್ಯಾಪಾರದಲ್ಲಿ ಹುಂಡಿಯ ವ್ಯವಹಾರವು; (೨) ಬಳಿಕೆಯ (ಚಾಲತಿ) ಖಾತೆಯಲ್ಲಿ ಮತ್ತು 'ಕ್ಯಾಶ್ ಕ್ರೆಡಿಟ್' ಖಾತೆಯ

ಪರವಾಗಿ; (೩) ಸಾಲದ ರೂಪದಲ್ಲಿ; (೪) ಸರಕಾರದ ಮತ್ತು ಸ್ಥಾನಿಕ ಸಂಸ್ಥೆಗಳ ವಿಶ್ವಾಸಪತ್ರಗಳ ಮೇಲೆ; (೫) ಶೇಅರ ಪೇಟೆಯ ವ್ಯವಹಾರ ದಲ್ಲಿರುವ ಕಂಪನಿ ಶೇಅರುಗಳ ಮೇಲೆ; (೬) ಆಯುರ್ವಿಮಾ ಪಾಲಿಸಿಗಳ ಮೇಲೆ; (೭) ಬಂಗಾರದ ಆಭರಣಗಳ ಮೇಲೆ; (೮) ಮನೆಗಳಂಥ ಆಸ್ತಿಯ ಒತ್ತಿಯ ಮೇಲೆ; (೯) ಜೀವನಾವಶ್ಯಕ ವಸ್ತುಗಳ ಒತ್ತಿಯ ಮೇಲೆ.

೧. **ಹುಂಡಿಯ ವ್ಯವಹಾರ:**—ಚೆಕ್ಕಿನಂತೆ, ಹುಂಡಿಯಾದರೂ ಹಣ ಕೊಡುವ ಬಗ್ಗೆ ಎರಡನೆಯವನಿಗೆ ಉದ್ದೇಶಿಸಿ, ಬರೆದ ಕಾಗದ. ಹುಂಡಿಯ ಕಾಗದವನ್ನು ತೋರಿಸಿದ ಕೂಡಲೇ ಇಲ್ಲವೆ ಅದರಲ್ಲಿ ಬರೆದ ತಾರೀಖಿನ ದಿವಸ ಉಲ್ಲೇಖ ಮಾಡಿದವನಿಗೆ ಬರೆದವನು ಕೊಟ್ಟ ಆಜ್ಞಾ ಪತ್ರವು. ಒಂದು ಹುಂಡಿಪತ್ರಕ್ಕೆ ಮೂರು ಜನರು ಸಂಬಂಧಿಸಿರುವರು. (ಅ) ಹುಂಡಿಯನ್ನು ಬರೆದವರು; (ಬ) ಹುಂಡಿಯಲ್ಲಿ ಬರೆದ ಹಣ ಪಡೆಯು ತಕ್ಕವರು; (ಕ) ಹಣವನ್ನು ಕೊಡತಕ್ಕವರು. ಹಣವನ್ನು ಕೊಡತಕ್ಕವರು (ನಂ. ೩) ಹುಂಡಿಯನ್ನು ಬಲ್ಲವರಾದ್ದರಿಂದ ನಿತ್ಯವ್ಯವಹಾರದಲ್ಲಿ ಹುಂಡಿಗಳ ಮಾರ್ಗದಿಂದ ಅವರವರ ವ್ಯಾಪಾರದಲ್ಲಿಯ ಹಣದ ವ್ಯವಹಾರವು ಸಾಗುವದು.

ಹುಂಡಿಯ ಹಣವನ್ನು ಕೊಡತಕ್ಕವರು (ನಂ. ಕ) ಅದನ್ನು ಕೊಡ ಲೊಪ್ಪಿದ ಬಗ್ಗೆ ಹುಂಡಿಪತ್ರದ ಮೇಲೆ ಸಹಿ ಮಾಡದ ಹೊರತು ಅವರು ಹುಂಡಿಯ ವ್ಯವಹಾರಕ್ಕೆ ಬದ್ಧರಾಗುವದಿಲ್ಲ. ಹುಂಡಿಯ ಹಣವನ್ನು ಪಡೆಯತಕ್ಕವರು (ನಂ. ಬ) ಹುಂಡಿಯ ಪತ್ರವನ್ನು ತಮ್ಮ ಸಹಿಯನ್ನು ಹಾಕಿ ತಮಗೆ ಯೋಗ್ಯ ಕಂಡವರಿಗೆ ಮುಂದೆ ಸಾಗಿಸಬಹುದು. ಈ ಪ್ರಕಾರ ದಿಂದ ಹುಂಡಿಯ ಪತ್ರವು ಸಾಗುತ್ತ ಹೋಗುವದರಿಂದ ಹುಂಡಿಯ ಪತ್ರದ ಮೇಲೆ ಸಹಿ ಇದ್ದವರೆಲ್ಲ ಹುಂಡಿಯ ಹಣದ ವಸೂಲಿಯ ಬಗ್ಗೆ ಬದ್ಧರಾಗುವರು.

ನಮ್ಮ ದೇಶದಲ್ಲಿ ಹುಂಡಿಯ ವ್ಯವಹಾರವು ಸಾಕಷ್ಟು ಬೆಳೆದಿಲ್ಲ. ಆದರೂ ಬ್ಯಾಂಕಿನವರಿಗೆ ಸಾಲದ ವ್ಯವಹಾರಕ್ಕೆ ಅದು ಯೋಗ್ಯವಾದ ಕಾರಣವಿರುವದು ಈ ಪ್ರಕಾರದಿಂದ ಸಾಲ ಕೊಟ್ಟ ಕಾರಣವಾಗಿ ಬ್ಯಾಂಕಿ

ನವರ ಕಡೆಗೆ ನೂರಾರು ಹುಂಡಿಯ ಪತ್ರಗಳಿದ್ದಾಗ ಅವುಗಳ ಹಣ ದಿನ ದಿನಕ್ಕೆ ಬರುತ್ತಿರುವದರಿಂದ ಬ್ಯಾಂಕಿನವರು ತಮ್ಮ ಕೈಯಲ್ಲಿಡತಕ್ಕ ಹಣ ವನ್ನು ಈ ವಸೂಲಿಗೆ ಹೊಂದಿಸಿ ಹೆಚ್ಚುಳಿದ ಹಣವನ್ನು ಉದ್ಯೋಗದಲ್ಲಿ ಹಾಕಬಲ್ಲರು. ಸ್ವಲ್ಪ ಅವಧಿಯಲ್ಲಿ ವಸೂಲಾಗಬಲ್ಲ ಹುಂಡಿಯ ಪತ್ರಗಳನ್ನು ಬ್ಯಾಂಕಿನವರು ತಮಗೆ ಅವಶ್ಯವಿದ್ದ ಮೇರೆಗೆ ಇತರ ಕಡೆಗೆ ತಾರಣವಾಗಿ ಇಟ್ಟು ತಮ್ಮ ಶಿಲುಕಿನ ರಕಮನ್ನು ಹೆಚ್ಚಿಸಬಹುದು.

ಬ್ಯಾಂಕಿನವರು ಯೋಗ್ಯವಿದ್ದ ಹುಂಡಿಯ ಪತ್ರಗಳನ್ನು ಸಾಲಕ್ಕೆ ತಾರಣವಾಗಿ ಸ್ವೀಕರಿಸುವರು. ಮಾತ್ರ ಹುಂಡಿಯು ತಾರಣವಾಗಬೇಕಾದರೆ ಅದಕ್ಕೆ ಹೊಂದಿದ ಜನರ ಆರ್ಥಿಕಬಲದ ಮೇಲೆ ಅವಲಂಬಿಸಿರುವದು. ಹುಂಡಿಯನ್ನು ಬರೆದವರಾಗಲಿ, ಅದನ್ನು ಸ್ವೀಕರಿಸಿದವರಾಗಲಿ ತಮ್ಮ ಬ್ಯಾಂಕಿನವರಗೂಡ ಪೂರ್ವದಲ್ಲಿ ಮಾಡಿಟ್ಟ ಯೋಜನೆಯ ಮೇರೆಗೆ ಬ್ಯಾಂಕಿ ನವರಿಗೆ ಅದನ್ನು ಮಾರಿ ಹಣವನ್ನು ತೆಗೆದುಕೊಳ್ಳಬಹುದು. ಬ್ಯಾಂಕಿನವರು ಹುಂಡಿಯ ಪತ್ರವನ್ನು ಚೆನ್ನಾಗಿ ಪರೀಕ್ಷಿಸಿ ಅದಕ್ಕೆ ಹೊಂದಿದವರ ಆರ್ಥಿಕ ಬಲದ ಬಗ್ಗೆ ಗೊತ್ತುಮಾಡಿಕೊಂಡು ತಮ್ಮ ಯೋಗ್ಯ ಕಮಿಶನ್ ವಸೂಲ ಮಾಡಿ ಉಳಿದ ಹಣವನ್ನು ಕೊಡಲೊಪ್ಪುವರು. ತಕ್ಕ ಸಮಯಕ್ಕೆ ಹುಂಡಿಯ ಹಣ ವಸೂಲಾಗದಿದ್ದರೆ ಹುಂಡಿಯ ಮೇಲೆ ಸಹಿ ಮಾಡಿದವ ರೆಲ್ಲರು ಬದ್ಧರಾಗುವರು. ಮತ್ತು ಬ್ಯಾಂಕಿನವರು ಕಾಯದೆಯ ಮೇರೆಗೆ ಎಲ್ಲರ ಕಡೆಯಿಂದಲೂ ವಸೂಲ ಮಾಡಬಹುದು.

ವ್ಯಾಪಾರದ ಬೆಳವಣಿಗೆಗೆ ಹುಂಡಿಯು ಒಳ್ಳೇ ಉತ್ತಮವಾದ ಸಾಧನ ವಿರುವದು. ಒಂದು ವಸ್ತುವನ್ನು ಮಾರುವವನು ಅದನ್ನು ಕೊಂಡವನು ತನ್ನ ಮಾರಾಟಮಾಡಿದ ನಂತರ ಹಣವನ್ನು ಕೊಡಬಹುದೆಂದು ಅವನಿಗೆ ಅವಧಿಯನ್ನು ಕೊಡಬಲ್ಲನು. ಆ ವಸ್ತುವಿನ ಮಾರಾಟದ ನಂತರ ಕೊಂಡ ವನು ಮಾರಿದವನಿಗೆ ಹಣವನ್ನು ಮುಟ್ಟಿಸುವನು. ಆದರೆ ಈ ಮಾರುವವ ನಾದರೂ ಎಲ್ಲರಿಗೂ ಈ ರೀತಿಯಿಂದ ಅವಧಿಯನ್ನು ಕೊಡಲಾರನು. ತಿರುಗಿ ಮಾಲನ್ನು ಕೊಳ್ಳಲಿಕ್ಕೆ ಅವನಿಗಾದರೂ ಹಣದ ಅವಶ್ಯಕತೆಯಿರುವದು. ಅವನ ಬಾಂಡವಲಾದರೂ ಮರ್ಯಾದಿತವಿರುವದು. ಈ ಸಮಯಕ್ಕೆ ಮಾರು

ವವನು ಕೊಂಡವನಿಗುದ್ದೇಶಿಸಿ ಅವನ ಮೇಲೊಂದು ಮುದ್ದತಿ ಹುಂಡಿಯನ್ನು ಬರೆಯಬಹುದು. ಅದನ್ನು ಇನ್ನೊಬ್ಬ ವ್ಯಾಪಾರಿಗೆ ಮಾರಿ ತಾತ್ಕಾಲ ಹಣವನ್ನು ದೊರಕಿಸಬಹುದು. ಈ ಮಾರ್ಗದಿಂದ ಮಾಲನ್ನು ಕೊಂಡವನು ಎಚ್ಚರದಿಂದ ವ್ಯವಹಾರಮಾಡಿ ಯೋಗ್ಯ ಸಮಯಕ್ಕೆ ತನ್ನ ಹಣವನ್ನು ಕೊಡುವನು. ಹುಂಡಿಯನ್ನು ಕೊಂಡ ವ್ಯಾಪಾರಿಯು ತನ್ನ ಬ್ಯಾಂಕಿನವರಿಂದ ಇತರ ಹುಂಡಿಗಳನ್ನು ಕೊಳ್ಳುವಗೋಸುಗ ಸಾಲವನ್ನು ತೆಗೆಯಬಹುದು. ತಾನು ಕೊಂಡ ಹುಂಡಿಯು ಸಾಲಕ್ಕೆ ಅಡವು ಆಗುವದು. ಮತ್ತು ಈ ಅಡವನ್ನು ಇಡುವ ಕಾಲಕ್ಕೆ ತಾನಾದರೂ ಅದರ ಮೇಲೆ ಸಹಿ ಮಾಡುವನು. ಈ ಮೇರೆಗೆ ಹುಂಡಿಯನ್ನು ಕೊಂಡ ಬ್ಯಾಂಕಿನವರು ತಾವು ಕೊಟ್ಟ ಹಣವನ್ನು ಹುಂಡಿಯನ್ನು ಬರೆದವರಿಂದಾಗಲಿ, ಅದರ ಹಣವನ್ನು ಮೊದಲು ಕೊಡಲೊಪ್ಪಿದವರಿಂದಾಗಲಿ ತಮ್ಮ ಕಡಿಗೆ ಅದನ್ನು ತಂದಿಟ್ಟವರಿಂದಾಗಲಿ ವಸೂಲ ಮಾಡುವರು. ಹಣವು ವಸೂಲಾದ ನಂತರ ಈ ಹುಂಡಿಯ ವ್ಯವಹಾರಕ್ಕೆ ಹೊಂದಿದವರೆಲ್ಲರ ಹೊಣೆಯು ತೀರಿ ಹೋಗುವದು.

ದೇಶದಲ್ಲಿಯ ಒಂದು ಸ್ಥಳದಿಂದ ಇನ್ನೊಂದು ಸ್ಥಳದಲ್ಲಿಯ ವ್ಯಾಪಾರಿಯು ಹಣವನ್ನು ತರಿಸಬೇಕಾದಾಗ ಆತನು ಬೇರೆ ಕಡೆಯಲ್ಲಿದ್ದ ತನ್ನ ಮನುಷ್ಯನ ಮೇಲೆ ಹುಂಡಿಯನ್ನು ಬರೆದು ಬ್ಯಾಂಕಿಗೆ ವಸೂಲಿಗಾಗಲಿ ಇಲ್ಲವೆ ಪೂರ್ವಯೋಜನೆಯ ಮೇರೆಗೆ ಮಾರಿಯಾಗಲಿ ಆ ಹುಂಡಿಯ ಹಣವನ್ನು ದೊರಕಿಸಬಹುದು. ತರಿಸಬೇಕಾಗಿದ್ದ ಹಣವು ಕೇವಲ ಉದ್ಯೋಗಕ್ಕೆ ಆವಶ್ಯಕತೆಯಿದ್ದ ಮೂಲಕವಾಗಿರಬಹುದು. ಇಲ್ಲವೆ ಈ ಸ್ಥಳಕ್ಕೆ ಮಾಲನ್ನು ಕಳಿಸಿದ ಬಗ್ಗೆ ಇರಬಹುದು. ಮಾಲನ್ನು ಕಳಿಸಿದ ಬಗ್ಗೆ ಹುಂಡಿಯನ್ನು ಬರೆದಾಗ ಅದಕ್ಕೆ ಹೊಂದಿ ರೇಲ್ವೆ ರಸೀದಿಯಾದರೂ ಇರುವದು. ಈ ಸಂಗತಿಯು ವ್ಯಾಪಾರದ ದ್ಯೋತಕವಿದ್ದುದರಿಂದ ಒಂದು ಸಲ ಬ್ಯಾಂಕಿನವರು ರೇಲ್ವೆ ರಸೀದಿಗೂಡ ಇದ್ದ ಹುಂಡಿಯನ್ನು ಕೊಳ್ಳಬಹುದು. ಹುಂಡಿಯನ್ನು ಬರೆದವರ ಮೇಲೆ ಬ್ಯಾಂಕಿನವರ ವಿಶ್ವಾಸವಿಲ್ಲದ್ದು ಕಂಡುಬಂದರೆ, ಇಂಥ ಹುಂಡಿಯನ್ನು ಪೇಟೆಯಲ್ಲಿರುವ ಹುಂಡಿಯ ದಲಾಲರಿಗೆ ಕೊಟ್ಟು ಅವರಿಂದ ಹಣವನ್ನು ದೊರಕಿಸಬಹುದು. ನಂತರ ಆ ದಲಾಲನು ಸಹಿಮಾಡಿದ

ಹುಂಡಿಯನ್ನು ಬ್ಯಾಂಕಿನವರು ಆತನ ಕಡೆಯಿಂದ ಕೊಳ್ಳಬಹುದು. ಈ ಮನುಷ್ಯನು ಬ್ಯಾಂಕಿನವರಿಗೆ ಗೊತ್ತಿದ್ದವನಿದ್ದುದರಿಂದ ಹುಂಡಿಯನ್ನು ಬರೆದವರಿಗೆ ಅವಶ್ಯವಿದ್ದ ಹಣವು ಈ ಮಾರ್ಗದಿಂದ ದೊರಕಬಹುದು. ಕೆಲವೊಂದು ಸಮಯದಲ್ಲಿ ಬ್ಯಾಂಕಿನವರು ಕೊಂಡುಕೊಂಡ ಹುಂಡಿಯ ಹಣವು ಕೂಡಲೆ ಸಿಗುವದಿಲ್ಲ. ಹಣವನ್ನು ಕೊಡತಕ್ಕವನು ಮುದ್ದತು ಬೇಡುವನು. ಬ್ಯಾಂಕಿನವರು ಈ ಸಮಯದಲ್ಲಿ ಕೂಡಲೇ ಹಣವು ಬಾರದ್ದ ಇದ್ದುದನ್ನು ಖಾತೆದಾರನಿಗೆ ತಿಳಿಸುವರು ಕಾರಣ, ಮುದ್ದತು ಕೊಡುವದು ಬ್ಯಾಂಕಿನವರ ಕೆಲಸವಲ್ಲ. ಈ ಪ್ರಕಾರದ ಮುದ್ದತು ಆ ಮನುಷ್ಯನು ಬೇಡಿದರೆ ತಮಗೆ ಹಾನಿ ತಟ್ಟಬಾರದೆಂದು ಬ್ಯಾಂಕಿನವರು ಹುಂಡಿಯ ಮೇಲೆ ಸಹಿ ಮಾಡಿದವರೆಲ್ಲರಿಂದ ಮುದ್ದತು ಕೊಡತಕ್ಕ ಬಗ್ಗೆ ಒಪ್ಪಿಗೆಯನ್ನು ಕೇಳುವರು.

## ಹುಂಡಿಯ ಅನುಚಿತ ವ್ಯವಹಾರವು

ವ್ಯವಹಾರಕ್ಕೆ ಯೋಗ್ಯ ಹುಂಡಿಯೆಂದರೆ ಅದು ನಿಜವಾದ ವ್ಯಾಪಾರಕ್ಕೆ ಹೊಂದಿದ್ದಿರಬೇಕು. ಕೇವಲ ಹಣವನ್ನು ಹುಟ್ಟಿಸುವಗೋಸುಗ ಕೆಲವರು ಹುಂಡಿಯನ್ನು ಬರೆಯುವರು. ಬೇರೆ ಯಾವ ಕಾರಣವನ್ನು ಕೊಡಲಾಗದ್ದರಿಂದ ಮತ್ತು ಹಣದ ಕೊರತೆಯಿದ್ದಾಗ ಇನ್ನೊಂದು ಪಟ್ಟಣದಲ್ಲಿರುವ ತಮ್ಮ ಸಹೋದ್ಯೋಗಿಯ ಮೇಲೆ ಕೆಲವರು ಹುಂಡಿಯನ್ನು ಬರೆದು ಬ್ಯಾಂಕಿನವರಿಗೆ ಮಾರಲು ಪ್ರಯತ್ನಿಸುವರು. ಮೇಲೆ ಮೇಲೆ ನೋಡಿದರೆ ಬೇರೆ ಸ್ಥಳದಲ್ಲಿ ಸಂಚಯಿಸಿದ ಹಣವನ್ನು ತರಿಸಿಕೊಳ್ಳುವ ಬಗ್ಗೆ ಹುಂಡಿಯನ್ನು ಬರೆದಿರುವರೆಂದು ಕಂಡುಬರುವದು. ನಿಜವಾಗಿ ಹಾಗಿರುವದಿಲ್ಲ. ಮುದ್ದತಿ ಹುಂಡಿಯ ವಸೂಲಿಯ ದಿವಸ ಬಂದಕೂಡಲೆ ಎರಡನೆಯ ವ್ಯಾಪಾರಿಯು ಮೊದಲು ಹುಂಡಿಯನ್ನು ಬರೆದವರ ಮೇಲೆ ಇಲ್ಲವೆ ಮತ್ತೆ ಯಾವದಾದರೂ ಸ್ಥಳದಲ್ಲಿರುವ ವ್ಯಾಪಾರಿಯ ಮೇಲೆ ಹುಂಡಿಯನ್ನು ಬರೆದು ಬ್ಯಾಂಕಿನವರಿಗೆ ಮಾರಿ ದೊರಕಿದ ಹಣದಿಂದ ಮೊದಲಿನ ಹುಂಡಿಯ ಹಣವನ್ನು ಕೊಡುವನು. ಅಥವಾ ಮೊದಲಿನ ಹುಂಡಿಯನ್ನು ಬರೆದ ವ್ಯಾಪಾರಿಯೇ ಇನ್ನೊಂದು ಬೇರೆ ಹುಂಡಿಯನ್ನು ಯಾವ ವ್ಯಾಪಾರಿಯ ಮೇಲೆ ಬರೆದು ಬ್ಯಾಂಕಿನವರಿಗೆ ಮಾರಿ ಸಿಕ್ಕ ಹಣವನ್ನು ತಾರಿಸಿಂದ ತಮ್ಮ

ಸಹೋದ್ಯೋಗಿಗೆ ಕಳಿಸಿ ಮೊದಲಿನ ಹುಂಡಿಯ ವಸೂಲಿಯನ್ನು ಅವನಿಂದ ಮಾಡಿಸಿಕೊಳ್ಳುವನು. ಈ ಪ್ರಕಾರ ಅನುಚಿತ ವ್ಯವಹಾರವು ದಿಕ್ಕುದಿಕ್ಕಿನಿಂದ ಅನಿರ್ಬಂಧ ನಡೆಯುವದು. ಈ ಉಪಕ್ರಮಕ್ಕೊಳಗಾದ ಯಾವನಾದರೊಬ್ಬ ವ್ಯಾಪಾರಿಯು ದಿವಾಳಿಯಾದರೆ ಈ ಚಕ್ರವು ಅನೇಕ ವರ್ಷಗಳಿಂದ ನಡೆದದ್ದು ಹೊರಬೀಳುವದು. ಒಬ್ಬನೇ ವ್ಯಾಪಾರಿಯು ಅನೇಕ ಬ್ಯಾಂಕುಗಳಗೂಡ ಹುಂಡಿಯ ವ್ಯವಹಾರವನ್ನು ಮಾಡುತ್ತಿದ್ದಾಗ ತನ್ನ ಉಪದ್ವ್ಯಾಪವು ಗೊತ್ತಾಗಬಾರದೆಂದು ಒಂದು ಬ್ಯಾಂಕಿಗೆ ಹುಂಡಿಯನ್ನು ಮಾರಿ ಮತ್ತೊಂದು ಬ್ಯಾಂಕಿನ ಸಹಾಯದಿಂದ ಹಣವನ್ನು ತನ್ನ ಏಜೆಂಟನಿಗೆ ಕಳಿಸುವನು. ಆದರೆ ಈ ಅನುಚಿತ ಪ್ರಕಾರವು ಬ್ಯಾಂಕಿನವರಿಗೆ ತಿಳಿಯದಿರಲಾರದು. ಒಂದೆರಡು ಈ ತರದ ವ್ಯವಹಾರವಾದ ಕೂಡಲೆ ತಮ್ಮ ಖಾತೇದಾರನು ಕೇವಲ ಹುಂಡಿಯನ್ನೇ ಬರೆಯುವನೋ ಇಲ್ಲವೆ ಬರೆದ ಹುಂಡಿಯ ಬಗ್ಗೆ ಮಾಲನ್ನು ಕಳಿಸುವನೋ ಎಂಬುದನ್ನು ಬ್ಯಾಂಕಿನವರು ತಮ್ಮ ಇತರ ಖಾತೇದಾರರಿಂದ ಪೇಟೆಯಲ್ಲಿಯ ದಲಾಲರಿಂದ ನಿಜವಾದ ಸಂಗತಿಯನ್ನು ತಿಳಿದುಕೊಳ್ಳುವರು.

ದಿವಾಳಿಯಾದ ಒಂದು ಬ್ಯಾಂಕಿನಲ್ಲಿಯ ವ್ಯವಹಾರವು ಈ ರೀತಿಯಾಗಿ ಕಂಡುಬಂದಿದೆ. ಒಂದು ಭಾಗೀದಾರಿ ಕಂಪನಿಗೆ ಈ ಬ್ಯಾಂಕಿನವರು ಇಪ್ಪತ್ತು ಸಾವಿರ ರೂಪಾಯಿಗಳ ವರೆಗೆ ಹುಂಡಿಯ ವ್ಯವಹಾರವನ್ನು ಸಾಗಿಸುವ ಬಗ್ಗೆ ಅಪ್ಪಣೆ ಕೊಟ್ಟಿದ್ದರು. ಹೀಗೆ ಮಾಡಿಟ್ಟ ಅನುಕೂಲತೆಯ ಮೇರೆಗೆ ಆ ಕಂಪನಿಯವರು ಬೇರೆ ಸ್ಥಳದಲ್ಲಿದ್ದ ತಮ್ಮ ಏಜೆಂಟನ ಮೇಲೆ ಹತ್ತುಸಾವಿರದ ಹುಂಡಿಯನ್ನು ಬರೆದು ಬ್ಯಾಂಕಿಗೆ ಮಾರಿದರು. ಹುಂಡಿಯು ಮುಟ್ಟಿದ ನಾಲ್ಕು ದಿವಸಗಳಲ್ಲಿ ಹಣವು ವಸೂಲಾಗತಕ್ಕದ್ದಿದ್ದು ಏಜೆಂಟನು ತಕ್ಕ ಸಮಯಕ್ಕೆ ಹಣವನ್ನು ಕೊಡಲಿಲ್ಲ. ಇನ್ನೂ ಸ್ವಲ್ಪ ಅವಧಿ ಸಿಗುವ ಬಗ್ಗೆ ಬ್ಯಾಂಕಿಗೆ ಬೇಡಿಕೊಂಡನು. ಹುಂಡಿಯನ್ನು ಬರೆದವನಿಗೆ ಈ ಮಾತನ್ನು ತಿಳಿಸಿದಾಗ, ಆತನಾದರೂ ಕೆಲಕಾಲ ತಡೆಯಬಹುದೆಂದು ತಿಳಿಸಿದನು. ಹುಂಡಿಯ ಹಣದ ವಸೂಲಿಯು ಆಗದೇಯಿದ್ದ ಅವಧಿಯಲ್ಲಿ ಅದೇ ಖಾತೇದಾರರು ಅದೇ ಸ್ಥಳದಲ್ಲಿದ್ದ ಅದೇ ಏಜೆಂಟನ ಮೇಲೆ ಇನ್ನೊಂದು ಹುಂಡಿಯನ್ನು ಬರೆದರು. ಮತ್ತು ಒಳ್ಳೇ ಸೌಜನ್ಯದಿಂದ ಅದೇ ಬ್ಯಾಂಕಿ

ನವರು ಎರಡನೆಯ ಹುಂಡಿಯನ್ನಾದರೂ ಕೊಂಡರು. ಕೊನೆಗೆ, ಎರಡೂ ಹುಂಡಿಗಳನ್ನು ಬರೆದ ಬ್ಯಾಂಕಿಗೆ ಹಾನಿ ತಟ್ಟಿತು. ಸಾಧಾರಣವಾಗಿ, ಬ್ಯಾಂಕಿನ ಅಧಿಕಾರಿಗಳು ಹುಂಡಿಯ ಹಣದ ವಸೂಲಿಯು ಆಗದಿದ್ದರೆ ತಮ್ಮ ಖಾತೇದಾರರಿಗೆ ಕೊಟ್ಟ ಅಪ್ಪಣೆಯನ್ನು ರದ್ದು ಮಾಡುವರು.

## "ಸಾವಕಾರೀ" ಹುಂಡಿಗಳು

ಪೇಟೆಯಲ್ಲಿ ಚಿಕ್ಕ ವ್ಯವಸಾಯದಲ್ಲಿದ್ದವರಿಗೆ ಸಣ್ಣ ಸಣ್ಣ ರಕಮಿನ ಅವಶ್ಯಕತೆ ಆಗಾಗ್ಗೆ ಬೀಳುವದು. ಅವರಿಗೆ ಬ್ಯಾಂಕಿನವರ ಕಡೆಗೆ ಹೋಗಲು ಆಸ್ಪದವಿಲ್ಲದ್ದರಿಂದ ಅವರ ವ್ಯವಹಾರವನ್ನರಿತವರಾದ ಸಾವುಕಾರರಿಗೆ ತಾವು ಒಬ್ಬರಿನ್ನೊಬ್ಬರ ಮೇಲೆ ಬರೆದ ಹುಂಡಿಗಳನ್ನೊಪ್ಪಿಸಿ, ಸಣ್ಣ ರಕಮುಗಳನ್ನು ದೊರಕಿಸುವರು. ಈ ತರದ ಸಾವಕಾರರು ಯಾವಾಗಲೂ ಪೇಟೆಯಲ್ಲಿರುವವರಿದ್ದುದರಿಂದ, ಅವರಿಗೆ ಎಲ್ಲ ವ್ಯಾಪಾರಿಗಳ ಬಗ್ಗೆ ಪೂರ್ಣವಾಗಿ ಗೊತ್ತಿರುವದು. ಸಾಮಾನ್ಯವಾಗಿ ಹುಂಡಿಗಳ ಅವಧಿಯು ೨-೩ ತಿಂಗಳ ವರೆಗೆ ಇರುವದು. ಸಾವುಕಾರರು ಈ ಹುಂಡಿಗಳನ್ನು ಕೊಳ್ಳುವರು. ಅದರಿಂದ ಸಣ್ಣ ವ್ಯಾಪಾರಿಗಳ ಉದ್ಯೋಗವು ಸಾಗುವದು. ಅವರು ಧನಿಕರಿದ್ದುದರಿಂದ ಮತ್ತು ಅವರ ವ್ಯವಹಾರವು ಈ ಪ್ರಕಾರದ್ದೊಂದೇ ಇದ್ದುದರಿಂದ ಬ್ಯಾಂಕಿನವರು ಅವರ ಹುಂಡಿಗಳ ಮೇಲೆ ಸಂಕೋಚವಿಲ್ಲದೆ ಹಣವನ್ನು ಕೊಡುವರು. ಅವರವರ ಯೋಗ್ಯತೆಯ ಮೇರೆಗೆ ಅವರ ಸಾಲದ ವ್ಯವಹಾರವನ್ನು ಮರ್ಯಾದಿಸಿ, ಬ್ಯಾಂಕಿನವರು ಈ ಚಿಕ್ಕ ಹುಂಡಿಗಳ ಮೇಲೆ ಸಾವುಕಾರರ ಸಹಿಗಳಿದ್ದದ್ದನ್ನು ಪರೀಕ್ಷಿಸಿ ಮೊದಲು ಗೊತ್ತುಪಡಿಸಿದ ಮರ್ಯಾದೆಯ ಮೇರೆಗೆ ಆಗಾಗ್ಗೆ ಹಣವನ್ನು ಕೊಡುವರು. ಸಾವುಕಾರರಾದರೂ ಒಂದು ಸಮಯಕ್ಕೆ ಒಂದೊಂದೇ ಹುಂಡಿಯನ್ನು ತರದೆ ಸಣ್ಣ ರಕಮುಗಳ ಎಷ್ಟೋ ಹುಂಡಿಗಳನ್ನು ಗುಂಪುಗುಂಪಾಗಿ ತಂದು ಬ್ಯಾಂಕಿನವರಿಗೆ ಒಪ್ಪಿಸಿ ಸಾಕಷ್ಟು ಹಣವನ್ನು ಕೈಯಲ್ಲಿಟ್ಟುಕೊಳ್ಳುವರು. ಬ್ಯಾಂಕಿನವರು ಹುಂಡಿಗಳನ್ನು ಬರೆದ ವ್ಯಾಪಾರಿಗಳ ಬಗ್ಗೆ ಗೊತ್ತುಮಾಡಿಕೊಂಡರೂ ಆ ಹುಂಡಿಗಳ ಹಣದ ವಸೂಲಿಯು ಸಾವುಕಾರರಿಂದ ಬರುವದೆಂದು ನಿಶ್ಚಿತ. ಈ ಹುಂಡಿಗಳನ್ನು ಸಾವುಕಾರನು ತನ್ನ ನಿತ್ಯದ ಕಮಿಶನ್

ವಸೂಲ ಮಾಡಿಕೊಂಡು ಕೊಳ್ಳುವನು. ಇವೆರಡು ವ್ಯವಹಾರದಲ್ಲುಳಿದ ಭಾಗವು ಸಾವುಕಾರನ ಲಾಭವಾಗುವದು. ಇದರ ಹೊರತು ಆತನು ಹುಂಡಿಯ ವಸೂಲಿಯ ಬಗ್ಗೆ ಬ್ಯಾಂಕಿನವರಿಗೆ ತಾನೇ ಬದ್ಧನಿರುವನು. ಆದ್ದರಿಂದ ಅವನು ತನ್ನ ಕುಳಗಳ ಬಗ್ಗೆ ತೀರ ಜಾಗರೂಕನಾಗಿರುವನು. ಬ್ಯಾಂಕಿನವರು ತನ್ನ ವ್ಯವಹಾರದ ಬಗ್ಗೆ ಕೇವಲ ಸಾವುಕಾರನ ಪಾತ್ರತೆಯ ಮೇಲೆ ಅವಲಂಬಿಸಿದ್ದರೂ ಆತನು ಯಾವ ಬಗೆಯಿಂದ ತನ್ನ ವ್ಯವಹಾರ ವನ್ನು ಬೇರೆ ಬೇರೆ ವ್ಯಾಪಾರಿಗಳಲ್ಲಿ ಹಂಚಿರುವನೆಂಬುದರ ಬಗ್ಗೆಯಾದರೂ ನೋಡುವರು.

ಮುಂಬಯಿಯಂಥ ಪಟ್ಟಣದಲ್ಲಿರುವ ಮುಲ್ತಾನಿ ಮತ್ತು ಮಾರವಾಡಿ ದಲಾಲರು ಈ ತರದ ಉದ್ಯೋಗವನ್ನು ಎಷ್ಟೋ ವರ್ಷಗಳಿಂದ ಸಾಗಿಸುತ್ತಿ ರುವರು. ನಮ್ಮ ದೇಶದಲ್ಲಿ ಈ ಜನರು ಸಣ್ಣ ವ್ಯಾಪಾರಿಗರ ಸಂಬಂಧವನ್ನು ಬ್ಯಾಂಕಿನವರಿಗೆ ಹೂಡುವವರಾದ್ದರಿಂದ ಅವರ ಸಾಮಾಜಿಕ ಉಪ ಯುಕ್ತತೆಯು ಬಹಳವಿರುವದು. ಆದ್ದರಿಂದ ಈ ವ್ಯವಸಾಯದಲ್ಲಿದ್ದವರಿಗೆ ಇನ್ನೂ ಹೆಚ್ಚಿನ ಉತ್ತೇಜನ ಸಿಗುವದು ಅವಶ್ಯವಾದದ್ದಿರುವದು.

ದೇಶದಲ್ಲಿಯ ವ್ಯವಹಾರೋದ್ಯೋಗದ ಬೆಳವಣಿಗೆಯು ಸಲುವಾಗಿ ಅನೇಕ ವರ್ಷಗಳ ವರೆಗೆ ಸ್ಥಾಯಿಕರಾದ ಸಾವುಕಾರರ ಮತ್ತು ಸಹಕಾರಿ ಇಲ್ಲವೆ ವ್ಯಾಪಾರಿ ಬ್ಯಾಂಕುಗಳ ಸಂಬಂಧವು ಬೆಳೆಯಬೇಕೆಂದು ಮುಂಬಯಿ ಪ್ರಾಂತಿಕ ಬ್ಯಾಂಕಿಂಗ ಕಮಿಟಿಯುವರು ೧೯೨೯-೩೦ನೆಯ ಇಸ್ವಿಯಲ್ಲಿ ಕೆಲವು ಮಾರ್ಗಗಳನ್ನು ತೋರಿಸಿರುವರು. ನಮ್ಮ ದೇಶದಲ್ಲಿ ಅಸಂಖ್ಯ ಕಮಿಟಿಗಳು ಇದ್ದು ಕೆಲಸ ಮಾಡಿ ವಿಸರ್ಜನವಾಗುವವು. ಈ ಕಮಿಟಿ ಯುವರು ಮಾಡಿದ ವರದಿಗಳಾದರೂ ಕಾಗದಗಳಲ್ಲಿಯೇ ಉಳಿಯುವವು. ಅವರು ಮಾಡಿದ ಸೂಚನೆಗಳು ೨೦ ವರ್ಷಗಳ ಹಿಂದೆ ಮಾಡಿದ್ದಾದರೂ, ಇದೂ ವರೆಗೆ ಆ ಪ್ರಕಾರ ಕಾರ್ಯಭಾಗವು ಆಕಷ್ಟು ಆಗಿಲ್ಲ. ಆ ವರದಿಯಲ್ಲಿ ಕಮಿಟಿಯುವರು ಅಂತಸ್ಥ ವ್ಯಾಪಾರದ ಬಗ್ಗೆ ಕೆಳಗಿನ ವಿಚಾರಗಳನ್ನು ಪ್ರಕಟಿಸಿರುವರು. ಈಗಾದರೂ ಪರಿಸ್ಥಿತಿಯು ಅವರು ಆಗ ನಿವೇದಿಸಿದ ಮೇರೆಗೆಯೇ ಇದ್ದುದರಿಂದ ಅವುಗಳನ್ನು ವಾಚಕರ ಮುಂದೆ ಇಡುವೆವು.

೧. ಪ್ರಚಲಿತ ಬ್ಯಾಂಕುಗಳು ಮಾಡುವ ಎಲ್ಲ ಮುಖ್ಯ ವ್ಯವಹಾರವನ್ನು ಸ್ಥಾನಿಕ ಸಾವುಕಾರರು ಮಾಡುವರು. ಚೆಕ್ಕುಗಳನ್ನು ಮಾತ್ರ ಬರೆಯಲಾರರು. ಠೇವುಗಳನ್ನು ಸ್ವೀಕರಿಸಿ ಖಾತೇದಾರರು ಬರೆದೊಪ್ಪಿಸಿದ ಮೇರೆಗೆ ಅವರ ಹಣದ ವಿನಿಯೋಗವನ್ನಾದರೂ ಸಾವುಕಾರರು ಮಾಡುವರು.

೨. ಖಾತೇದಾರರು ಬರೆದ ಹುಂಡಿಗಳನ್ನು ಕೊಳ್ಳುವರು, ಅವುಗಳ ವಸೂಲಿಯ ಕೆಲಸವನ್ನು ಮಾಡುವರು. ಖಾತೇದಾರರ ಸಲುವಾಗಿ ದೇಶದಲ್ಲಿಯ ಇತರ ವ್ಯಾಪಾರಿಗರಿಗೆ ಹಣವನ್ನಾದರೂ ಕಳಿಸಬಲ್ಲರು.

ಈ ಮೇರೆಗೆ ಬ್ಯಾಂಕುಗಳು ದೇಶದ ತೀರ ಅಂತಸ್ಥ ಭಾಗದಲ್ಲಿ ಹೋಗಲಾರದ್ದರಿಂದ ಅದರ ಸ್ಥಾನವನ್ನು ಸಾವುಕಾರರು ಹಿಡಿದರು. ಮತ್ತು ಹತ್ತರಿರುವ ತಮ್ಮ ಖಾತೇದಾರರ ವಿಷಯಕ್ಕೆ ಪೂರ್ಣ ಗೊತ್ತಾದವರಿದ್ದದರಿಂದ ಅವರವರ ವ್ಯವಹಾರವು ಅನಿರ್ಬಂಧವಾಗಿ ಸಾಗುವದು. ಸ್ಥಾನಿಕ ಸಾವುಕಾರರು ಸಾಮಾನ್ಯವಾಗಿ ಮೂರು ಪ್ರಕಾರದವರಾಗಿರುವರು:—

೧. ಕೇವಲ ಹಣದ ವ್ಯವಹಾರವನ್ನಷ್ಟೇ ಮಾಡತಕ್ಕವರು.

೨. ಹಣದ ವ್ಯವಹಾರಕ್ಕೆ ವ್ಯಾಪಾರವನ್ನಾದರೂ ಹೊಂದಿಸಿದವರು ಮತ್ತು ಕಮೀಶನ್ನ ಏಜೆಂಟರೆಂದು ಕೆಲಸಮಾಡುವವರು;

೩. ಕೇವಲ ವ್ಯಾಪಾರಿಗರಿದ್ದು ತಮ್ಮ ಹೆಚ್ಚಿನ ಹಣವನ್ನು ಬ್ಯಾಂಕಿಂಗ ವ್ಯವಹಾರದಲ್ಲಿ ಹಾಕಿದವರು.

ನಮ್ಮ ದೇಶದಲ್ಲಿ ಇನ್ನು ಮುಂದೆ ಹಳ್ಳಿಗಳಿಗೆ ವಿಶೇಷ ಮಹತ್ವ ಬರುವದಿದ್ದುದರಿಂದ ಅಲ್ಲಿಯ ವ್ಯಾಪಾರವು ಹೆಚ್ಚುತ್ತ ಹೋಗುವ ಸಂಭವವುಂಟು. ಅದರ ಬೆಳವಣಿಗೆಯ ಸಲುವಾಗಿ ಬ್ಯಾಂಕಿಂಗದ ಸಹಾಯವಾದರೂ ಬೇಕಾಗುವದು. ವ್ಯಾಪಾರಿ ಬ್ಯಾಂಕುಗಳಾಗಲೀ, ಸಹಕಾರಿ ಬ್ಯಾಂಕುಗಳಾಗಲಿ ತೀರ ದೂರ ದೂರ ಭಾಗಗಳಲ್ಲಿ ಕಚೇರಿಗಳನ್ನು ತೆರೆಯುವದು

ಶಕ್ಯವಿಲ್ಲದ್ದರಿಂದ ಈ ಭಾಗದಲ್ಲಿಯ ವ್ಯಾಪಾರವು ಸ್ಥಾಯಿಕ ಸಾವುಕಾರರ ಅಧೀನದಲ್ಲಿಯೇ ಉಳಿಯುವದು. ಮಾತ್ರ, ಮೊದಲಿನಂತೆ ಸಾವುಕಾರರು ಅನಿಯಂತ್ರಿತ ಕಾರಭಾರವನ್ನು ಇನ್ನು ಮುಂದೆ ಮಾಡಲಾರರು. ಅಂತಸ್ಥ ಭಾಗಗಳಲ್ಲಿ ಅವರ ಆವಶ್ಯಕತೆಯಿದ್ದದ್ದು ಸರಕಾರದವರು ಬಲ್ಲರು. ಸರಕಾರ ದವರು ಅಂತರ್ಗತ ಚಲನದ ಮತ್ತು ಹುಂಡಿಗಳ ಉದ್ಯೋಗವು ಬೆಳೆಯ ಬೇಕೆಂದು ಸಾವುಕಾರರನ್ನು ಯಾವ ಬಗೆಯಿಂದಾದರೂ ಬ್ಯಾಂಕುಗಳಿಗೆ ಜೋಡಿಸುವ ಪ್ರಯತ್ನದಲ್ಲಿರುವರು. ಈ ಉಪಕ್ರಮವು ಸಾಧ್ಯವಾಗುವದಕ್ಕೆ ಸಾವುಕಾರರ ವ್ಯವಹಾರವು ಸಮಾಧಾನಕಾರಕವಾಗಿದ್ದು ಅವರ ಸಹಾಯ ದಿಂದ ಹತ್ತರಿದ್ದ ಸಮಾಜದ ಕಲ್ಯಾಣವು ಸಾಧಿಸಬೇಕಾಗುವದು. ಮಿಕ್ಕ ವ್ಯವಸಾಯಿಗರಿಗೆ ಸ್ಥಾನಿಕ ಸಾವುಕಾರರಿಂದ ಹಣವುಸಿಕ್ಕು, ಸ್ಥಾನಿಕ ಸಾವು ಕಾರರಿಗೆ ಬ್ಯಾಂಕುಗಳಿಂದ ಹಣವು ದೊರೆಯಬೇಕೆಂಬುವ ಉದ್ದೇಶವು ಸರಕಾರದ ನಿಯಂತ್ರಣಗಳ ಮೂಲಕವೇ ಲಭಿಸುವದು.

ಸ್ಥಾನಿಕ ಸಾವುಕಾರರು ದೇಶದಲ್ಲಿಯ ಆರ್ಥಿಕ ಪರಿಸ್ಥಿತಿಯನ್ನನುಲಕ್ಷಿಸಿ ತಮ್ಮ ವ್ಯವಹಾರದಲ್ಲಿ ಹೆಚ್ಚುಕಡಿಮೆ ಮಾಡುವ ಸಮಯವು ಬಂದಿದೆ. ಹತ್ತರಿದ್ದ ಇತರ ಧನಿಕ ವ್ಯಾಪಾರಿಗರನ್ನು ಕೂಡಿಕೊಂಡು ಅವಶ್ಯವಿದ್ದಲ್ಲಿ ಒಂದು ಸಮಿತಿಯನ್ನು ಮಾಡಿಕೊಳ್ಳಬೇಕು. ಬ್ಯಾಂಕುಗಳು ಮುಟ್ಟಲಾಗದ ಮೂಲೆಗಳನ್ನು ಭದ್ರಿಸುವ ಹೊಣೆಯು ಅಂತಸ್ಥ ಧನಿಕರ ಮೇಲೆ ಇರುವದು. ಆದ್ದರಿಂದ ಅವರು ಸಂಘಟಿತ ಕಾರ್ಯವು ಸರಕಾರದವರು ಆಗಾಗ್ಗೆ ಕೈಕೊಳ್ಳುವ ಉಪಕ್ರಮಕ್ಕೆ ಉಪಯುಕ್ತವಾದದ್ದು. ಅನ್ನ, ಧಾನ್ಯನಿರ್ಮಿತಿಯು ಹಳ್ಳಿ ಗಳಲ್ಲಿಯೇ ಆಗುವದಾದುದರಿಂದ, ಮತ್ತು ಅನ್ನ ಧಾನ್ಯದ ಉತ್ಪಾದನವು ಕೂಡಲೇ ಹೆಚ್ಚಾಗಬೇಕಾದ್ದರಿಂದ, ಈ ಕೆಲಸಕ್ಕೆ ಹಣವನ್ನು ಪೂರೈಸುವ ಸಂಧಿಯು ಸ್ಥಾಯಿಕ ಧನಿಕರಿಗೆ ಸಿಗುವಂತಿದೆ. ಅದಕ್ಕೆ ಹೊಂದಿ ಧಾನ್ಯವನ್ನು ಪೇಟೆಗೆ ಹಚ್ಚುವದು, ಅದರ ಹಂಚುವಿಕೆ ಮೊದಲಾದ ರಾಷ್ಟ್ರಕ್ಕೆ ಅವಶ್ಯವಾದ ಉದ್ಯೋಗವು ಹೆಚ್ಚುಹೆಚ್ಚಾಗಿ ಬೆಳೆಯಬೇಕಾಗಿದೆ.

ಈ ಮಾರ್ಗದಿಂದ ಮುದ್ದತಿ ಹುಂಡಿಯ ವ್ಯವಹಾರವು ಬೆಳೆಯಬೇಕು. ಮುಲ್ತಾನಿ ವ್ಯಾಪಾರಿಗರಂತೆ ನಮ್ಮ ಸಾವುಕಾರರಾದರೂ ಪ್ರಚಲಿತ

ಕಾಯದೆಯ ಮೇರೆಗೆ ಸನದನ್ನು ಸರಕಾರದಿಂದ ಪಡೆದು ತಮ್ಮ ವ್ಯವಹಾರವನ್ನು ಸ್ಥಿರಪಡಿಸಿದರೆ ದೇಶದ ಅಂತಸ್ಥ ಆರ್ಥಿಕ ಕಲ್ಯಾಣವನ್ನು ಭದ್ರಪಡಿಸಿದ ಶ್ರೇಯವು ಅವರಿಗೆ ಹುಟ್ಟುವದು. ಧಾನ್ಯ ಉತ್ಪಾದನಕ್ಕೆ ಹೊಂದಿ ಇನ್ನೂ ಅನೇಕ ಸಣ್ಣ ಸಣ್ಣ ವ್ಯವಸಾಯಗಳು ಹಳ್ಳಿಗಳಲ್ಲಿ ಬರುವವು. ಇವಕ್ಕೆಲ್ಲ ಹಣದ ಪೂರೈಕೆಯು ದಿಲ್ಲಿಯಿಂದಾಗಲಿ, ಮುಂಬಯಿಯಿಂದಾಗಲಿ ಬರುವದಿಲ್ಲ. ಸ್ಥಾನಿಕ ಹಣವೇ ಸ್ಥಾನಿಕ ಕಾರ್ಯಭಾಗವನ್ನು ಸಾಗಿಸಬಲ್ಲದು. ಅದು ಕಡಿಮೆ ಬಿದ್ದರೆ ಮಾತ್ರ ಸರಕಾರದಿಂದ ಸಹಾಯವು ದೊರಕಬಹುದು. ಜಪಾನ ದೇಶವು ಸಣ್ಣ ಸಣ್ಣ ವ್ಯವಸಾಯಗಳ ಮುಖಾಂತರ ಜಗತ್ತಿನಲ್ಲೆಲ್ಲ ತಮ್ಮ ಸರಕುಗಳನ್ನು ಪಸರಿಸಿದ್ದು ನಮಗೆ ಗೊತ್ತುಂಟು. ಇಂಥ ಉದ್ಯೋಗಗಳು ಇನ್ನುಮುಂದೆ ನಮ್ಮ ಹಳ್ಳಿಗಳಲ್ಲಿಯೂ ಬೆಳೆಯುವವು. ಆದ್ದರಿಂದ ಸ್ಥಾನಿಕ ಸಾವುಕಾರರು ತಮ್ಮ ಉದ್ಯೋಗವನ್ನು ಪ್ರಾಮಾಣಿಕತನದಿಂದ ಸ್ಥಿರಪಡಿಸಿ ಅವನ್ನು ಹಬ್ಬಿಸುವದಕ್ಕೆ ಕೂಡಲೇ ಉದ್ಯುಕ್ತರಾಗಬೇಕು.

ಹುಂಡಿಯ ವಿಷಯಕ್ಕೆ ಇಷ್ಟು ವಿಸ್ತಾರವಾಗಿ ಬರೆಯುವ ಕಾರಣವೇನೆಂದರೆ:—ಹುಂಡಿಯ ಪತ್ರವು ತಾತ್ಕಾಲಿಕ ಹಣವನ್ನು ದೊರಕಿಸಲಿಕ್ಕೆ ವ್ಯವಸಾಯಗಾರರಿಗೆ ಅತ್ಯಂತ ಮಹತ್ವದ ಸಾಧನವಿರುವದು. ನಮ್ಮ ದೇಶದಲ್ಲಿ ನೂರಾರು ವರ್ಷಗಳಿಂದ ಹುಂಡಿಯು ರೂಢಿಯಲ್ಲಿದ್ದರೂ ಅದರ ವಿಸ್ತಾರವು ನಾಕಷ್ಟು ಆಗಿಲ್ಲ. ಮತ್ತು ಸಾವುಕಾರರಾದರೂ ಅದರ ಪ್ರಯೋಜನವನ್ನು ತಿಳಿದಂತಿಲ್ಲ. ಸಣ್ಣ ಸಣ್ಣ ಸಾವುಕಾರರು ಒಟ್ಟುಗೂಡಿ ಹುಂಡಿಯ ವ್ಯವಹಾರವನ್ನು ಚೆನ್ನಾಗಿ ತಿಳಿಗುಕೊಂಡರೆ ಅವರಿಗಾದರೂ ತಮ್ಮ ಉದ್ಯೋಗವನ್ನು ಬೆಳಸಲಿಕ್ಕೆ ಉಪಯುಕ್ತವಾದದ್ದಿರುವದು. ತಮ್ಮ ಕೈಸೇರಿದ ಹುಂಡಿಗಳನ್ನು ಬ್ಯಾಂಕಿನವರಿಗೊಪ್ಪಿಸಿದಾಗ ಸಾವುಕಾರರ ಯೋಗ್ಯತೆಯ ಮೇರೆಗೆ ಅವರಿಂದ ಸುಲಭವಾಗಿ ಹಣವು ದೊರಕುವದು. ಅದೇ ಹಣವನ್ನು ಅವರು ತಮಗೆ ಪರಿಚಿತರಿದ್ದ ಮಿಕ್ಕ ವ್ಯವಸಾಯಗಾರರಿಗೆ ಸಾಲವಾಗಿ ಕೊಡಬಹುದು. ಆದ್ದರಿಂದ ಮಿಕ್ಕ ವ್ಯವಸಾಯಗಾರರೂ, ರೈತರೂ ಮತ್ತು ಸಾವಕಾರರೂ ಸಂಘಟಿತರಾಗಿ ಹುಂಡಿಯ ಪ್ರಯೋಗವನ್ನು ರೂಢಿಯಲ್ಲಿ ತರಬೇಕೆಂದು ನಾವು ಆಗ್ರಹದಿಂದ ಸೂಚಿಸುವೆವು.

## ಸರಕಾರದ ವಿಶ್ವಾಸಪತ್ರಗಳ ತಾರಣದ ಮೇಲಿನ ಸಾಲವು

ಸರಕಾರದ ವಿಶ್ವಾಸಪತ್ರಗಳಲ್ಲಿ ಕೇವಲ ಸರಕಾರದವರೇ ಸಾಲವನ್ನು ಜನರ ಕಡೆಯಿಂದ ಪಡೆದ ಬಗ್ಗೆ 'ಪ್ರಾಮಿಸರಿ ನೋಟ್ಸ' ಸ್ವರೂಪದ್ದಿದ್ದರೂ ಇತರ ಸ್ಥಾನಿಕ ಸಂಸ್ಥೆಗಳು, ಪೋರ್ಟ ಟ್ರಸ್ಟ ಇತ್ಯಾದಿ ಸಂಸ್ಥೆಗಳಾದರೂ ಸಾಲವನ್ನು ಪಡೆದ ಬಗ್ಗೆ ಮುದ್ರಿಸಿದ ಕಾಗದಗಳಾದರೂ ಸಮಾವಿಷ್ಟವಾಗು ವವು. ಈ ಪ್ರಕಾರದ ಕಾಗದಗಳನ್ನು ಮುದ್ರಿಸುವ ಬಗ್ಗೆ ಈ ಸಂಸ್ಥೆಗಳಿಗೆ ಸರಕಾರದವರು ಅಪ್ಪಣೆ ಕೊಟ್ಟಿರುವರು, ಮತ್ತು ಸಾಲವು ತಿರುಗಿ ಕೊಡ ಲಾಗುವದಕ್ಕೆ ಸರಕಾರದವರ ಅನುಮತಿಯಿದ್ದದರಿಂದ ಬ್ಯಾಂಕಿನವರು ತಾರಣವಾಗಿ ಈ ಕಾಗದಗಳನ್ನು ಕೂಡಲೇ ಸ್ವೀಕರಿಸುವರು. ಕಾರಣ. ಪೇಟೆಯಲ್ಲಿ ಅವುಗಳ ಕ್ರಯದಲ್ಲಿ ವಿಶೇಷ ಹೆಚ್ಚುಕಡಿಮೆ ಆಗಲಾರದ್ದ ರಿಂದ ಇವುಗಳನ್ನು ಬ್ಯಾಂಕಿನವರು ಸುರಕ್ಷಿತವಾಗಿ ಸ್ವೀಕರಿಸಬಲ್ಲರು. ಮಾತ್ರ, ರಾಜಕೀಯ ಆಂದೋಲನದ ಕಾಲದಲ್ಲಿ ಬೆಲೆಗಳು ಅಸ್ಥಿರ ವಿರುವದರಿಂದ ಆ ಸಮಯಕ್ಕೆ ಬ್ಯಾಂಕಿನವರು ಜಾಗೃತರಾಗಿರುವದು ಅವಶ್ಯ ವಿರುವದು. ಸಾಮಾನ್ಯ ಪರಿಸ್ಥಿತಿಯಲ್ಲಿ ೧೦೦ ರೂಪಾಯಿ ಬೆಲೆಯುಳ್ಳ ವಿಶ್ವಾಸಪತ್ರದಲ್ಲಿ ತಾರಣದ ಮೇಲೆ ೯೦ ರೂಪಾಯಿತನಕ ಸಾಲವು ದೊರಕ ಬಹುದು. ಇತರ ಸಂಸ್ಥೆಗಳ ವಿಶ್ವಾಸಪತ್ರಗಳು ಸಮಾನವಾಗಿ ಬೆಲೆಯುಳ್ಳ ವಿದ್ದರೂ ಅವುಗಳ ತಾರಣದ ಮೇಲೆ ೭೦ ರೂ. ಗಳಿಂದ ೮೦ ರೂ. ಗಳ ವರೆಗೆ ಸಾಲವು ದೊರಕಬಹುದು.

ಸರಕಾರದ ವಿಶ್ವಾಸಪತ್ರಗಳು ಮೂರು ತರಹದವು ಇರುವವು. (೧) 'ಬೇಅರರ್ ಬಾಂಡ' (೨) 'ಸ್ಟಾಕ್ ಸರ್ಟಿಫಿಕೇಟ' (೩) 'ಪ್ರಾಮಿಸರಿ ನೋಟ್ಸ'. ಮೊದಲಿನ ಎರಡು ಪ್ರಕಾರದ ವಿಶ್ವಾಸಪತ್ರಗಳು ವಿಶೇಷ ಉಪಯೋಗದಲ್ಲಿಲ್ಲ. 'ಬೆಅರರ್ ಬಾಂಡ್ಸ'ಗಳಲ್ಲಿ ಮಾಲಕರ ಹೆಸರು ಬರೆದಿರುವದಿಲ್ಲ. ಯಾರ ಆಧೀನದಲ್ಲಿ 'ಬಾಂಡ್ಸ' ಇರುವವೋ ಅವರೇ ಮಾಲಕರೆಂದು ತಿಳಿಯಲಾಗುವದು. ಅವುಗಳ ಬಡ್ಡಿಯ ಬಗ್ಗೆ ಆ ಕಾಗದ ಗಳಿಗೆ ಹೊಂದಿ 'ಕೂಪನ್ಸ' ಇರುವವು. 'ಬೆಅರರ್' ಚೆಕ್ಕಿನಂತೆ ಬಡ್ಡಿ ಯನ್ನು ವಸೂಲಿ ಮಾಡುವ ಕಾಲಕ್ಕೆ ತುಣುಕು ಹರಕೊಂಡು ಹಣವನ್ನು

ದೊರಕಿಸಬಹುದು. ‘ಸ್ಟಾಕ್ ಸರ್ಟಿಫಿಕೇಟ್ಸ್’ ಕೇವಲ ಪಾವತಿಯ ತರಹದ್ದಿರುವವು. ಅವುಗಳ ಮಾಲಕರ ಹೆಸರು ಆ ಆ ಕಚೇರಿಯ ಪುಸ್ತಕದಲ್ಲಿ ರಜಿಸ್ಟರ ಮಾಡಿಸಬೇಕಾಗುವದು. ಅದರ ಹೊರತು ಮಾಲಕಿಯ ಹಕ್ಕು ಸಿಗುವಂತಿಲ್ಲ. ಇವುಗಳನ್ನು ತಾರಣವನ್ನಾಗಿ ಹಿಡಿಯಬೇಕಾದರೆ ಬ್ಯಾಂಕಿನವರು ಅವುಗಳಿಗೆ ಹೊಂದಿ ‘ಟ್ರಾನ್ಸಫರ್ ಡೀಡ್’ದ ಮೇಲೆ ಮಾಲಕರ ಸಹಿಯನ್ನು ದೊರಕಿಸಿ ತಮ್ಮ ಬ್ಯಾಂಕಿನ ಹೆಸರನ್ನು ಸರಕಾರದ ಕಚೇರಿಯಲ್ಲಿ ರಜಿಸ್ಟರ ಮಾಡಿಸಿಕೊಳ್ಳುವರು. ‘ಬೇರರ್ ಬಾಂಡ್ಸ್’ ಇಟ್ಟುಕೊಳ್ಳಲಿಕ್ಕೆ ಸಾಕಷ್ಟು ಸುರಕ್ಷಿತವಲ್ಲದ್ದರಿಂದ ಮತ್ತು ‘ಸ್ಟಾಕ ಸರ್ಟಿಫಿಕೇಟ್ಸ್’ಗಳ ಹಕ್ಕಿನ ವಿಷಯವು ಸುಲಭವಲ್ಲದ್ದರಿಂದ ಇವೆರಡು ಕಾಗದಗಳಿಗಿಂತ ಸರಕಾರದ ‘ಪ್ರಾಮಿಸರಿ ನೋಟ್ಸ್’ ಬಹಳವಾಗಿ ರೂಢಿಯಲ್ಲಿರುವವು. ಅವುಗಳ ಮಾಲಕಿ ಹಕ್ಕು ಆ ಪತ್ರದ ಹಿಂಭಾಗದಲ್ಲಿ ಮುದ್ರಿಸಿದ ಸ್ಥಳದಲ್ಲಿ ಮಾಲಕರು ಸಹಿಯನ್ನು ಮಾಡಿದರೆ ಎರಡನೆಯವರಿಗೆ ದೊರಕಬಹುದಾದದ್ದಿರುವದು. ಬಡ್ಡಿಯ ಹಣವನ್ನು ದೊರಕಿಸುವ ಕಾಲಕ್ಕೆ ವಿಶ್ವಾಸಪತ್ರಗಳನ್ನು ಪ್ರತ್ಯಕ್ಷ ಹಾಜರ ಮಾಡಿಸಬೇಕಾಗುತ್ತದೆ. ಮತ್ತು ವಿಶ್ವಾಸಪತ್ರದ ಮುಖಭಾಗದಲ್ಲಿ ಮುದ್ರಿಸಿದ ‘ಟ್ರೆಝರಿ’ ಕಚೇರಿಯಲ್ಲಿಯೇ ಬಡ್ಡಿಯ ಹಣವು ದೊರಕುವದು.

ಸರಕಾರದ ‘ಪ್ರಾಮಿಸರಿ ನೋಟ್ಸ್’ಗಳನ್ನು ತಾರಣವಾಗಿ ಸ್ವೀಕರಿಸುವಾಗ ಬ್ಯಾಂಕಿನವರು ನೋಟುಗಳು ತಕ್ಕ ಸ್ಥಿತಿಯಲ್ಲಿದ್ದ ಬಗ್ಗೆ ಕ್ರಮವಾಗಿ ಪರೀಕ್ಷಿಸುವರು. (೧) ವಿಶ್ವಾಸಪತ್ರಗಳಲ್ಲಿ ಯೋಗ್ಯ ರೀತಿಯಿಂದ ಸಹಿ ಮಾಡಿಸಿಕೊಳ್ಳುವರು. (೨) ಮಾಲಕರು ವಿಶ್ವಾಸಪತ್ರಗಳನ್ನು ಬ್ಯಾಂಕಿಗೆ ಕೊಡುವ ಸಮಯಕ್ಕೆ ಅವುಗಳ ಪೂರ್ವಸ್ಥಿತಿಯ ಬಗ್ಗೆ ಯಾವದೂ ಅಧಿಕಾರಿಗಳು ಸೂಕ್ಷ್ಮವಾಗಿ ಪರೀಕ್ಷಿಸುವರು. ಅಂದರೆ ನೋಟುಗಳನ್ನು ಕೊಡಬಲ್ಲ ಮಾಲಕರ ಪೂರ್ವದಲ್ಲಿ ಯಾರು ಮಾಲಕರಿದ್ದರು, ಅವರ ಪೂರ್ವದಲ್ಲಿ ಯಾರಿದ್ದರು, ಅವರೆಲ್ಲರೂ ತಕ್ಕ ಸ್ಥಳದಲ್ಲಿ ಯೋಗ್ಯವಾಗಿ ಸಹಿಯನ್ನು ಮಾಡಿದ ಬಗ್ಗೆ ಬ್ಯಾಂಕಿನವರಿಗೆ ನಿಶ್ಚಿತವಾಗಿ ಗೊತ್ತಿರುವದು ಅವಶ್ಯವಾದದ್ದಿರುವದು. (೩) ಈ ಮೇರೆಗೆ ಎಲ್ಲ ಸಹಿಗಳು ಒಂದಕ್ಕೊಂದು ಹೊಂದಿದ್ದಿರ

ಜೇಕಾಗುವವು. (೪) ಆ ಕಾಗದವು ಅನೇಕರ ಕೈಯಿಂದ ಬಂದದ್ದರಿಂದ ಎಲ್ಲರೂ ಕಾಡಿಟ್ಟ ಸ್ಥಳದಲ್ಲಿಯೇ ಸಹಿಗಳನ್ನು ಮಾಡಿರಬೇಕು. (೫) ಮಾಲಕರು ಬ್ಯಾಂಕಿನವರ ಹೆಸರು ಬರೆಯಲಿಕ್ಕೆ ಮತ್ತು ತಿರುಗಿ ಬ್ಯಾಂಕಿನವರು ಮಾಲಕರಿಗೆ ಕೊಡಲಿಕ್ಕೆ ಸಹಿಯನ್ನು ಮಾಡುವ ಬಗ್ಗೆ ಎರಡು ಸ್ಥಳಗಳಾದರೂ ಉಳಿದಿದ್ದಿರಬೇಕು. ಕಾಗದದ ಹಿಂಭಾಗವು ಸಹಿಗಳಿಂದ ತುಂಬಿಹೋಗುವಂತೆ ಕಂಡರೆ ಬ್ಯಾಂಕಿನವರು ಅದನ್ನು 'ಪಬ್ಲಿಕ್ ಡೆಟ್' ಕಚೇರಿಗೆ ಕಳಿಸಿ ಹೊಸ ಕಾಗದವನ್ನು ದೊರಕಿಸುವರು. (೬) 'ಪ್ರಾಮಿಸರಿ ನೋಟ್ಸ್'ಗಳ ಬಡ್ಡಿಯು ವಸೂಲಾದದ್ದನ್ನೂ ನೋಡಲಾಗುವದು.

ಈ ರೀತಿಯಿಂದ ಸರಕಾರದ ವಿಶ್ವಾಸಪತ್ರಗಳನ್ನು ತೆಗೆದುಕೊಂಡ ನಂತರ ಬ್ಯಾಂಕಿನವರು ಸ್ಟಾಂಪ್ ಕಾಗದದ ಮೇಲೆ ಖಾತೇದಾರರಿಂದ ಒಂದು ತಾರಣಪತ್ರವನ್ನು ಮಾಡಿಸಿಕೊಳ್ಳುವರು. ಅದರಿಂದ ಬ್ಯಾಂಕಿನವರಿಗೆ ತಾರಣದ ಹಕ್ಕು ಸಿಗುವದು ಮತ್ತು ಪ್ರಸಂಗ ಬಂದಂತೆ ಸಾಲದ ಹಣವನ್ನು ತಿರುಗಿ ಬೇಡುವ ಅಧಿಕಾರವು ಹಾಗೂ ಮಾರುವ ಅಧಿಕಾರವು ದೊರಕುವದು. ತಾರಣವನ್ನಿಟ್ಟುಕೊಂಡ ವಿಶ್ವಾಸಪತ್ರಗಳ ಬಡ್ಡಿಯನ್ನು ಬ್ಯಾಂಕಿನವರು ತಕ್ಕ ಸಮಯಕ್ಕೆ ವಸೂಲ ಮಾಡಿಕೊಡುವರು. ಇದೇ ಮಾರ್ಗದಿಂದ ಅವರು ಸ್ಥಾನಿಕ ಸಂಸ್ಥೆಗಳ ವಿಶ್ವಾಸಪತ್ರಗಳ ತಾರಣದ ಮೇಲೆಯಾದರೂ ಸಾಲವನ್ನು ಕೊಡುವರು.

## ಕಂಪನಿ ಶೇಅರುಗಳ ತಾರಣವು

ದೇಶದಲ್ಲಿಯ ವ್ಯಾಪಾರೋದ್ಯೋಗದ ಬೆಳವಣಿಗೆಯ ಪ್ರಮಾಣಕ್ಕನುಸರಿಸಿ ಅಲ್ಲಲ್ಲಿ ಲಿಮಿಟೆಡ್ ಕಂಪನಿಗಳು ಬೆಳೆದವು. ಅವುಗಳಲ್ಲಿ ಕೆಲವು ಅತ್ಯುತ್ತಮ ಕಂಪನಿಗಳಿದ್ದು ಕಂಪನಿಗಳು ತೀರ ಅಯೋಗ್ಯವಾದವುಗಳೂ ಇರುವವು. ಜನರಿಗೆ ತಮ್ಮ ಹತ್ತರಿದ್ದ ಹೆಚ್ಚಿನ ಹಣವನ್ನು ಸುರಕ್ಷಿತವಾಗಿ ತೊಡಕಿಸುವದಕ್ಕಾಗಿ ಈ ಮಾರ್ಗವು ದೊರಕಿದೆ. ಆದರೆ ತಾತ್ಪೂರ್ತಿಕ ಕಾಲ ಬಾಳುವೆ ಮಾಡಿ ಹಾಳಾಗಿ ಹೋದ ಕಂಪನಿಗಳಾದರೂ ಅನೇಕವಿರು

ದರಿಂದ ಕೇವಲ ಬಡ್ಡಿಯ ಆಶೆಗೋಸ್ಕರವಾಗಿ ಸಿಕ್ಕ ಕಡೆಯಲ್ಲಿ ಹಣವನ್ನು ಹಾಕಿದವರು ಅನೇಕರಿರುವರು. ಇತರರಂತೆ ಬ್ಯಾಂಕಿನವರಾದರೂ ತಮ್ಮ ಹಣವನ್ನು ಇದೇ ಮೇರೆಗೆ ತೊಡಗಿಸುವವರಿದ್ದುದರಿಂದ ಕಂಡಕಂಡ ಕಂಪನಿಗಳ ಶೇಅರುಗಳನ್ನು ತಾರಣವನ್ನಾಗಿ ಸ್ವೀಕರಿಸಿ ಠೇವುದಾರರ ಹಣವನ್ನು ಗಂಡಾಂತರದಲ್ಲಿ ಹಾಕಲಾರರು. ಅನೇಕ ಕಂಪನಿಯ ಭಾಗೀದಾರರು ಸಾಲದಗೋಸುಗ ತಮ್ಮ ಹತ್ತರಿದ್ದ ಅನೇಕ ಕಂಪನಿಗಳ ಶೇಅರುಗಳನ್ನು ಬ್ಯಾಂಕಿಗೆ ಒಪ್ಪಿಸುವರಾದ್ದರಿಂದ, ಬ್ಯಾಂಕಿನವರು ತಕ್ಕ ಕಂಪನಿಯ ಶೇಅರುಗಳನ್ನೇ ಆರಿಸುವದು ಸಹಜವಾದ ಮಾತು. ಇದು ತಕ್ಕಮಟ್ಟಿಗೆ ಸಾಧ್ಯವಾಗುವದಕ್ಕೆ, ಅವರೊಂದು ಶೇಅರುಗಳ ಯಾದಿಯನ್ನು ತಯಾರಿಸುವರು. ಅದರಲ್ಲಿರುವ ಕಂಪನಿಗಳ ಶೇಅರುಗಳಷ್ಟೇ ವ್ಯವಹಾರದಲ್ಲಿ ಬರುವವು. ತಮಗೆ ಅಪರಿಚಿತವಿದ್ದ ಶೇಅರುಗಳನ್ನು ತಾರಣಕ್ಕೆ ಯೋಗ್ಯವೆಂದು ಲೆಕ್ಕಿಸುವ ಪೂರ್ವದಲ್ಲಿ ಆ ಕಂಪನಿಗಳ ಸಾಧಾರಣ ವಸ್ತುಸ್ಥಿತಿಯನ್ನು ಅವುಗಳ ತಾಳೇಬಂದುಗಳ (Balance Sheets) ಪರಿಶೀಲನದ ಮೇಲಿಂದ ತಿಳಿದುಕೊಳ್ಳುವರು. ಕಂಪನಿಯು ಮಾಡತಕ್ಕ ವ್ಯವಹಾರವು, ಅದರ ಉತ್ಪಾದನವು, ಅದರ ಪೂರ್ವದಲ್ಲಿ ಕೊಡುತ್ತಿದ್ದ ಬಡ್ಡಿಯ ದರವು ಮತ್ತು ಮುಂದಾದರೂ ಬಡ್ಡಿಯನ್ನು ಕೊಡಬಲ್ಲ ಸಾಧ್ಯಾಸಾಧ್ಯತೆಯು ಈ ವಿಷಯಗಳ ಮೇಲಿಂದ ಆ ಕಂಪನಿಯ ಪಾತ್ರತೆಯನ್ನು ಗೊತ್ತುಮಾಡಿಕೊಳ್ಳುವರು. ಈ ಮೇರೆಗೆ ಕಂಪನಿಯು ಯೋಗ್ಯ ಕಂಡರೂ ಸಹಿತ ಅದರ ಶೇಅರುಗಳು ದಿನದ ವ್ಯವಹಾರದಲ್ಲಿರುವದಿಲ್ಲ. ಮಾರುವವರಿಗೆ ಕೊಳ್ಳುವವರು ಸಿಗುವದಿಲ್ಲ. ಕೊಳ್ಳುವವರಿಗೆ ಮಾರುವವರು ಸಿಗುವದಿಲ್ಲ. ಆದ್ದರಿಂದ ಇಂಥ ಶೇಅರುಗಳನ್ನು ಸಂತೋಷದಿಂದ ಸ್ವೀಕರಿಸಲಾರರು. ಯಾವ ವಸ್ತುವಿನ ಮಾರಾಟವು ತಾತ್ಕಾಲ ಆಗುವದೆಂಬುದರ ಬಗ್ಗೆ ನಿಶ್ಚಿತವಿರುವದೋ ಅದೊಂದೇ, ಬ್ಯಾಂಕಿನ ಸಾಲಕ್ಕೆ ಯೋಗ್ಯವಾದದ್ದೆಂದು ತಿಳಿಯಬೇಕು. ಕಾರಣ ಈ ತರದ ವ್ಯವಹಾರವನ್ನು ಹತ್ತರಿದ್ದವರು ದಿನಾಲು ಮಾಡುತ್ತಿರುವದರಿಂದ ಶೇಅರುಗಳ ಕ್ರಯವು ಕೂಡಲೆ ಗೊತ್ತಾಗುವದು. ಅದರಿಂದ ಬ್ಯಾಂಕಿನವರಿಗಾದರೂ ತಾವು ಅಂಥ ಶೇಅರುಗಳ ತಾರಣದ ಮೇಲೆ ಕೊಟ್ಟ ಸಾಲವು ಅಬಾಧಿತವಿದ್ದದ್ದು ದಿನದಿನಕ್ಕೆ ತಿಳಿಯುವದು.

ಮೇಲೆ ವಿವರಿಸಿದ ಮೇರೆಗೆ ಕಂಪನಿಗಳ ಪಾತ್ರತೆಯನ್ನು ಗೊತ್ತು ಮಾಡಿದ ನಂತರವೇ ಶೇರ ಪೇಟೆಯಲ್ಲಿ ಎಷ್ಟೋ ಕಂಪನಿಗಳ ಶೇರುಗಳ ವ್ಯವಹಾರವು ಪ್ರತಿದಿನ ನಡೆಯುವದು. ಶೇರ ಪೇಟೆಗಳು ಕೆಲವು ವಿಶಿಷ್ಟ ಪಟ್ಟಣಗಳಲ್ಲಿ ಮಾತ್ರ ಇರುವವು. ಪೇಟೆಗಳ ಅಧಿಕಾರಿಗಳು ಸರಕಾರದಿಂದ ತಮ್ಮಲ್ಲಿಯ ವ್ಯವಹಾರದ ಬಗ್ಗೆ ಮಾನ್ಯತೆಯನ್ನು ದೊರಕಿಸಿದ್ದರಿಂದ ಅಲ್ಲಿ ನಡೆದ ವ್ಯವಹಾರವು ಕಾಯಿದೆಯ ದೃಷ್ಟಿಯಿಂದ ಮಾನ್ಯವಾದದ್ದಿರುವದು. ಈ ಪೇಟೆಯಿಂದ ಗೊತ್ತುಪಡಿಸಿದ ಶೇರುಗಳ ಬೆಲೆಯು ವಿಶ್ವಸನೀಯವಾದದ್ದು. ಈ ರೀತಿಯಿಂದ ಪೇಟೆಯಲ್ಲಿಯ ವ್ಯವಹಾರದಲ್ಲಿದ್ದ ಶೇರುಗಳು ಬ್ಯಾಂಕಿನ ಸಾಲಕ್ಕೆ ಯೋಗ್ಯ ತಾರಣವೆಂದು ಯಾರಾದರೂ ಹೇಳಬಹುದು. ಕೆಲವು ಕಂಪನಿಗಳ ಬೆಲೆಯುಳ್ಳ ಭಾಗಗಳನ್ನು ಕೆಲವು ಜನರು ಬಿಗಿಹಿಡಿದಿಡುವದರಿಂದ ಅವುಗಳ ವ್ಯವಹಾರವು ಆಗುವದಿಲ್ಲ. ಇಂಥ ಶೇರುಗಳು ಅತಿ ಮಹತ್ವವಾದದ್ದಿದ್ದರೂ ತಾರಣಕ್ಕೆ ತಕ್ಕದ್ದಾಗಲಾರವು.

ಇವೆಲ್ಲ ಸಂಗತಿಗಳನ್ನು ಧ್ಯಾನದಲ್ಲಿಟ್ಟು, ಬ್ಯಾಂಕಿನವರು ತಮ್ಮದೊಂದು ಶೇರುಗಳ ಯಾದಿಯನ್ನು ತಯಾರಿಸುವರು. ಅದರಲ್ಲಿಯ ಪ್ರತಿಯೊಂದು ಶೇರಿನ ಪೇಟೆಯ ಧಾರಣೆಯ ಪ್ರಮಾಣಕ್ಕನುಸರಿಸಿ ತಾವು ಕೊಡಬಲ್ಲ ಸಾಲದ ಹಣವನ್ನಾದರೂ ಹಾಕುವರು. ಪೇಟೆಯ ಬೆಲೆಯು ಆಗಾಗ್ಗೆ ಹೆಚ್ಚುಕಡಿಮೆ ಆದಂತೆ ಸಾಲದ ಹಣವನ್ನಾದರೂ ಬದಲಿಸುವರು. ಧನಾಢ್ಯ ವ್ಯಾಪಾರಿಗರು ಶೇರುಗಳಲ್ಲಿ ಜೂಜಾಡುವದು ಕಂಡುಬರುವದು. ಅವರು ತಮಗೆ ಯೋಗ್ಯ ಕಂಡಂತೆ ಅನೇಕ ಶೇರುಗಳ ವ್ಯವಹಾರವನ್ನು ಈ ಪ್ರಕಾರದ ವ್ಯವಹಾರದಲ್ಲಿ ತರುವರು. ಆದ್ದರಿಂದ, ಅವುಗಳ ಬೆಲೆಯು ವಿನಾಕಾರಣ ದಿನದಿನಕ್ಕೆ ಹೆಚ್ಚುತ್ತ ಇಲ್ಲವೆ ಇಳಿಯುತ್ತಿರುವದು. ಇಂಥ ಶೇರುಗಳನ್ನು ಬ್ಯಾಂಕಿನವರು ತೀರ ದಕ್ಷತೆಯಿಂದ ನೋಡಬೇಕಾಗುವದು. ಮತ್ತು ಅವುಗಳ ತಾರಣದ ಮೇಲೆ ತೀರ ಕಡಿಮೆ ಹಣವನ್ನು ಕೊಡುವರು. ಅದರಂತೆಯೇ ಕೆಲವು ಶೇರುಗಳ ಬಡ್ಡಿಯ ದರವು ಅಸ್ಥಿರವಿದ್ದದ್ದು ಕಂಡು ಬಂದರೆ ಅವುಗಳ ಪೇಟೆಯ ಬೆಲೆಯಾದರೂ ಅಸ್ಥಿರವಾಗುವದರಿಂದ, ಅವನ್ನಾದರೂ ತೀರ ಕಡಿಮೆ ಹಣವನ್ನು ಕೊಟ್ಟು ಸ್ವೀಕರಿಸುವರು. ಈ ವಿಚಾ

ರದ ಮೇರೆಗೆ ಸರಕಾರದ ಇಲ್ಲವೆ ಸರಕಾರದ ಮಾನ್ಯತೆ ಪಡೆದ ಸ್ಥಾನಿಕ ಸಂಸ್ಥೆಗಳ ವಿಶ್ವಾಸಪತ್ರಗಳ ಬಡ್ಡಿಯ ದರವನ್ನು ಸ್ಥಿರಪಡಿಸಿದ್ದರಿಂದ ಅವುಗಳ ಬೆಲೆಯಾದರೂ ಸ್ಥಿರವಾದದ್ದಿರುವದನ್ನು ಕಂಡು ಅವುಗಳ ತಾರಣದ ಮೇಲೆ ಬ್ಯಾಂಕಿನವರು ಹೆಚ್ಚು ಹಣವನ್ನು ಕೊಡಬಲ್ಲರು. ಕೆಲವು ಕಂಪನಿಯವರು ಬೇರೆ ಬೇರೆ ತರಗತಿಯ ಶೇಅರಗಳನ್ನು ಮಾಡಿರುವರು. ಅವುಗಳಲ್ಲಿ ಮೇಲ್ತರದ ಶೇಅರುಗಳು (Preference Shares) ಮತ್ತು ಸಾಮಾನ್ಯ ಶೇಅರಗಳು (Ordinary Shares) ಇರುವವು. ಮೇಲ್ತರದ ಶೇಅರುಗಳ ಬಡ್ಡಿಯ ದರವು ಸ್ಥಿರಪಡಿಸಿದ್ದಿರುವದು. ಕಂಪನಿಯ ಲಾಭದ ಹಣದಿಂದ ಹಂಚಬಹುದಾದ ಬಡ್ಡಿಯು ಮೊದಲು ಮೇಲ್ತರದ (Preferance) ಭಾಗೀದಾರರಿಗೆ ಕೊಡಲಾಗುವದು. ಆ ಪ್ರಮಾಣದಿಂದ ಆ ಕಂಪನಿಯ ಸಾಮಾನ್ಯ (Ordinary) ಭಾಗೀದಾರರಿಗೆ ಕಡಿಮೆ ಹಣವು ಸಿಗಬಹುದು. ಆದ್ದರಿಂದ ಇಂಥ ಮೇಲ್ತರದ ಶೇಅರುಗಳು ತಾರಣದ ಸಲುವಾಗಿ ಯೋಗ್ಯವಿದ್ದು, ಅವುಗಳ ತಾರಣದ ಮೇಲೆ ಬ್ಯಾಂಕಿನವರು ಹೆಚ್ಚಿನ ಸಾಲವನ್ನು ಕೊಡುವರು.

ಭಾತೇದಾರರು ಶೇಅರ ಸರ್ಟಿಫಿಕೇಟುಗಳನ್ನು ಬ್ಯಾಂಕಿನವರಿಗೆ ಕೊಟ್ಟ ಕೂಡಲೆ ಅವರು ಅವುಗಳನ್ನು ಪರೀಕ್ಷಿಸುವರು. ಕೆಲವು ಶೇಅರುಗಳ ಹಣವನ್ನು ಕಂಪನಿಯವರು ಕಂತಿನ ಪ್ರಕಾರ ವಸೂಲ ಮಾಡುವರಾದ್ದರಿಂದ ಭಾಗೀದಾರರು ಕಂಪನಿಯವರು ಬೇಡಿದಂತೆ ಹಣವನ್ನು ಕೊಡಬೇಕು. ಈ ಪ್ರಕಾರ ಹಣವು ಮುಟ್ಟಿದ ಬಗ್ಗೆ ಸರ್ಟಿಫಿಕೇಟದ ಹಿಂಭಾಗದಲ್ಲಿ ಕಂಪನಿಯವರು ಬರೆಯುವರು. ಹಣವನ್ನು ಕೊಡದಿದ್ದರೆ ಶೇಅರುಗಳನ್ನು ರದ್ದುಪಡಿಸುವ ಅಧಿಕಾರವು ಕಂಪನಿಯವರಿಗೆ ಇದ್ದುದರಿಂದ ಮತ್ತು ಈ ರೀತಿಯಿಂದ ರದ್ದುಮಾಡಿದ ಶೇಅರುಗಳು ನಿರರ್ಥಕವಾಗುವವು. ಕಾರಣ ಬ್ಯಾಂಕಿನವರು ಈ ವಿಷಯದ ಬಗ್ಗೆ ಪೂರ್ಣವಾಗಿ ನೋಡಿಕೊಂಡು ನಂತರ ಅವುಗಳನ್ನು ಸ್ವೀಕರಿಸುವರು. ಕೆಲವು ಶೇಅರುಗಳ ಹಣವನ್ನು ಕಂಪನಿಯವರು ಪೂರ್ಣವಾಗಿ ವಸೂಲಮಾಡದೆ ಅದರ ಕೆಲವು ಭಾಗವನ್ನೇ ವಸೂಲ ಮಾಡುವರು. ಇನ್ನೂ ವಸೂಲಾಗತಕ್ಕ ಹಣದ ಮೇಲೆ ಕಂಪನಿಯವರ ಪೂರ್ಣ ಹಕ್ಕು ಇರುವದು. ಈ ತರದ ಭಾಗಗಳನ್ನು ಬ್ಯಾಂಕಿನವರು ತಾರಣವಾಗಿ ಸ್ವೀಕರಿ

ಸಿದಾಗ, ಭಾಗೀದಾರರು ತಮ್ಮ ಕಂತನ್ನು ಕಂಪನಿಯವರು ಬೇಡಿದಾಗ ಕೊಡದಿದ್ದರೆ, ತಾವು ಸ್ವೀಕರಿಸಿದ ತಾರಣವು ಅಬಂಧಿತವಾಗಿರುವಗೋಸುಗ ಬ್ಯಾಂಕಿನವರಿಗೆ ಕಂತು ತುಂಬುವ ಪ್ರಸಂಗಬರುವದು. ಆದ್ದರಿಂದ ಬ್ಯಾಂಕಿನವರು ಇಂಥ ಶೇಅರುಗಳನ್ನು ನಿರಾಕರಿಸುವರು.

ಶೇಅರುಗಳನ್ನು ತಾರಣವಾಗಿ ಸ್ವೀಕರಿಸುವ ಸಮಯಕ್ಕೆ ಬ್ಯಾಂಕಿನವರು ಖಾತೇದಾರರಿಂದ ಶೇಅರುಗಳನ್ನು ಇಟ್ಟ ಬಗ್ಗೆ, ಅವುಗಳ ಬೆಲೆಯು ಶೀರ ಕಡಿಮೆಯಾದರೆ ಪ್ರಸಂಗಕ್ಕನುಸರಿಸಿ ಅವುಗಳನ್ನು ಮಾರುವ ಬಗ್ಗೆ, ಅವುಗಳ ಬೆಲೆಯು ಹೆಚ್ಚುಕಡಿಮೆ ಆದಂತೆ ಸಾಲದ ಹಣವಾದರೂ ಹೆಚ್ಚು ಕಡಿಮೆ ಆಗಬಹುದೆಂಬದರ ಬಗ್ಗೆ, ಮತ್ತು ಭಾಗಗಳು ಅಪೂರ್ಣವಾಗಿ ವಸೂಲಾಗಿದ್ದಾಗ, ಉಳಿದ ಹಣವನ್ನು ತಮಗೋಸುಗ ಕೊಡುವಬಗ್ಗೆ ಒಂದು ವಿಸ್ತೃತ ಪತ್ರವನ್ನು ಯೋಗ್ಯ ಸ್ಟ್ಯಾಂಪುಕಾಗದದ ಮೇಲೆ ಬರೆಯಿಸಿ ಕೊಳ್ಳುವರು. ಇದಕ್ಕೆ ಹೊಂದಿಸಿ ಶೇಅರುಗಳನ್ನು ತಾರಣವನ್ನಾಗಿಡುವವರಿಂದ ಕೆಲವು ಕೋರಾ 'ಟ್ರಾನ್ಸಫರ್' ಫಾರ್ಮಿನ ಮೇಲೆ ಅವರ ಸಹಿಯನ್ನು ತೆಗೆದುಕೊಂಡು ಆ ಫಾರ್ಮುಗಳನ್ನು ಶೇಅರ-ಸರ್ಟಿಫಿಕೇಟುಗಳಿಗೆ ಹಚ್ಚಿ ಇಟ್ಟುಕೊಳ್ಳುವರು. ಇಲ್ಲದಿದ್ದರೆ ಆ ಶೇಅರುಗಳನ್ನು ಬ್ಯಾಂಕಿನ ಹೆಸರಿನಲ್ಲಿ ಕಂಪನಿಯ ಕಡೆಯಿಂದ ರಜಿಸ್ಟರ ಮಾಡಿಸಿಕೊಳ್ಳುವರು. 'ಟ್ರಾನ್ಸಫರ್' ಫಾರ್ಮುಗಳನ್ನು ಬ್ಯಾಂಕಿನವರು ತಾರೀಖು ಹಾಕದೆ ಸಾಲವು ಮುಟ್ಟುವವರೆಗೆ ಇಡುವರು. ಕಾರಣ, ಕೆಲವು ಅವಧಿಯ ನಂತರ ತಾರೀಖು ಹಾಕಿದ ಶೇಅರುಗಳು 'ಟ್ರಾನ್ಸಫರ್' ಆಗಲಾರವು. ಮತ್ತು ರಜಿಸ್ಟರ ಮಾಡದೆ ಇದ್ದ ಬಗ್ಗೆ ಕಂಪನಿಯವರು ಕಾರಣವನ್ನು ಕೇಳುವರು. ಖಾತೇದಾರರು 'ಟ್ರಾನ್ಸಫರ್' ಫಾರ್ಮುಗಳ ಮೇಲೆ ತಾವು ಕಂಪನಿಯವರಿಗೆ ಕೊಟ್ಟ ಸಹಿಯ ಮಾದರಿಯ ಮೇರೆಗೆ ಸಹಿಯನ್ನು ಗುರುತಿನವರೆದುರಿಗೆ ಮಾಡಿ ಅವರ ಸಾಕ್ಷಿಯನ್ನಾದರೂ ಹಾಕಿಸಬೇಕು. ಪರಿಚಿತ ಖಾತೇದಾರರ ಹೊರತು ಇತರ ಜನರು ಪರಿಚಯವನ್ನು ತಕ್ಕರೀತಿಯಿಂದ ಕೊಟ್ಟಾಗಿಯೂ ಬ್ಯಾಂಕಿನವರು ತಮಗೆ ಒಪ್ಪಿಸಿದ ಶೇಅರುಗಳನ್ನು 'ಟ್ರಾನ್ಸಫರ್' ಫಾರ್ಮುಗಳೊಂದಿಗೆ ಕಂಪನಿಯ ಕಡೆಗೆ ಕಳಿಸಿ ತಮ್ಮ ಹೆಸರು ರಜಿಸ್ಟರ ಮಾಡಿಸಿಕೊಳ್ಳುವರು. ಉದಾಹರಣ, ಇನ್ನೊಬ್ಬರ ಆಸ್ತಿಗೆ ಟ್ರಸ್ಟಿಯಿದ್ದವರೊಬ್ಬರ

ಹತ್ತರಿದ್ದ ಶೇರುಗಳನ್ನು ಬ್ಯಾಂಕಿನವರಿಗೆ ಸಾಲದ ತಾರಣವಾಗಿ ಕೊಟ್ಟರೆ ಮತ್ತು ಆ ಟ್ರಸ್ಟಿಗೆ ಈ ತರದಿಂದ ಶೇರುಗಳ ವ್ಯವಹಾರವನ್ನು ಮಾಡ ಲಶಕ್ಯವಿದ್ದದ್ದು ಕಂಡುಬಂದರೆ ಬ್ಯಾಂಕಿನವರ ಮಾಲಕಿಯ ಹಕ್ಕು ಅಬಾಧಿತ ಉಳಿಯುವದಿಲ್ಲ.

ಕೆಲವು ಕಾಲಕ್ಕೆ ಬ್ಯಾಂಕಿನವರು ಶೇರುಗಳನ್ನು ತಮ್ಮ ಹೆಸರಿನಲ್ಲಿ ರಜಿಸ್ಟರ ಮಾಡುವದಿಲ್ಲ. ಶೇರುಗಳ ಹಣವನ್ನು ಭಾಗೀದಾರರು ಕೆಲವು ಕಂತುಗಳಲ್ಲಿ ತುಂಬಿದ್ದು, ಇನ್ನೂ ಕೆಲವು ಕಂತುಗಳನ್ನು ತುಂಬಬೇಕಾದಾಗ, ಬ್ಯಾಂಕಿನವರ ಹೆಸರಿನಲ್ಲಿ ರಜಿಸ್ಟರಿದ್ದ ಶೇರುಗಳ ಉಳಿದ ರಕಮನ್ನು, ಬ್ಯಾಂಕಿನವರಿಗೆ ತುಂಬಬೇಕಾಗುವದು. ಮತ್ತು ಶೇರುಗಳಿಗೆ ಸಂಬಂಧಿಸಿದ 'ಟ್ರಾನ್ಸಫರ್' ಫಾರ್ಮಿನ ಮೇಲಿನ ಸಹಿಯು ಕಳ್ಳ ಸಹಿಯೆಂದು ತಿಳಿದರೆ ಅದರ ಬಗ್ಗೆಯಾದರೂ ಬ್ಯಾಂಕಿನವರೇ ಅವಕ್ಕೆ ಜೊಖೆಗಾರರಾಗುವರು.

ಅಂದರೆ, ಹೆಸರಿನಲ್ಲಿ ರಜಿಸ್ಟರ ಮಾಡಿಕೊಳ್ಳುವದರಲ್ಲಿ ಮತ್ತು ಮಾಡದೆ ಇರುವದರಲ್ಲಿ ದೋಷವಿರುವದರಿಂದ ಬ್ಯಾಂಕಿನವರು ತಮಗೆ ತಕ್ಕ ಕಂಡ ಯೋಗ್ಯ ಮಾರ್ಗವನ್ನು ಹಿಡಿಯುವರು.

ಖಾತೇದಾರರ ಹೆಸರಿನಲ್ಲಿಲ್ಲದ ಶೇರುಗಳ ಮೇಲೆ ಬ್ಯಾಂಕಿನವರು ಹಣ ಕೊಡಲಾರರು. ಪ್ರಮುಖ ಖಾತೇದಾರರಿಗೋಸುಗ ಒಮ್ಮೊಮ್ಮೆ ಬ್ಯಾಂಕಿನವರಿಗೆ ಹೀಗೆ ಮಾಡಲೇಬೇಕಾದಾಗ ಅವರು ಶೇರುಗಳು ರಜಿಸ್ಟರ ಇದ್ದದರಿಂದ ತಮ್ಮ ಮಾಲಕಿಯ ಹಕ್ಕು ಇಲ್ಲದ ಬಗ್ಗೆ ಪತ್ರವನ್ನು ಖಾತೇ ದಾರರು ಬ್ಯಾಂಕಿನವರಿಗೆ ಒಪ್ಪಿಸಬೇಕು. ಬ್ಯಾಂಕಿನವರ ಕೈಯಲ್ಲಿ ಖಾತೇ ದಾರರ ಪರವಾಗಿ ಬಂದ ಶೇರುಗಳನ್ನು ಎರಡನೆಯ ಬ್ಯಾಂಕಿನವರಿಗೆ ತಾರಣವಾಗಿ ತಿರುಗಿ ಸಾಲವನ್ನು ದೊರಕಿಸುವದಕ್ಕೆ ಕೆಲವರು ಇಡಬಹು ದಾದ್ದರಿಂದ ಮತ್ತು ಶೇರುಗಳ ವ್ಯವಹಾರವನ್ನು ಮಾಡತಕ್ಕ ಸಾವಕಾರರು ತಮ್ಮ ಹತ್ತರಿದ್ದ ಇತರರ ಶೇರುಗಳನ್ನು ಕೊಡಬಹುದಾದ್ದರಿಂದ ಇಂಥ ವ್ಯವಹಾರವು ಅಯೋಗ್ಯವಿದ್ದ ಬಗ್ಗೆ ಕೋರ್ಟಿನವರು ನಿರ್ಣಯಿಸಿರುವರು. ಮಾತ್ರ, ಶೇರ ಪೇಟೆಯಲ್ಲಿಯ ಅಧಿಕೃತ ದಲಾಲರು ತಮ್ಮ ವ್ಯವಹಾರದಲ್ಲಿ ಕೈಯಲ್ಲಿದ್ದ ಶೇರುಗಳನ್ನು ತಾರಣವಾಗಿ ಕೊಡಬಲ್ಲರು.

## ಆಯುರ್ವಿಮಾ ಪಾಲಿಸಿಯು ತಾರಣವು

ವಿಮೇದಾರರು ತಮ್ಮ ವಿಮಾ ಪಾಲಿಸಿಯು ತಾರಣದ ಮೇಲೆ ಬ್ಯಾಂಕಿನಿಂದ ಸಾಲವನ್ನು ದೊರಕಿಸಬಹುದು. ತಾರಣವಾಗಿ ಕೊಡತಕ್ಕ ಪಾಲಿಸಿಯ ಬಗ್ಗೆ ವಿಮಾ ಕಂಪನಿಗೆ ಕೊಡತಕ್ಕ ಎಲ್ಲ ಕಂತುಗಳು ಸಂಪೂರ್ಣವಾಗಿ ತುಂಬದಿದ್ದರೆ, ಆ ಪಾಲಿಸಿಯು ಉತ್ತಮ ತಾರಣವೆಂದು ಮನ್ನಿಸಲಾಗುವದು. ಆದರೆ ಪಾಲಿಸಿಯ ಬಗ್ಗೆ ಕಂತುಗಳು ಇನ್ನೂ ಕೊಡುವದಿದ್ದು ಮಧ್ಯದಲ್ಲಿಯೇ ವಿಮೇದಾರರಿಗೆ ಸಾಲವು ಬೇಕಾದರೆ, ಅವರಿಗೆ ಆ ಪಾಲಿಸಿಯು 'ಸರೆಂಡರ್ ವ್ಹಾಲ್ಯು'ಕಿಂತ ಹೆಚ್ಚಿನ ಹಣ ಸಿಗಲಾರದು. 'ಸರೆಂಡರ್ ವ್ಹಾಲ್ಯು' ಅಂದರೆ ವಿಮೇದಾರರು ಯಾವ ಕಾರಣದಿಂದಾದರೂ ಪಾಲಿಸಿಯನ್ನು ಮುಂದೆ ಸಾಗಿಸುವದನ್ನು ಬಿಟ್ಟುಕೊಡಬಲ್ಲ ವೇಳೆಗೆ 'ಸರೆಂಡರ್‌ವ್ಹಾಲ್ಯು' ಎಂದೆನ್ನಬಹುದು.

ಪಾಲಿಸಿಯು ತಾರಣದ ಬಗ್ಗೆ ವಿಮೇದಾರರು ಕೆಳಗಿನ ಸಂಗತಿಗಳ ಬಗ್ಗೆ ಬ್ಯಾಂಕಿನವರಿಗೆ ಗೊತ್ತುಮಾಡಿಕೊಡಬೇಕಾಗುವದು.

೧. ಪಾಲಿಸಿಯನ್ನು ಕೊಳ್ಳುವಾಗ ವಿಮೇದಾರರು ಕಂಪನಿಯವರಿಗೆ ಸಂಪೂರ್ಣ ವೃತ್ತಾಂತವನ್ನು ಕೊಟ್ಟಿರಬೇಕು. ಮತ್ತು ತಮ್ಮ ನಿಜವಾದ ವಯಸ್ಸಿನ ದಾಖಲೆಯನ್ನು ಪೂರೈಸಿ ಅದಕ್ಕೆ ಕಂಪನಿಯವರು ಒಪ್ಪಿದ ಬಗ್ಗೆ ಪಾಲಿಸಿಯಲ್ಲಿ ನೋಂದು ಇರಬೇಕು. ಕಾರಣ. ಮುಂಚಿನ ವೃತ್ತಾಂತದಲ್ಲಿ ಏನಾದರೂ ತಪ್ಪಾದದ್ದು ಕಂಡುಬಂದರೆ ಪಾಲಿಸಿಯು ರದ್ದು ಆಗುವ ಸಂಭವವಿರುವದು.

೨. ಬ್ಯಾಂಕಿನವರಿಗೆ ಪಾಲಿಸಿಯನ್ನು ಒಪ್ಪಿಸುವ ಪೂರ್ವದಲ್ಲಿ ಅದರ ರಕಮು ಇನ್ನೊಬ್ಬರಿಗೆ ಮುಟ್ಟಬೇಕೆಂದು ಬರೆದಿಟ್ಟಿದ್ದರೆ ಮತ್ತು ಆ ಪ್ರಕಾರ ವಿಮಾ ಕಂಪನಿಯವರಿಗೆ ತಿಳಿಸಿದ್ದರೆ, ವಿಮೇದಾರರು ಇಂಥ ವ್ಯಕ್ತಿಯ ಕಡೆಯಿಂದ ಪಾಲಿಸಿಯನ್ನು ತಾರಣವಾಗಿ ಕೊಡಬಹುದೆಂಬ ಅಧಿಕಾರಪತ್ರವನ್ನಾದರೂ ಒಪ್ಪಿಸಬೇಕು.

೩. ತಾರಣವಿಟ್ಟ ಪಾಲಿಸಿಯ ಕಂತುಗಳನ್ನು ತಕ್ಕ ಸಮಯಕ್ಕೆ ತಪ್ಪದೆ ಕೊಟ್ಟು, ಕಂಪನಿಯ ಪಾವತಿಗಳನ್ನು ಆಗಾಗ್ಗೆ ಬ್ಯಾಂಕಿನವರಿಗೆ ಮುಟ್ಟಿಸಬೇಕು.

## ಸ್ಥಾವರ ಆಸ್ತಿಯ ತಾರಣವು

ಈ ತರದ ತಾರಣದ ಮೇಲಿನ ಸಾಲವು ದೀರ್ಘ ಅವಧಿಯದಿರುವ ದರಿಂದ ವ್ಯಾಪಾರಿ ಬ್ಯಾಂಕಿನವರು ತಮ್ಮ ಹಣವನ್ನು ಈ ತರದಿಂದ ಹಣ ತೊಡಗಿಸಲು ಸಿದ್ಧರಾಗುವದಿಲ್ಲ. ಇದರಲ್ಲಿ ಕಾಯಿದೆಯ ಅನೇಕ ಪ್ರಶ್ನೆಗಳು ಉದ್ಭವಿಸುವದರಿಂದ ಬ್ಯಾಂಕಿನ ಹಣವು ಸುರಕ್ಷಿತವಾಗಿರುವ ಬಗ್ಗೆ ಸಂಶಯವಾದರೂ ಇರುವದು. ಮಾತ್ರ ಹೆಸರಾದ ಖಾತೇದಾರರು ಈ ತಾರಣದ ಮೇಲೆ ಸಾಲವನ್ನು ದೊರಕಿಸುವಗೋಸುಗ ಬ್ಯಾಂಕಿನವರಿಗೆ ಕೇಳಬಹುದು. ಕಾರಣ, ಬ್ಯಾಂಕಿನವರಿಗೆ ಅಂಥವರಿಂದ ಹಣ ತೀವ್ರವಾಗಿ ತಿರುಗಿ ಬರುವ ಬಗ್ಗೆ ನಿಶ್ಚಿತವಿರುವದು. ಯಾವದೇ ತರದ ವ್ಯವಹಾರದಲ್ಲಿ ಎರಡು ಮೂರು ವರುಷಗಳಲ್ಲಿ ಬಡ್ಡಿ ಸಹಿತ ಹಣ ತಿರುಗಿ ಬರುವಂತಿದ್ದ ಸಾಲವನ್ನೇ ಬ್ಯಾಂಕಿನವರು ಕೊಡಬಲ್ಲರು. ಮತ್ತು ತಿರುಗಿ ಕೊಡತಕ್ಕ ಹಣ ತಿಂಗಳಿಗೊಮ್ಮೆಯಾಗಲಿ ಮೂರು ತಿಂಗಳಿಗೊಮ್ಮೆಯಾಗಲಿ ನಿಜವಾಗಿ ತಿರುಗಿ ಬರುವಂತಿರಬೇಕು.

ಸ್ಥಾವರ ಆಸ್ತಿಯ ಮೇಲಿನ ತಾರಣವು ಸಮಾಧಾನಕಾರಕವಾಗುವ ಬಗ್ಗೆ ಖಾತೇದಾರರು ಕೆಳಗೆ ಬರೆದ ವಿಷಯುಗಳಲ್ಲಿ ಬ್ಯಾಂಕಿನವರಿಗೆ ಚನ್ನಾಗಿ ಗೊತ್ತುಮಾಡಿ ಕೊಡಬೇಕಾಗುವದು.

(೧) ಆಸ್ತಿಯ ಮಾಲಕರು ತಾವೇ ಇದ್ದು, ಅದರ ಮೇಲೆ ಬೇರೆ ಯಾರದೂ ಹಕ್ಕು ಇರುವದಿಲ್ಲ. ಕೋರ್ಟು ಕಚೇರಿಯ ಪ್ರಕರಣದಲ್ಲಿ ಆಸ್ತಿಯು ತಳಕಾಗಿರದೆ, ಮುನಿಸಿಪಾಲಿಟಿ, ಇಲ್ಲವೆ ಸ್ಥಾನಿಕ ಅಧಿಕಾರಿಗಳ ಪ್ರತಿಬಂಧವೂ ಅದಕ್ಕೆ ಇರಕೂಡದು.

(೨) ಆಸ್ತಿಯು ಸಂಪೂರ್ಣವಾಗಿ ತಮ್ಮದೇ ಇದ್ದು ಅದನ್ನು ತಾವೇ ಕೊಂಡದ್ದರ ಬಗ್ಗೆ ಗೊತ್ತು ಮಾಡಿಕೊಡಬೇಕು. ಭೂಮಿ ಎರಡನೇ ಯವರದಿದ್ದಾಗ ಅದಕ್ಕೆ ಹೊಂದಿದ ಎಲ್ಲ ಕರಾರುಗಳನ್ನು ಬ್ಯಾಂಕಿನವರು ಪರೀಕ್ಷಿಸುವರು, ಮತ್ತು ಹೊಲದ ಮಾಲಕರಿಂದ ಆಸ್ತಿಯನ್ನು ತಾರಣವಾಗಿ ಇಟ್ಟುಕೊಳ್ಳುವದಕ್ಕೆ ಲೇಖಿ ಅಪ್ಪಣೆಯನ್ನಾದರೂ ದೊರಕಿಸುವರು.

(೩) ಆಸ್ತಿಯ ವಿಷಯವಾಗಿ ಅವರ ಒಡೆಯರು ಮಾಡತಕ್ಕ ಬೆಲೆಯು ಒಮ್ಮೊಮ್ಮೆ ಸರಿಯಾಗಿರುವದಿಲ್ಲೆಂದು ಕಂಡು ಬರುವದು. ಅವರು ಮನೆಯನ್ನು ತಮ್ಮ ಅನುಕೂಲತೆಯಂತೆ ಕಟ್ಟಿದಾಗ ಹತ್ತಿದ ಬೆಲೆಯು ಮಾರಾಟದ ಕಾಲಕ್ಕೂ ಬರುವದೆಂದು ಹೇಳಲು ಬರುವಂತಿಲ್ಲ. ಆಸ್ತಿಯನ್ನು ಕೊಳ್ಳುವವರು ತಾವು ಹಾಕಬಹುದಾದ ಹಣದ ಮೇಲೆ ಸಾಕಷ್ಟು ಬಡ್ಡಿ ದೊರೆಯುವದೋ ಇಲ್ಲವೋ ಎಂಬುದನ್ನು ನೋಡುವದರಿಂದ ಅವರು ಮಾಲಕರು ಖರ್ಚು ಮಾಡಿದ ಹಣದ ವಿಷಯವಾಗಿ ವಿಚಾರಿಸುವದಿಲ್ಲ. ಆದ್ದರಿಂದ ಮನೆಯ ಬಾಡಿಗೆಯ ಉತ್ಪನ್ನವು ಅದರ ಕ್ರಯವನ್ನು ಗೊತ್ತುಪಡಿಸುವದಕ್ಕೆ ಸರಿಯಾದದ್ದೆಂದು ಬ್ಯಾಂಕಿನವರು ತಿಳಿಯುವರು. ಬಾಡಿಗೆ ಉತ್ಪನ್ನದಲ್ಲಿಯಾದರೂ ಮುನಸಿಪಾಲಿಟಿಯಂಥ ಅನೇಕ ಕರಗಳನ್ನು ಕಳೆದರೆ, ಅದು ಇನ್ನೂ ಕಡಿಮೆಯಾಗುವದು. ಹಾಗೂ ಆಸ್ತಿಯನ್ನು ಕಟ್ಟಿಸಿದ ಸ್ಥಳವಾದರೂ ಬೆಲೆಯ ಬಗ್ಗೆ ಮಹತ್ವವಾದ ವಿಷಯವಾಗಿರುವದು. ಕೊನೆಗೆ, ಮನೆಯ ಸದ್ಯಸ್ಥಿತಿಯನ್ನಾದರೂ ಕ್ರಯವನ್ನು ನಿಶ್ಚಯಿಸುವ ಕಾಲಕ್ಕೆ ಸೂಕ್ಷ್ಮವಾಗಿ ಪರೀಕ್ಷಿಸಬೇಕಾಗುವದು. ಯಾವದೇ ಕಾರಣದಿಂದ ಮನೆಗೆ ಉರಿ ಹತ್ತಿದರೆ ಹಾನಿ ತಟ್ಟಬಹುದಾದ ಪ್ರಮಾಣಕ್ಕನುಸರಿಸಿ ವಿಮಾ ಪಾಲಿಸಿಯನ್ನೂ ದೊರಕಿಸಬೇಕು.

(೪) ಆಸ್ತಿಯ ಒಡೆತನದ ಹಕ್ಕನ್ನು ನಿಶ್ಚಯಿಸುವಗೋಸುಗ ಬ್ಯಾಂಕಿನವರು ತಮ್ಮ ಸಲಹೆಗಾರರಿಂದ ಅದರ ಬಗ್ಗೆ ಇದ್ದ ಎಲ್ಲ ಕಾಗದಗಳನ್ನು ಮಾಲಕರ ಖರ್ಚಿನಿಂದ ಪರೀಕ್ಷಿಸಿಗೊಳ್ಳುವರು. ಈ ವಿಷಯದಲ್ಲಿ ಸರಕಾರದ ಕಾಗದಪತ್ರಗಳಲ್ಲಿದ್ದ ಎಲ್ಲ ನೋಂದು ಹುಡುಕಬೇಕಾಗುವದು. ಅದೇ ಆಸ್ತಿಯ ತಾರಣದ ಮೇಲೆ ಮತ್ತೊಮ್ಮೆ ಸಾಲವನ್ನು ಹೆಚ್ಚಿಗೆ ಕೊಡುವಾಗಲಾದರೂ ಈ ತರದ ನೋಂದನ್ನು ಸಲಹೆಗಾರರು ಬ್ಯಾಂಕಿನವರಿಗೋಸುಗ ನೋಡುವರು. ಸಾಲವನ್ನು ಪಡೆಯತಕ್ಕ ಖಾತೇದಾರರು ತಮ್ಮ ಹತ್ತರಿದ್ದ ಎಲ್ಲ ಕಾಗದಗಳನ್ನು ಒಪ್ಪಿಸಬೇಕು.

ತಕ್ಕ ಕಾಗದಗಳು ಸಿಗದಿದ್ದರೆ ಅದರ ಅಧಿಕೃತ ನಕಲನ್ನಾದರೂ ಕೊಡಬೇಕು.

(೫) ಸ್ಥಾವರ ಆಸ್ತಿಯ ತಾರಣದ ಸಲುವಾಗಿ ಬ್ಯಾಂಕಿನವರು ಅದಕ್ಕೆ ಹೊಂದಿದ ಕಾಗದಗಳನ್ನು ಇಟ್ಟುಕೊಂಡಾಗಲಿ ಇಲ್ಲವೆ ಕಾಗದವನ್ನು ಮಾಡಿಸಿಕೊಂಡಾಗಲಿ ಸಾಲವನ್ನು ಕೊಡುವರು. ಕಾಗದಗಳನ್ನಿಟ್ಟು ಕೊಳ್ಳುವದು ಕೆಲವು ನಿಶ್ಚಯಿಸಿದ ಪಟ್ಟಣಗಳಲ್ಲಿಯೇ ಆಗುವಂತಿರುವದು. ಯೋಗ್ಯ ವರ್ತಿಯು ಬಹಳ ಖರ್ಚಿನ ಕೆಲಸವಿದ್ದುದರಿಂದ ಸಾಲಗಾರರು ಕಾಗದಗಳನ್ನು ಸ್ವಾಧೀನ ಮಾಡುವ ಬಗ್ಗೆ ವಿನಂತಿಸುವದು ಸಹಜವಾದದ್ದು.

## ಇತರ ವಸ್ತುಗಳ ತಾರಣವು

ಬ್ಯಾಂಕಿನವರು ಕೆಲವು ಅನ್ಯವಸ್ತುಗಳನ್ನಾದರೂ ತಾರಣವಾಗಿ ಇಟ್ಟುಕೊಂಡು ಸಾಲವನ್ನು ಕೊಡುವರು. ಈ ವಸ್ತುಗಳು ತಾತ್ಪೂರ್ತಿಕವಿದ್ದು ಯೋಗ್ಯ ಸಮಯಕ್ಕೆ ಮಾರತಕ್ಕಂಥವಿರುವದರಿಂದ ಕೊಟ್ಟ ಹಣವು ಶೀಘ್ರವಾಗಿ ವಸೂಲಾಗುವದು ಶಕ್ಯವಿರುವದು. ಆದರೂ ಇಂಥ ವ್ಯವಹಾರದಲ್ಲಿ ಅನೇಕ ತೊಂದರೆಗಳಿರುವವು.

ಬ್ಯಾಂಕಿನ ವಶದಲ್ಲಿಡತಕ್ಕ ವಸ್ತುಗಳು ಕಾಲಕಾಲಕ್ಕೆ ತೆಗೆದುಕೊಂಡು ಹೋಗಿ ಸಾಲಗಾರರು ಮಾರದಿದ್ದರೆ, ಅವು ಕೆಟ್ಟುಹೋಗುವವು. ಇಟ್ಟ ಮಾಲು ಕೇವಲ ಹೆಚ್ಚಿನ ದರವನ್ನು ದೊರಕಿಸುವದಕ್ಕೆ ಇಡಲಾಗಿದ್ದರೆ ಮತ್ತು ಅವುಗಳನ್ನಿಟ್ಟ ಕಾರಣವು ಕೇವಲ ಸಟ್ಟಾ ರೀತಿಯದಿದ್ದಾಗ ಬ್ಯಾಂಕಿನವರು ಕೊಟ್ಟ ಹಣವು ಗಂಡಾಂತರದಲ್ಲಿ ಸಿಗುವದು. ಆದ್ದರಿಂದ ಈ ತರದ ಸಾಲವನ್ನು ಕೊಡಬೇಕಾದಾಗ ಬ್ಯಾಂಕುಗಳು ಜಾಗರೂಕರಾಗಿರುವದು ಸಹಜವಾದದ್ದು.

೧. ಇಡತಕ್ಕ ವಸ್ತುವು ತಾತ್ಪೂರ್ತಿಕವಿದ್ದು, ಸಾಲದ ಖಾತೆಯು ತಕ್ಕ ಸಮಯಕ್ಕೆ ಮುಗಿಯುವಂತಿರಬೇಕು. ಅವಧಿ ಮುಗಿದ ನಂತರ ಬ್ಯಾಂಕಿನವರ ಕೈಯಲ್ಲುಳಿದ ಮಾಲು ನಿರುಪಯೋಗಿ ಇರುವದು.

೨. ಬ್ಯಾಂಕಿಗೆ ಒಪ್ಪಿಸತಕ್ಕ ಮಾಲು ಬ್ಯಾಂಕಿನವರ ಸ್ವಾಧೀನದಲ್ಲಿ ಕೊಡಬೇಕಾಗುವದು. ಅಂದರೆ, ಅದನ್ನು ಬ್ಯಾಂಕಿನವರ ವಖಾರ (Godown) ದಲ್ಲಿಯಾಗಲಿ ಇಲ್ಲವೆ ಬ್ಯಾಂಕಿನವರು ಗೊತ್ತು ಮಾಡಿದ ಇನ್ನೊಂದು ಸ್ಥಳದಲ್ಲಿಯಾಗಲಿ ಇಡಬೇಕು ವಖಾರಕ್ಕೆ ಬ್ಯಾಂಕಿನವರು ಬೀಗ ಹಾಕುವರು. ಅದರಲ್ಲಿಯು ವಸ್ತುವನ್ನು ತೆಗೆಯಬೇಕಾದಾಗ ಅವರ ಲೇಖೀ ಅಪ್ಪಣೆಯಿಲ್ಲದೆ ಖಾತೇದಾರರು ತೆಗೆಯಲಾರರು. ಅದರಲ್ಲಿಯ ಮಾಲು ತಮ್ಮ ಅಧೀನದಲ್ಲಿದ್ದ ಬಗ್ಗೆ ಅಧಿಕಾರಿಗಳು ಬ್ಯಾಂಕಿನ ಹೆಸರಿನ ಫಲಕವನ್ನು ವಖಾರದ ಬಾಗಿಲದ ಮೇಲೆ ಹಚ್ಚುವರು. ಬೀಗದ ಮೇಲೆಯಾದರೂ ಬ್ಯಾಂಕಿನ ಮುದ್ರೆ ಇರುವದು. ಈ ಪ್ರಕಾರದಿಂದ ಮಾಲನ್ನು ವಶದಲ್ಲಿಟ್ಟುಕೊಂಡು ಅದರ ಪೇಟೆಯ ಬೆಲೆಯನ್ನು ದಿನದಿನಕ್ಕೆ ನೋಡುವರು. ಮತ್ತು ಅದು ಹೆಚ್ಚುಕಡಿಮೆ ಆದಂತೆ ಖಾತೇದಾರರಿಂದ ಹಣವನ್ನು ವಸೂಲ ಮಾಡಲಾಗುವದು. ವಖಾರದಲ್ಲಿಯ ಮಾಲು ಬ್ಯಾಂಕಿನ ಅಧೀನ ದಲ್ಲಿದ್ದದ್ದು ಎಲ್ಲರಿಗೂ ಗೊತ್ತಾಗುವದು ಅವಶ್ಯವಿದ್ದುದರಿಂದ ಇದೆಲ್ಲ ಕಾರ್ಯಭಾಗವಾದರೂ ಅವಶ್ಯವಿರುವದು.

೩. ವಖಾರದ ಕಟ್ಟಡವು ಭದ್ರವಾದದ್ದಿದ್ದು ಅದರಲ್ಲಿಟ್ಟ ವಸ್ತುವು ಹವೆಯ ಮೂಲಕ ಕೆಡುವಂತಿರತಕ್ಕದ್ದಲ್ಲ. ಮಾಲಿನ ಸುರಕ್ಷಿತೆಯ ಬಗ್ಗೆ ಬ್ಯಾಂಕಿನವರು ಆಗಾಗ್ಗೆ ಅಲ್ಲಿ ಹೋಗಿ ಪರೀಕ್ಷಿಸುವರಾದ್ದರಿಂದ ಅವುಗಳಲ್ಲಿಟ್ಟ ಗಂಟುಗಳಾಗಲಿ ಚೀಲಗಳಾಗಲಿ ವ್ಯವಸ್ಥಿತವಾಗಿ ಹಚ್ಚಿದ್ದಿರಬೇಕು.

೪. ಮಾಲಿಗೆ ಬೆಂಕಿಹತ್ತಿ ಸುಟ್ಟುಹೋದರೆ ಹಾನಿಯಾಗದಂತೆ ಅದರ ಬಗ್ಗೆ ವಿಮೆಯನ್ನಿಳಿಸಿ ವಿಮಾಪಾಲಿಸಿಯನ್ನು ಬ್ಯಾಂಕಿನವರ ಹೆಸರಿನಲ್ಲಿ ದೊರಕಿಸಬೇಕು ವಿಮಾಪಾಲಿಸಿಯಲ್ಲಿ ಬ್ಯಾಂಕಿನವರು ಒತ್ತಿದಾರರಿದ್ದ ಬಗ್ಗೆ ಸ್ಪಷ್ಟ ಉಲ್ಲೇಖವಿರುವದು ಅವಶ್ಯವಾದದ್ದು. ಶಕ್ಯವಿದ್ದಲ್ಲಿ ಇತರ ಗಂಡಾಂತರಕ್ಕೆ ಕಾರಣವಾಗಿ ಮಾಲು ಹಾಳಾದರೂ ಅದು ತುಂಬಿಬರುವಂತೆ ವಿಮಾಪಾಲಿಸಿಯ ಮೂಲಕ ಆಗುವಂತೆ ಮಾಡುವದು ಒಳಿತಾದದ್ದು.

೫. ವ್ಯಾಪಾರದಲ್ಲಿಟ್ಟ ಮಾಲು ಪೂರ್ಣ ಬೆಲೆಯನ್ನು ಕೊಟ್ಟು ಕೊಂಡದ್ದಿರಬೇಕು. ಅದರ ಮೇಲೆ ಯಾರ ಹಕ್ಕು ಇರತಕ್ಕದ್ದಲ್ಲ.

೬. ಪೂರ್ವದಲ್ಲಿ ನಿಯೋಜಿಸಿದ ಮೇರೆಗೆ ಮಾಲಿನ ಮಾರಾಟವು ತಕ್ಕ ಕಾಲಕ್ಕೆ ಆಗುತ್ತಿದ್ದ ಬಗ್ಗೆ ಬ್ಯಾಂಕಿನವರು ಖಾತೇದಾರರಿಗೆ ಆಗಾಗ್ಗೆ ತಿಳಿಸುತ್ತಿರುವದರಿಂದ ಅವರು ಆದರ ಮಾರಾಟದ ಬಗ್ಗೆ ದಕ್ಷರಿರಬೇಕು.

## ಬಂಗಾರದ ಆಭರಣದ ತಾರಣವು

ಬಳಿಕೆಯ ಖಾತೆಯನ್ನು ಆರಂಭಿಸುವ ಕಾಲಕ್ಕೆ ಬ್ಯಾಂಕಿನವರು ಖಾತೇದಾರರ ಯೋಗ್ಯ ಪರಿಚಯುವನ್ನನುಲಕ್ಷಿಸುವಂತೆ, ಬಂಗಾರದ ಆಭರಣಗಳನ್ನಿಟ್ಟು ಸಾಲವನ್ನು ಪಡೆಯುವವರ ಬಗ್ಗೆಯೂ ಗೊತ್ತು ಮಾಡಿಕೊಳ್ಳಬೇಕಾಗುವದು. ಈ ತರದ ಸಾಲವನ್ನು ಪಡೆಯುವವರು ಆಭರಣಗಳು ತಮ್ಮ ಸ್ವಂತ ಒಡೆತನದವು ಇದ್ದ ಬಗ್ಗೆ ಬ್ಯಾಂಕಿಗೆ ಬರೆದು ಕೊಡಬೇಕು. ಇನ್ನೊಬ್ಬರು ಅವರ ಹತ್ತರ ಆಭರಣಗಳನ್ನಿಟ್ಟು ಸಾಲವನ್ನು ತೆಗೆದುಕೊಂಡಿದ್ದರೆ ಅವರು ಅವೇ ವಸ್ತುಗಳನ್ನು ಮತ್ತೊಮ್ಮೆ ಸಾಲ ಪಡೆಯುವದಕ್ಕಾಗಿ ಇನ್ನೊಂದು ಕಡೆಗೆ ಇಡಲಾರರು.

(೧) ಬ್ಯಾಂಕಿನವರು ಈ ಆಭರಣಗಳನ್ನು ತಮ್ಮ ವ್ಯಾಪಾರಿಗಳ ಕಡೆಗೆ ಕಳಿಸಿ ಪರೀಕ್ಷಿಸುವರು ಮತ್ತು ಆ ವ್ಯಾಪಾರಿಯು ಅವುಗಳ ಬೆಲೆಯನ್ನಾದರೂ ಗೊತ್ತು ಮಾಡುವನು. ಒಟ್ಟು ಬೆಲೆಯ ಪ್ರಮಾಣದ ಮೇಲೆ ಕೊಡತಕ್ಕ ಹಣವನ್ನು ನಿಶ್ಚಯಿಸುವರು.

(೨) ಆಭರಣಗಳಲ್ಲಿ ಬೆಲೆಯುಳ್ಳ ಹರಳುಗಳನ್ನು ಕೂಡಿಸಿದ್ದರೆ, ಅವುಗಳ ಕ್ರಯವು ನಿಶ್ಚಿತವಿರಲಾರದ್ದರಿಂದ ಅಂಥವುಗಳನ್ನು ಬ್ಯಾಂಕಿನವರು ಸ್ವೀಕರಿಸಲಾರರು.

(೩) ಬಂಗಾರದ ಆಭರಣಗಳ ತಾರಣದ ಮೇಲೆ ಕೊಟ್ಟ ಸಾಲದ ಹಣವು ಶೀಘ್ರವಾಗಿ ಬರುವದಿಲ್ಲ. ಕೆಲವರು ಬಡ್ಡಿಯನ್ನೂ ಕೊಡುವದಿಲ್ಲ. ಈ ಪ್ರಕಾರ ವಸೂಲಾಗದ ಹಣವು ದೊಡ್ಡದಾಗುತ್ತ ಹೋಗಿ

ಕೊನೆಗೆ ಬ್ಯಾಂಕಿನವರಿಗೆ ವಸ್ತುಗಳನ್ನು ಮಾರಿ ತಮ್ಮ ವಸೂಲಿಯನ್ನು ಮಾಡಿಕೊಳ್ಳುವ ಪ್ರಸಂಗವು ಬರುವದು. ಆದ್ದರಿಂದ ಒಂದು ಕಾಲಕ್ಕೆ ಸಂಗ್ರಹಿಸಿದ ಹಣವನ್ನು ಬಂಗಾರದ ಆಭರಣಗಳಲ್ಲಿ ಹಾಕಿದ್ದು ಸಾಲದ ತಾರಣವಾಗಿ ಉಪಯೋಗಿಸುವದು ಯೋಗ್ಯವಾದದ್ದೆಂದು ಕಾಣುವದಿಲ್ಲ. ಹಾಗೂ ಅವು ಕೌಟುಂಬಿಕ ಶೋಭೆಯ ವಸ್ತುಗಳಿದ್ದು ವ್ಯವಹಾರಕ್ಕೆ ಸಂಬಂಧಿಸಿದ್ದವುಗಳು ಅಲ್ಲೆಂದು ಜನರು ತಿಳಿಯಬೇಕು.

## ತಾರಣವಿಲ್ಲದ (Unsecured or Clean) ಸಾಲವು

ಯಾವುದೇ ತರದ ತಾರಣವನ್ನಿಟ್ಟುಕೊಂಡು ಬ್ಯಾಂಕಿನವರು ಸಾಲವನ್ನು ಕೊಟ್ಟರೂ ತಾರಣವನ್ನು ಬೇಕಾದಷ್ಟು ಸುರಕ್ಷಿತವಾಗುವಂತೆ ಮಾಡಿದರೂ ಸಾಲದ ವಸೂಲಿಯು ಕೊನೆಗೆ ಖಾತೇದಾರರ ವೈಯಕ್ತಿಕ ಪ್ರಶ್ನೆಯಾಗಿಯೇ ಉಳಿಯುವದು. ಅವರು ತಮ್ಮ ಯೋಜನೆಯ ಮೇರೆಗೆ ದೊರಕಿಸಿದ ಹಣವನ್ನು ತಕ್ಕ ರೀತಿಯಿಂದ ಉಪಯೋಗಿಸಿ, ನಿಯೋಜಿತ ಮಾರದಿಂದ ತೆಗೆದುಕೊಂಡ ಸಾಲವನ್ನು ಕೊಡದೆ ಇದ್ದರೆ ಎಲ್ಲ ಉಪಕ್ರಮವು ನಿರರ್ಥಕವಾಗುವದು. ಆದ್ದರಿಂದ ವ್ಯವಹಾರವು ಕೇವಲ ಖಾತೇದಾರರ ಪಾತ್ರತೆಯ ಮೇಲೆಯೇ ಅವಲಂಬಿಸಿರುವದೆಂದು ಹೇಳಬಹುದು. ಹೀಗಿದ್ದರೂ ಕೂಡ, ತಾರಣವನ್ನು ತೆಗೆದುಕೊಳ್ಳದೆ ಮತ್ತು ಪಡೆದ ತಾರಣವನ್ನು ಎಲ್ಲ ರೀತಿಯಿಂದ ಸುರಕ್ಷಿತೆಗಾಗಿ ಭದ್ರಿಸದೆ ಯಾವ ಜಾಣನು ಸಾಲದ ವ್ಯವಹಾರವನ್ನು ಮಾಡಲಾರನು.

ಆದರೂ ಕೇವಲ ವೈಯಕ್ತಿಕ ಪಾತ್ರತೆಯ ಮೇಲೆ ಮತ್ತು ಕೇವಲ ಖಾತೇದಾರರಿಂದ ತೆಗೆದುಕೊಂಡ 'ಪ್ರಾಮಿಸರಿ ನೋಟ್ಸ್'ಗಳ ತಾರಣದ ಮೇಲೆ ಬ್ಯಾಂಕಿನಲ್ಲಿ ವ್ಯವಹಾರವು ಆಗುವದನ್ನು ನಾವು ನೋಡುವೆವು. ಹೀಗೆ ಮಾಡುವ ಪೂರ್ವದಲ್ಲಿ ಬ್ಯಾಂಕಿನವರಿಗೆ ಖಾತೇದಾರರು ತೀರ ಪರಿಚಿತರಿರುವರು. ಅವರು ಸಮಾಜದಲ್ಲಿಯ ಪ್ರತಿಷ್ಠಿತ ವ್ಯಕ್ತಿಗಳಿರುವರು. ಅವರ ವ್ಯವಹಾರದ ಬಗ್ಗೆಯೂ ಬ್ಯಾಂಕಿನವರು ನಿಃಶಂಕರಿರುವರು. ಮೇಲಾಗಿ

ಇಂಥವರು ಬ್ಯಾಂಕಿನಿಂದ ಸಾಲವನ್ನು ಪಡೆಯುವದಾದರೂ ಮತ್ತು ಅದಕ್ಕಾಗಿಯೇ ತಾತ್ಪೂರ್ತಿಕ ಕೆಲಸಕ್ಕಾಗಿಯೇ. ಆ ಹಣವನ್ನು ಉಪಯೋಗಿಸುವರೆಂದು ಅವರ ಬೇಡಿಕೆಯು ಮಾನ್ಯವಾಗುವದು.

ಹೀಗಿದ್ದರೂ ಕೂಡ ಒಬ್ಬ ವ್ಯಕ್ತಿಗೆ ತನ್ನ ಒಂದೇ ಸಹಿಯು 'ಪ್ರಾಮಿಸರಿ ನೋಟ'ನ ಮೇಲೆ ಸಾಲವು ದೊರಕಲಾರದು. ಅದಕ್ಕೆ ಇಬ್ಬರಾದರೂ ಜಾಮೀನು ಬೇಕೇ ಆಗುವರು. ಇಬ್ಬರೂ ಸಮಾನ ಪಾತ್ರತೆಯ ವ್ಯಕ್ತಿಗಳಿರಬೇಕು. ಶಕ್ಯವಿದ್ದಲ್ಲಿ ಅವರಿಬ್ಬರು ಸಹೋದ್ಯೋಗಿಗಳಿರಬೇಕು. ಮತ್ತು ಬ್ಯಾಂಕಿನವರಿಗೆ ಗೊತ್ತಿದ್ದವರಿರಬೇಕು.

ಮೇಲೆ ವಿವರಿಸಿದ ಪರಿಸ್ಥಿತಿಯು ನಿಶ್ಚಿತವಾದ ನಂತರ ಅವರಿಬ್ಬರ ಬೇಡಿಕೆಯು ಮಾನ್ಯವಾಗುವಂತೆ ಬ್ಯಾಂಕಿನ ಅಧಿಕಾರಿಗಳು ತಮ್ಮ ವರಿಷ್ಠ ಅಧಿಕಾರಿಗಳಿಗೆ ಅವರ ಪರವಾಗಿ ಕೆಳಗೆ ಬರೆದಂತೆ ವಿಷಯವನ್ನು ನಿವೇದಿಸುವರು.

೧. ಇಬ್ಬರೂ ಖಾತೇದಾರರ ಪೂರ್ಣ ಹೆಸರು (ನಿವಾಸ ಸಹಿತ).

೨. ಅವರವರ ವ್ಯವಸಾಯ–ಉದ್ಯೋಗಗಳು.

೩. ಪಟ್ಟಣಗಳಲ್ಲಿ ಅವರ ಒಡೆತನದ ಆಸ್ತಿಗಳ ಸಾಧಾರಣ ಬೆಲೆಯು.

೪, ಅವರು ಉದ್ಯೋಗದಲ್ಲಿ ತೊಡಗಿಸಿದ ಭಾಂಡವಲು ಮತ್ತು ಅಂಗಡಿಗಳಿಪ್ಪವೆ ಅವರಲ್ಲಿರುವ ವಸ್ತುಗಳ ಸಾಮಾನ್ಯವಾಗಿ ಕಲ್ಪಿಸಿದ ಬೆಲೆಯು.

೫. ಅವರು ಬೇಡಿದ ಸಾಲದ ಕಾರಣಗಳು.

೬. ಕೊಟ್ಟ ಹಣವನ್ನು ಅವರು ಯಾವ ಕಾಲಕ್ಕೆ ಯಾವ ರೀತಿಯಿಂದ ತಿರುಗಿ ಮುಟ್ಟಿಸಬಲ್ಲರು.

೭. ಇಬ್ಬರೂ ಎಷ್ಟು ವರ್ಷಗಳಿಂದ ಬ್ಯಾಂಕಿನ ಖಾತೇದಾರರಾಗಿರುವರು, ಮತ್ತು ಅವರ ಖಾತೆಯು ವ್ಯವಹಾರವು ಸಮಾಧಾನಕಾರಕವಿದ್ದು ಅವುಗಳ ಪರವಾಗಿ ಬ್ಯಾಂಕಿಗೆ ಆದ ಮತ್ತು ಆಗಬಹುದಾದ ಲಾಭವು.

೮. ಅವರಲ್ಲಿ ಒಬ್ಬರ ಖಾತೆಯು ಇನ್ನೊಂದು ಬ್ಯಾಂಕಿನಲ್ಲಿದ್ದರೆ ಆ ಬ್ಯಾಂಕಿನವರು ಕೊಟ್ಟ ಮತವೇನು?

ಇವೆಲ್ಲ ಸಂಗತಿಗಳನ್ನು ತಿಳಿದುಕೊಂಡು ಇಬ್ಬರೂ ಅರ್ಜಿದಾರರ ಪಾತ್ರತೆಯನ್ನು ಮೇಲಧಿಕಾರಿಗಳು ನಿಶ್ಚಯಿಸಿ, ಸಾಲದ ವ್ಯವಹಾರವನ್ನು ಗೊತ್ತುಪಡಿಸುವರು. ಈ ಪ್ರಕಾರ ತಯಾರಿಸಿದ ಕಾಗದದ ಮೇಲೆ ಮೇಲಧಿಕಾರಿಗಳ ಲೇಖೀ ಅನುಮತಿಯನ್ನು ಪಡೆದು ತಮ್ಮ ಸಮಕ್ಷಮ ಅರ್ಜಿದಾರರಿಗೆ 'ಪ್ರಾಮಿಸರಿ ನೋಟ'ನ ಮೇಲೆ ಸಹಿಗಳನ್ನು ಮಾಡಲು ಹೇಳುವರು. 'ಪ್ರಾಮಿಸರಿ ನೋಟ'ನ ಮಸೂದೆಯು ಕೆಳಗೆ ಬರೆದಂತೆ ಇರುವದು:—

"ಬ್ಯಾಂಕಿನವರು ಕೇಳಿದ ಕೂಡಲೆ ನಾವಿಬ್ಬರೂ ವ್ಯಕ್ತಿಶಃ ಇಲ್ಲವೆ ಇಬ್ಬರೂ ಕೂಡಿ ಇಂತಿಷ್ಟು ರೂಪಾಯಿಗಳನ್ನು ಕೊಡುವ ಬಗ್ಗೆ ಬದ್ಧರಿರುವೆವು."

ಅಂದರೆ ಈ ತರದ ಸಾಲದ ವ್ಯವಹಾರದಲ್ಲಿ ಇಂಥವರು ಸಾಲವನ್ನು ತೆಗೆದುಕೊಂಡವರು ಇನ್ನೊಬ್ಬರು ಕೇವಲ ಔಪಚಾರಿಕವಾಗಿ ಸಹಿ ಮಾಡಿರುವರೆಂದು ಗಣಿಸಲಾಗದು. ಹಾಗೂ, ಒಬ್ಬರು ಸಾಲದ ಹಣವನ್ನು ತಿರುಗಿ ಕೊಡದಿದ್ದರೆ ಇಲ್ಲವೆ ಅವರಿಗೆ ಕೊಡಲಸಾಧ್ಯವಿದ್ದರೆ ಇನ್ನೊಬ್ಬರಿಂದ ಹಣದ ವಸೂಲಿಯನ್ನು ಬ್ಯಾಂಕಿನವರು ಮಾಡತಕ್ಕದ್ದೆಂದಾದರೂ ಮನ್ನಿಸಲಾಗದು. ಸಾಲದ ಹಣದ ವಸೂಲಿಯ ಸಲುವಾಗಿ ಇಬ್ಬರೂ ಬ್ಯಾಂಕಿಗೆ ಸಮಾನರಾದ ಸಾಲಗಾರರು. ಒಬ್ಬರು ಸಾಲದ ಹಣವನ್ನು ತಕ್ಕ ಸಮಯಕ್ಕೆ ಕೊಡದಿದ್ದರೆ ಇಲ್ಲವೆ ತಕ್ಕ ಕಾಲಕ್ಕೆ ಅದರ ನಿಯೋಜಿತ ವಸೂಲಿಯ ಕಂತು ಅವರಿಂದ ಬರದಿದ್ದರೆ ಇನ್ನೊಬ್ಬರು ಅದು ತಮ್ಮ ಸಾಲವಿದ್ದ ಮೇರೆಗೆ ಯೋಜನೆಯ ಪೂರ್ತಿಯನ್ನು ಮಾಡಬೇಕು. ಆದ್ದರಿಂದ ತಮ್ಮ ಪ್ರತಿಷ್ಠೆಯ ಮತ್ತು ಪಾತ್ರತೆಯ ಮೇರೆಗೆ ಇಬ್ಬರೂ ತಮ್ಮ ವ್ಯವಹಾರವು ಮುಗಿಯುವವರೆಗೆ ಯಾವ ತರದ ತಕರಾರು ಬಾರದಂತೆ ಕೂಡಿಕೊಂಡು ಹೋಗುವದು ಉತ್ತಮ ಮಾರ್ಗವು. ಕಾರಣ, ಸೌಜನ್ಯದಿಂದ ಮುಗಿದ ವ್ಯವಹಾರದ ಮೂಲಕ ಹೊಸ ವ್ಯವಹಾರವು ಹೊರಟು ವ್ಯವಸಾಯವು ಅನಿರತವಾಗಿ ಸಾಗುವದು ನಿಶ್ಚಿತವಾದದ್ದು.

---

೩

# ಬ್ಯಾಂಕುಗಳ ಇತರ ಕಾರ್ಯ

ಆಧುನಿಕ ಬ್ಯಾಂಕುಗಳ ಕಾರ್ಯಭಾಗವು ಕೇವಲ ಠೇವುಗಳನ್ನು ಸ್ವೀಕರಿಸಿ ಹೆಚ್ಚಿನ ಹಣವನ್ನು ಸಾಲವಾಗಿ ಕೊಡುವವಲ್ಲದೆ, ಜನರ ಆರ್ಥಿಕ ವ್ಯವಹಾರಕ್ಕೆ ಸಂಬಂಧಿಸಿದ ಇನ್ನೂ ಅನೇಕ ಪ್ರಕಾರದ ಸಹಾಯವನ್ನು ಸಲ್ಲಿಸಬಹುದೆಂಬುದರ ಬಗ್ಗೆ ಬ್ಯಾಂಕಿನ ಖಾತೆದಾರರಿಗೆ ಗೊತ್ತಿಲ್ಲ. ಇತರರಿಗೂ ಈ ಸಂಗತಿಯು ಗೊತ್ತಾಗದಿದ್ದುದು ಸ್ವಾಭಾವಿಕ.

ಈ ಕಾರ್ಯವು ಎರಡು ತರದ್ದಿರುವದೆಂದು ಸಾಮಾನ್ಯವಾಗಿ ಹೇಳಬಹುದು (೧) ಏಜೆನ್ಸಿ ಕಾರ್ಯವು; (೨) ಇತರ ಉಪಯುಕ್ತ ಕಾರ್ಯಗಳು.

**(೧) ಏಜೆನ್ಸಿ ಕಾರ್ಯ :**— ಖಾತೇದಾರರಿಗೋಸುಗ ಅವರ ಶಿಲುಕಿನಿಂದ ಮಾಸಿಕ ವರ್ಗಣಿಯನ್ನೂ, ಇನ್ಶ್ಯುರನ್ಸ ಕಂತನ್ನೂ ಮುಂತಾದ ನಿತ್ಯಕ್ರಮದಲ್ಲಿರುವ ಹಣದ ವಿನಿಯೋಗವನ್ನು ಅವರ ಅಪ್ಪಣೆಯ ಮೇರೆಗೆ ಬ್ಯಾಂಕಿನವರು ಮಾಡಬಲ್ಲರೆಂಬ ಬಗ್ಗೆ ಮೊದಲಿಗೆ ಹೇಳಿರುವೆವು. ಹಾಗೂ ಚೆಕ್ಕುಗಳ ಹಣದ ಹೊರತಾಗಿ ಖಾತೇದಾರರ ಬಡ್ಡಿಯ ವಸೂಲಿಯ ಕೆಲಸವನ್ನಾದರೂ ಮಾಡಬಲ್ಲರೆಂಬದನ್ನೂ ಹೇಳಿರುವೆವು. ಇವೆಲ್ಲ ಕಾರ್ಯಭಾಗವು ಬ್ಯಾಂಕಿಂಗದ ನಿಜವಾದ ಕಾರ್ಯಭಾಗವಿರದಿದ್ದರೂ ಖಾತೇದಾರರ ಆರ್ಥಿಕ ವ್ಯವಹಾರಕ್ಕೊಳಗಾದದ್ದರಿಂದ ಅವರ ಏಜೆಂಟರ ಮುಖಾಂತರ ಬ್ಯಾಂಕಿನವರು ಇದನ್ನೆಲ್ಲ ಮಾಡಲೊಪ್ಪುವರು. ಆಫೀಸುಗಳ ಅಧಿಕಾರಿಗಳು ತಮ್ಮ ಬಳಿಯುಳ್ಳ ಕಾಗದಪತ್ರಗಳನ್ನು ತಮ್ಮ ತಿಜೋರಿಯಲ್ಲಿ ಇಡದೆ ಬ್ಯಾಂಕಿನವರ ಕಡೆಗೆ ಒಪ್ಪಿಸುವದು ಈಗ ರೂಢಿಯಲ್ಲಿರುವದು. ಆದ್ದರಿಂದ ಬೆಂಕಿ ಹತ್ತಿಯಾಗಲಿ ಕಳವು ಆಗಿಯಾಗಲಿ ಕಾಗದಗಳು ನಾಶವಾಗುವ ಭಯವು ಈಗ ಇರುವದಿಲ್ಲ.

ಧನಿಕ ಖಾತೇದಾರರು ಒಂದು ಹೆಜ್ಜೆ ಮುಂದುವರಿದು ತಮ್ಮ ಹತ್ತಿರುವ ವಿಶ್ವಾಸಪತ್ರಗಳನ್ನು, ಶೇರುಗಳನ್ನು ಸುರಕ್ಷಿತತೆಯ ಸಲುವಾಗಿ ಬ್ಯಾಂಕಿನವರಿಗೆ ಒಪ್ಪಿಸುವರು. ಅವುಗಳನ್ನು ಸ್ವೀಕರಿಸಿದ್ದುದಕ್ಕೆ ಈ ಕೆಲಸದ ವ್ಯಾಪವು ಬೆಳೆಯುತ್ತಲಿದೆ. ವಿಶ್ವಾಸಪತ್ರಗಳು ತಮ್ಮ ಆಧೀನದಲ್ಲಿ ಬಂದಂತೆ ಅವುಗಳ ಬಡ್ಡಿಯ ವಸೂಲಿಯನ್ನು ಮಾಡಬೇಕಾಗುವದು. ಶೇಅರುಗಳನ್ನು ಇಟ್ಟುಕೊಂಡಂತೆ ಆ ಕಂಪನಿಗಳು ಹಂಚುವ ಬಡ್ಡಿಯ ತಾರೀಖುಗಳ ನೋಂದು ಮಾಡಿಟ್ಟು ತಮ್ಮ ಖಾತೇದಾರರು ತಂದಿಟ್ಟ ಶೇಅರುಗಳ ಬಡ್ಡಿಯ ವಸೂಲಿಯ ಕೆಲಸವನ್ನಾದರೂ ಮಾಡಬೇಕಾಗುವದು.

ಬ್ರಿಟನ್ ಮತ್ತು ಅಮೇರಿಕಾ ದೇಶದಲ್ಲಿಯ ರೂಢಿಗನುಸರಿಸಿ ನಮ್ಮಲ್ಲಿಯ ಬ್ಯಾಂಕಿನವರಾದರೂ ಟ್ರಸ್ಟಿ ಉಪಕ್ರಮವನ್ನು ಕೈಕೊಳ್ಳುವರು. ಈ ಉಪಕ್ರಮದ ಉಪಯೋಗವನ್ನು ಇನ್ನೂ ನಾವು ಪೂರ್ಣವಾಗಿ ಅನುಭವದಲ್ಲಿ ಕಂಡಿಲ್ಲ.

(೨) ಬ್ಯಾಂಕಿನವರು ಸರಕಾರದವರಾಗಲಿ, ಸ್ಥಾನಿಕ ಸಂಸ್ಥೆಯವರಾಗಲಿ ವಿಶ್ವಾಸಪತ್ರಗಳನ್ನು ಹೊರಡಿಸಿದಾಗ ತಮ್ಮ ಅನುಕೂಲತೆಯ ಮೇರೆಗೆ ಅವುಗಳನ್ನು ಪೂರ್ಣವಾಗಿ ಕೊಂಡು ಅವರಿಗೆ ಹಣದ ಸಹಾಯವನ್ನು ಮಾಡುವರು. ಜರ್ಮನಿಯಲ್ಲಿಯ ಬ್ಯಾಂಕುಗಳ ಔದ್ಯೋಗಿಕ ಕಂಪನಿಗಳು ಶೇಅರುಗಳನ್ನು ಈ ತರದಿಂದ ಸಂಪೂರ್ಣವಾಗಿ ಕೊಂಡು ಪೇಟೆಯಲ್ಲಿ ಮಾರುತ್ತಿದ್ದರು.

ಖಾತೇದಾರರ ವತಿಯಿಂದ ದೇಶದಲ್ಲಿರುವ ಇತರ ಜನರ ಬಗ್ಗೆ ವೃತ್ತಾಂತವನ್ನು ಬ್ಯಾಂಕಿನವರು ಪೂರೈಸುವರು. ಬ್ಯಾಂಕು ಬ್ಯಾಂಕುಗಳಲ್ಲಿ ಈ ತರದ ಯೋಜನೆಯು ತೀರ ಗುಪ್ತರೀತಿಯಿಂದ ಆಗುತ್ತಿದ್ದದರಿಂದ ತಮ್ಮ ಖಾತೇದಾರರ ವಿಷಯಕ್ಕೆ ಇನ್ನೊಂದು ಬ್ಯಾಂಕಿನವರಿಗೆ ಕೊಡತಕ್ಕ ವೃತ್ತಾಂತವನ್ನು ಆದಷ್ಟು ದಕ್ಷತೆಯಿಂದ ಕೊಡುವದು ಒಳಿತಾದದ್ದು. ಹೀಗೆ ದೊರಕಿದ ಸಂಗತಿಯಿಂದಾದರೂ ಖಾತೇದಾರರಿಗೆ ಸಾಕಷ್ಟು ಸಂಗತಿಯು ತಿಳಿದು, ತಾವು ಆ ಜನರ ಕೂಡ ಮಾಡತಕ್ಕ ವ್ಯವಹಾರವನ್ನು ಜಾಗರೂಕತೆಯಿಂದ ಮಾಡಬಲ್ಲರು.

ಖಾತೇದಾರರಿಗೆ ಕೊಡತಕ್ಕ ಚೆಕ್ಕು ಪುಸ್ತಕಗಳ ಹೊರತಾಗಿ, ಆಧುನಿಕ ಬ್ಯಾಂಕಿನವರು ಪ್ರವಾಸಿಕರಿಗೆ ಅನುಕೂಲವಾಗುವಂತೆ ಅವರಿಗೆ **ಪ್ರವಾಸಿಕರ ಚೆಕ್ಸ** (Travellers, Cheques) ಗಳನ್ನು ಕೊಡುವರು. ಪೂರ್ವದಲ್ಲಿ ಈ ಪ್ರಕಾರದ ಚೆಕ್ಕುಗಳನ್ನು ವಿದೇಶೀಯ ಬ್ಯಾಂಕಿನವರು ಪರದೇಶದ ಪ್ರವಾಸಿಕರಿಗೆ ಕೊಡುತ್ತಿದ್ದರು. ಈಚೆಗೆ ಮುಂಬಯಿ ಪಟ್ಟಣದಲ್ಲಿಯ 'ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ' ದವರು ದೇಶದಲ್ಲಿದ್ದ ತಮ್ಮ ಎಲ್ಲ ಕಚೇರಿಗಳಲ್ಲಿ ಹಣವು ದೊರಕಬೇಕೆಂಬ ಯೋಜನೆಯಿಂದ ಪ್ರವಾಸಿಕರಿಗೆ ಪ್ರವಾಸಿಕರ ಚೆಕ್ಕು ಪುಸ್ತಕಗಳನ್ನು ಕೊಡುವರು. ಪ್ರವಾಸ ಮಾಡುವವರು ಬ್ಯಾಂಕಿನ ಖಾತೇದಾರರಿರಬೇಕೆಂಬ ನಿರ್ಬಂಧವಿಲ್ಲ. ಅವರು ಮುಂಚೆಗೆ ಹಣವನ್ನು ಕೊಟ್ಟು ತಮ್ಮ ಸಹಿಯ ಮಾದರಿಯನ್ನು ಒಪ್ಪಿಸಿ, ಬ್ಯಾಂಕಿನವರು ಸೂಚಿಸಿದಂತೆ ಇತರ ನಿಯಮಗಳನ್ನು ಪಾಲಿಸಿದರೆ ಈ ಚೆಕ್ಕುಗಳ ಮುಖಾಂತರವಾಗಿ ಅವರಿಗೆ ಆ ಬ್ಯಾಂಕಿನ ೩೦೦ ಕಚೇರಿಗಳಲ್ಲಿಯ ಬೇಕಾದ ಕಚೇರಿಯಲ್ಲಿ ಚೆಕ್ಕಿನ ಹಣವು ತೀವ್ರವಾಗಿ ಸಿಗುವದು. ಪ್ರವಾಸಿಕರು ತಮ್ಮಗೂಡ ತಾತ್ಕಾಲಿಕ್ಕೆ ಸಾಕಷ್ಟು ಹಣವನ್ನು ಇಟ್ಟುಕೊಂಡು ಉಳಿದ ಭಾಗವನ್ನು ಚೆಕ್ಕಿನ ಸ್ವರೂಪದಲ್ಲಿ ಒಯ್ಯಬಹುದು. ಅಪರಿಚಿತ ಸ್ಥಳಕ್ಕೆ ಹೋದರೂ ಪ್ರವಾಸಿಗನಿಗೆ ಸಾಕಷ್ಟು ಹಣವನ್ನು ತೊಂದರೆಯಿಲ್ಲದೆ ಒಯ್ಯಬಹುದೆಂಬ ಸೌಕರ್ಯವು ದೊರಕುವದು. ಇಂಥ ಚೆಕ್ಕುಗಳನ್ನು ಮಾತ್ರ ಇತರ ಚೆಕ್ಕುಗಳಂತೆ ವ್ಯಾಪಾರೋದ್ಯೋಗದಲ್ಲಿ ಹಾಕಬಾರದು. ಚೆಕ್ಕುಗಳನ್ನು ಒಯ್ಯುವರು ಹಣವನ್ನು ತೆಗೆದುಕೊಳ್ಳುವ ಕಾಲಕ್ಕೆ ತಾವೇ ಬ್ಯಾಂಕಿನ ಕಚೇರಿಗೆ ಹೋಗಿ ಅಧಿಕಾರಿಗಳೆದುರಿಗೆ ತಮ್ಮ ಸಹಿಯನ್ನು ಮೊದಲು ಮಾಡಿದ ಪ್ರಕಾರ ಮಾಡಿ ಹಣವನ್ನು ದೊರಕಿಸಬೇಕು. ಪ್ರತಿಯೊಂದು ಚೆಕ್ಕಿನ ಹಣವು ಅದರ ಮೇಲೆ ಮುದ್ರಿಸಿದ್ದರಿಂದ ಹೆಚ್ಚುಕಡಿಮೆ ಹಣವು ಇಂಥ ಚೆಕ್ಕಿನ ಮೂಲಕ ಸಿಗಲಾರದು.

ಪರದೇಶದಲ್ಲಿಯ ಪ್ರವಾಸಿಕರೂ ಇದೇ ಮೇರೆಗೆ ಇಂಥ ಚೆಕ್ಕುಗಳನ್ನು ದೊರಕಿಸಿಕೊಂಡು ಅದರ ಹಣವನ್ನು ಇದೇ ರೀತಿಯಾಗಿ ಪಡೆಯಬಲ್ಲರು. ಅವರಿಗೆ ಕೇವಲ ಹಣದ ಸೌಕರ್ಯವಷ್ಟೇ ಸಿಗದೆ ಇತರ ಎಲ್ಲ ತರದ ಸಹಾಯವು ಆ ಬ್ಯಾಂಕಿನಿಂದ ಸಿಗುವದು. ಅವರು ತಮ್ಮ ಪತ್ರಗಳನ್ನು

ಬ್ಯಾಂಕಿನ ವಿಳಾಸಕ್ಕೆ ತರಿಸಬಹುದು. ಬ್ಯಾಂಕಿನವರು ಪೋಸ್ಟ ಆಫೀಸದ ಮೇರೆಗೆ ತಮ್ಮದೊಂದು ಟಪಾಲಖಾತೆಯನ್ನಿಟ್ಟು ಪ್ರವಾಸಿಕರ ಪತ್ರಗಳನ್ನು ಬಂದಬಂದಂತೆ ಅವರಿಗೆ ಕೊಡುವ ಯೋಜನೆಯನ್ನು ಮಾಡಿರುವರು.

ಸುರಕ್ಷಿತತೆಯ ಗೋಸುಗ ಬ್ಯಾಂಕಿನವರು ಸ್ವೀಕರಿಸತಕ್ಕ ವಸ್ತುಗಳಲ್ಲಿ ಜನರ ವಿಶ್ವಾಸಪತ್ರಗಳ ಮತ್ತು ಶೇಅರುಗಳ ಬಗ್ಗೆ ನಾವು ಇದುವರೆಗೆ ವಿಚಾರಿಸಿದೆವು. ಇವುಗಳ ಹೊರತಾಗಿ ಅವರು ಆಭರಣಗಳನ್ನಾದರೂ ಇಟ್ಟು ಕೊಳ್ಳುವರು. ಮಾತ್ರ, ಇಡುವವರು ತಮ್ಮ ಪೆಟ್ಟಿಗೆಯಲ್ಲಿಟ್ಟು ಬೀಗವನ್ನು ಹಾಕಿ ಅದನ್ನು ಮೊಹರು ಮಾಡಿ, ಬ್ಯಾಂಕಿನವರಿಗೆ ಒಪ್ಪಿಸಬೇಕಾಗುವದು. ಪೆಟ್ಟಿಗೆಯಲ್ಲಿಟ್ಟ ವಸ್ತುಗಳ ಬಗ್ಗೆ ಬ್ಯಾಂಕಿನವರು ಯಾವ ತರದಿಂದಲೂ ಹೊಣೆಗಾರರಿರುವದಿಲ್ಲ. ಪೆಟ್ಟಿಗೆಯನ್ನು ಇಟ್ಟ ಬಗ್ಗೆ ಪಾವತಿಯನ್ನು ಕೊಡು ವಾಗ ಅದರಲ್ಲಿ 'ಒಂದು ಮೊಹರು ಮಾಡಿದ ಪೆಟ್ಟಿಗೆ, ಅದರಲ್ಲಿಟ್ಟ ವಸ್ತು ಗಳ ಬಗ್ಗೆ ಗೊತ್ತಿಲ್ಲ' ಎಂದು ಬರೆಯುವರು. ಪೆಟ್ಟಿಗೆಯನ್ನು ತಿರುಗಿ ದೊರಕಿಸಬೇಕಾದಾಗ ಪಾವತಿಯನ್ನು ಕೊಟ್ಟು ಸಹಿ ಮಾಡಿ ದೊರಕಿಸ ಬೇಕು. ಇಡುವ ಕಾಲಕ್ಕೆ ಅವರು ಪೆಟ್ಟಿಗೆಯನ್ನು ಯಾರ ಸಹಿಯಿದ್ದರೆ ಕೊಡಬಹುದೆಂಬುವರ ಬಗ್ಗೆ ಗೊತ್ತು ಮಾಡಿಕೊಳ್ಳಬೇಕು. ಮತ್ತು ಅದೇ ಮೇರೆಗೆ ಬ್ಯಾಂಕಿನಿಂದ ಪೆಟ್ಟಿಗೆಯನ್ನು ಒಯ್ಯಬೇಕು. ಸಣ್ಣ ಪೆಟ್ಟಿಗೆಗಳ ಹೊರತಾಗಿ ಬ್ಯಾಂಕಿನವರ ಕಟ್ಟಡದಲ್ಲಿ 'ಭದ್ರವಾದ ಕೋಣೆ' ಗಳಿದ್ದರೆ (Strong Rooms) ಶೀಲ ಮಾಡಿದ ಪೆಟ್ಟಿಗೆಗಳನ್ನು, ಟ್ರಂಕುಗಳನ್ನು ಅವರು ಸ್ವೀಕರಿಸುವರು.

ಇದೇ ಕಲ್ಪನೆಯನ್ನು ಮುಂದುವರಿಸಿ ಆಧುನಿಕ ಬ್ಯಾಂಕಿನವರು ತಮ್ಮ ಕಟ್ಟಡದಲ್ಲಿ ಆಧುನಿಕ ರೀತಿಯ ಭದ್ರವಾದ ಕೋಣೆಗಳನ್ನು ಕಟ್ಟಿಸಿರುವರು. ಈ ಕೋಣೆಗಳಿಗೆ ೩-೪ ಟನ್ ಉಕ್ಕಿನ ಭಾರವಾದ ಬಾಗಿಲುಗಳನ್ನು ಹಚ್ಚಿಸಿರುವರು. ಆ ಬಾಗಿಲುಗಳ ಬೀಗಗಳು ಪ್ರತ್ಯೇಕ ವಾಗಿ ಮಾಡಲ್ಪಟ್ಟವುಗಳು ಇರುವವು. ಆದುದರಿಂದ ಕೋಣೆಗಳಾಗಲಿ ಬಾಗಿಲುಗಳಾಗಲಿ ಒಡೆಯಲು ಅಸಾಧ್ಯವಿರುವವು. ಇಂಥ ಕೋಣೆಗಳಲ್ಲಿ ಬೇರೆ ಬೇರೆ ಆಕಾರದ ಪೆಟ್ಟಿಗೆಯುಳ್ಳ ಕಪಾಟುಗಳಿರುವವು. ಈ ಪೆಟ್ಟಿಗೆಯ

ಬೀಗಗಳು ಮತ್ತು ಕೈಗಳು ಒಂದಕ್ಕೊಂದು ಭಿನ್ನವಿದ್ದು ಮೊಹರು ಮಾಡಲ್ಪಟ್ಟವು ಇರುವವು. ಈ ಪೆಟ್ಟಿಗೆಗಳನ್ನು ಬ್ಯಾಂಕಿನವರು ಬಾಡಿಗೆಯ ಕರಾರದ ಮೇಲೆ ಕೊಡುವರು. ಒಂದು ಪೆಟ್ಟಿಗೆಯ ಬಾಡಿಗೆಯ ದರವು ವರ್ಷಕ್ಕೆ ೧೨ ರೂಪಾಯಿಗಳಿಂದ ೧೦೦ ರೂಪಾಯಿಗಳ ತನಕ ಇರಬಹುದು. ಅಂದರೆ ತಿಂಗಳಿಗೆ ೧ ರೂಪಾಯಿಯಿಂದ ೮-೯ ರೂಪಾಯಿ ಬಾಡಿಗೆಯನ್ನು ಕೊಟ್ಟರೆ ನಮಗೆ ಅನುಕೂಲವಿದ್ದ ಆಕಾರದ ಪೆಟ್ಟಿಗೆಯು ಸಿಗುವದು. ಪೆಟ್ಟಿಗೆಯ ಒಡೆಯರು ದಿನದಲ್ಲಿ ಬೇಕಾದಷ್ಟು ಸಲ ಬ್ಯಾಂಕಿಗೆ ಬಂದು ಬೇಕಾದ ವಸ್ತುವನ್ನು ಅದರಲ್ಲಿ ಇಡಬಹುದು. ಇಲ್ಲವೇ ನಿರ್ಬಂಧವಿಲ್ಲದೆ ತೆಗೆದುಕೊಂಡು ಹೋಗಬಹುದು. ಈಚೆಗೆ ಈ ಉಪಕ್ರಮವು ಬೆಳೆಯುತ್ತ ಲಿದ್ದು ಮುಂಬಯಿ ಪಟ್ಟಣದಲ್ಲಿ ಮತ್ತು ಇನ್ನೂ ಕೆಲವು ಪಟ್ಟಣಗಳಲ್ಲಿ ಇದೊಂದೇ ಕಾರ್ಯವನ್ನು ಮಾಡುವ ದೊಡ್ಡ ದೊಡ್ಡ ಕಂಪನಿಗಳು ಹೊರಟಿರುವವು.

ಸಾಮಾಜಿಕ ಸಂಪತ್ತಿಯ ಸುರಕ್ಷಿತತೆಯು, ಸದುಪಯೋಗವು ಬ್ಯಾಂಕಿಂಗದ ಮೂಲ ಕಲ್ಪನೆಯಿದ್ದರೂ ಅದಕ್ಕೆ ಹೊಂದಿ ಉಪಕಲ್ಪನೆಗಳು ಬರುತ್ತಿರುವವು. ಅದರಿಂದ ಬ್ಯಾಂಕಿಂಗದ ವ್ಯಾಪವು ಬೆಳೆಯುತ್ತಿದೆ. ಮೇಲಾಗಿ, ಬ್ಯಾಂಕಿಂಗ ಕಂಪನಿಗಳ ಸ್ಪರ್ಧೆಯ ಮೂಲಕ ಜನರಿಗೆ ಹೆಚ್ಚುಹೆಚ್ಚಾದ ಸೌಕರ್ಯವು ಸಿಗುತ್ತಿದೆ. ನಾವು ಮಾತ್ರ ಈ ಸೌಕರ್ಯದ ಲಾಭವನ್ನು ತಕ್ಕಮಟ್ಟಿಗೆ ಪಡೆಯಬೇಕು.

---

೪

# ಬ್ಯಾಂಕಿಂಗದ ಸಂಕ್ಷಿಪ್ತ ಇತಿಹಾಸ

ನಮ್ಮ ದೇಶದಲ್ಲಿಯ ಬ್ಯಾಂಕಿಂಗದ ವ್ಯವಹಾರವು ಸೋಜ್ವಲವಾದ ಪರಂಪರೆಯಿಂದ ಪರಿಪೂರ್ಣವಾದದ್ದು, ಸಾಂಪತ್ತಿಕ ಸಮೃದ್ಧಿಯ ವೃಷ್ಟಿಯಿಂದ ಕೊರತೆಯಲ್ಲಿದ್ದುದು, ಆದರೆ ರಚನೆಯಲ್ಲಿ ಮಾತ್ರ ದೂಷಿತವಾದದ್ದೆಂದು ಹೇಳಬಹುದು.

ನಮ್ಮಲ್ಲಿಯ ಬ್ಯಾಂಕಿಂಗದ ಪ್ರಾರಂಭವು ಬುನಾದಿ ಕಾಲದ್ದಿದ್ದು ಅತ್ಯಂತ ಮನೋರಂಜಕವಾದದ್ದಿರುವದು. ಇದರ ಬಗೆಗೆ ದಂತಕಥೆಗಳು ಇರುವವು. ಕಾಲಕಾಲಕ್ಕೆ ಈ ವ್ಯವಸಾಯವು ಗಂಡಾಂತರದಲ್ಲಿ ಸಿಕ್ಕು ಹೋಯಿತು.

ಕ್ರಿಸ್ತಶಕ ೨೦೦೦ ವರ್ಷಗಳ ಮುಂಚೆಗೆ ಪೂರ್ವ ಪಶ್ಚಿಮ ದೇಶಗಳೊಂದಿಗೆ ನಮ್ಮ ವ್ಯಾಪಾರವು ಮಿಗಿಲಾದದ್ದಿತ್ತು. ಈ ವ್ಯಾಪಾರವನ್ನು ಸಾಗಿಸುವ ಬ್ಯಾಂಕರರ ಮತ್ತು ವ್ಯಾಪಾರಿಗಳ ಸಂಘಟನೆಗಳಿದ್ದವು. ಅಲಹಾಬಾದ ಮತ್ತು ಬಸ್ರಾ ಪಟ್ಟಣಗಳಲ್ಲಿ ಇಂಥ ವ್ಯಾಪಾರಿಗಳ ಸಂಸ್ಥೆಗಳು ಕ್ರಿ ಶ ೪೦೦ ವರ್ಷಗಳ ಹಿಂದೆ ಇದ್ದವೆಂದು ಉಲ್ಲೇಖವಿರುವದು. ಇವರು ಸಮ್ರಾಟ ರಾಜರ ಕಾಲಕ್ಕೆ ವ್ಯವಸಾಯವನ್ನು ಮಾಡುತ್ತಿದ್ದರೆಂದು ಅದರಿಂದ ಗೊತ್ತಾಗುವದು. ಅವರು ನಾಣ್ಯಗಳನ್ನಾದರೂ ರೂಢಿಯಲ್ಲಿ ತಂದ ಬಗ್ಗೆಯೂ ಉಲ್ಲೇಖವಿದೆ.

ಅವರು ಪೂರ್ಣ ಅವಧಿಯ ಠೇವುಗಳನ್ನು ಇಟ್ಟುಕೊಳ್ಳುತ್ತಿದ್ದರೆಂದು ತಿಳಿಯುತ್ತದೆ. ಠೇವಿನ ಬಡ್ಡಿಯ ದರವು ಆ ಕಾಲದ ಕಾಯಿದೆಯ ಮೇರೆಗೆ ನೂರಕ್ಕೆ ೯ರಿಂದ ೧೨ ರೂಪಾಯಿಗಳ ವರೆಗೆ ಇದ್ದು ಸಾಲದ ದರವು ನೂರಕ್ಕೆ ೨೪ರಿಂದ ೬೦ರ ವರೆಗೆ ಇರಬಹುದೆಂದು ತೋರುತ್ತದೆ. ತೀರ ಹೆಚ್ಚಿನ ಬಡ್ಡಿಯನ್ನು ತೆಗೆದುಕೊಳ್ಳುವದು ಮತ್ತು ಸಾಲವನ್ನು ಕೊಡದೆ ಇರುವದು

ಗ್ರಾಹ್ಯವಾದದ್ದೆಂದು ಮನ್ನಿಸುತ್ತಿದ್ದರು. ಆದರೂ ಮಾನವ ಸ್ವಭಾವದ ಪ್ರಕಾರ ಆ ಕಾಲದಲ್ಲಿಯಾದರೂ ಸಾಲದ ವಸೂಲಿಯ ಕೆಲಸವು ಸಹಜ ವಿದ್ದಿಲ್ಲವೆಂದು ತೋರುತ್ತದೆ. ಮನುಸ್ಮೃತಿಯಲ್ಲಿ ಸಾವುಕಾರನು ತನ್ನ ಹಣದ ವಸೂಲಿಯನ್ನು ಕಾಯಿದೆಯ ಮೇರೆಗೆ ಮಾಡಬಹುದೆಂದೂ ಇಲ್ಲವೆ ಪ್ರಸಂಗ ಬಂದಂತೆ ದಂಡ ಪ್ರಹಾರದ ಪ್ರಯೋಗವನ್ನಾದರೂ ಮಾಡಬಹು ದೆಂದು ಹೇಳಿರುವದಂತೆ. ಒಂದು ಸಲ ಸಾವುಕಾರನು ಸಾಲಗಾರನ ಮನೆ ಯೆದುರಿಗೆ ಸತ್ಯಾಗ್ರಹವನ್ನು ಹೂಡಿ ಪ್ರಾಣತ್ಯಾಗದ ಪ್ರಯೋಗವನ್ನಾ ದರೂ ಮಾಡಬಹುದಾಗಿತ್ತು. ಸಾವುಕಾರನು ಸತ್ತು ಹೋಗಿ ಪಿಶಾಚಿಯಾಗ ಬಹುದೆಂಬ ಭಯದಿಂದ ಸಾಲಗಾರನು ಹಣವನ್ನು ತಿರುಗಿ ಕೊಡುತ್ತಿದ್ದನು.

ಬ್ಯಾಂಕಿಂಗ ವ್ಯವಸಾಯದ ಮಹತ್ವವು ಉಚ್ಚತರದ್ದಿದ್ದು ಬ್ಯಾಂಕ ರರು ಸಮಾಜದಲ್ಲಿಯ ಪ್ರತಿಷ್ಠಿತ ಗೃಹಸ್ಥರೆಂದು ಜನರು ತಿಳಿಯುತ್ತಿದ್ದರು. ಅವರ ವ್ಯವಸಾಯವು ಸಮಾಜಕ್ಕೆ ಅವಶ್ಯವಾಗಿದ್ದು ಒಳ್ಳೇ ಹಿತಕರವಾದು ದ್ದೆಂದು ಗೊತ್ತಾಗಿತ್ತು. ರಾಜರೂ ಸಾಮಾನ್ಯ ಜನರೂ ತಮ್ಮ ಹಣದ ಸಂಚಯವನ್ನು ಅವರ ಕಡೆಗೆ ಸುರಕ್ಷಿತವಾಗಿ ಒಪ್ಪಿಸುತ್ತಿದ್ದರು. ಯುದ್ಧ ಕಾಲದಲ್ಲಿ ಬ್ಯಾಂಕರರು ಅರಸರಿಗೆ ಬೆಳ್ಳಿಯ ತುಪಾಕಿಗಳನ್ನು ಪೂರೈಸುತ್ತಿ ದ್ದರೆಂದು ಹೇಳುವರು. ಮೊಗಲ ಅರಸರೂ ಅವರ ಸುಭೇದಾರರೂ ಪೇಶವೆ ಯರೂ ಬ್ಯಾಂಕರರಿಂದ ಸಾಲವನ್ನು ಪಡೆಯುತ್ತಿದ್ದರು. ಅವರಿಗೋಸುಗ ಬ್ಯಾಂಕರರು ತಗಾಯಿ ವಸೂಲಿಯ ಕೆಲಸವನ್ನು ಈಗ ಸರಕಾರದ ಬ್ಯಾಂಕು ಗಳು ಮಾಡುವಂತೆ ಆ ಕಾಲದಲ್ಲಿ ಅವರು ಮಾಡುತ್ತಿದ್ದರು. ಔರಂಗಜೇಬ ನಂಥ ಬಲಿಷ್ಠ ಮುಸಲ್ಮಾನ ಅರಸನು ಆತನ ಕಾಲಕ್ಕಿದ್ದ ಮಾಣಿಕಚಂದ ಎಂಬ ಸಾವುಕಾರನನ್ನು ಶೇಟ ಮಾಣಿಕಚಂದ – ಎಂದು ಸಂಬೋಧಿಸು ತ್ತಿದ್ದನು.

ದಂತಕಥೆಯಲ್ಲಿ ವಿಶ್ವಾಸವಿದ್ದವರಿಗೆ ಒಂದು ಮನೋರಂಜಕವಾದ ಸಂಗತಿಯನ್ನು ಹೇಳುವೆವು. ಒಂದು ಹಳ್ಳಿಯಲ್ಲಿ ಒಬ್ಬ ಯಾಚಕನು ತನ್ನ ಚೀಲದಲ್ಲಿದ್ದ ಒಂದು ಹುಂಡಿಪತ್ರವನ್ನು ತೆಗೆದು ಆದರ ಹಣವನ್ನು ಯಾರಾ ದರೂ ಭಕ್ತರೊಬ್ಬರು ಕೊಡಬಹುದೆಂದು ಕೇಳಿದನು. ಆ ಹುಂಡಿಯ

ಪತ್ರವು ಶ್ರೀರಾಮಚಂದ್ರನಿಂದ ಬರೆಯಲ್ಪಟ್ಟದ್ದೆಂದು ಅವನು ಹೇಳಿದನು. ಜನರು ನಕ್ಕುಬಿಟ್ಟರು. ಆ ಯಾಚಕನ ಶಾಪದಿಂದ ಮುಕ್ತನಾಗುವ ಗೋಸುಗ ಒಬ್ಬ ಗಾಣಿಗನು ಅದರ ಹಣವನ್ನು ಕೊಟ್ಟುಬಿಟ್ಟನಂತೆ. ಆ ಹುಂಡಿಯ ಸಮಯವು ಮತ್ತು ಹಣವು ಗೊತ್ತಾಗದಿದ್ದರೂ ಹುಂಡಿಯು ಪತ್ರವು ಪುರಾಣಕಾಲದಲ್ಲಿಯಾದರೂ ಪ್ರಚಲಿತವಿದ್ದದ್ದು ಕಂಡುಬರುವದು.

ಇನ್ನು ಬರೆದಿಟ್ಟ ದಾಖಲೆಯನ್ನು ವಿಚಾರಿಸಿದರೆ ಗುಜರಾತದಲ್ಲಿ ಹೆಸರಾದ ಜುನಾಗಡ ಕವಿ ನರಸಿಂಹ ಮೇಥಾ ಎಂಬವರು ಕೆಲವು ಯಾಚಕ ಭಕ್ತರಿಗೆ ೭೦೦ ರೂಪಾಯಿಯ ಹುಂಡಿಯ ಪತ್ರವನ್ನು ಬರೆದುಕೊಟ್ಟ ಉಲ್ಲೇಖವಿದೆ. ಭಕ್ತರು ದೇವದರ್ಶನಕ್ಕಾಗಿ ದ್ವಾರಕಾಪಟ್ಟಣಕ್ಕೆ ಹೋಗುವವರಿದ್ದರು. ತಮ್ಮ ಹತ್ತರಿದ್ದ ೭೦೦ ರೂ. ಗಳ ರೋಖ ಹಣವನ್ನು ತೆಗೆದುಕೊಂಡು ಜುನಾಗಡಕ್ಕೆ ಬಂದು ಮುಟ್ಟಿದರು. ಮತ್ತು ದ್ವಾರಕಾಪಟ್ಟಣದಲ್ಲಿ ಹಣವು ಸಿಗುವಂತೆ ಯಾರಾದರೂ ತಮಗೊಂದು ಹುಂಡಿಯನ್ನು ಕೊಡಬಲ್ಲರೇ ಎಂಬ ಬಗ್ಗೆ ವಿಚಾರಿಸಿದರು. ಬೀದಿಯಲ್ಲಿಯ ಒಬ್ಬ ಮೂರ್ಖನು ನಗೆ ಮಾತೆಂದು ತಿಳಿದು ಅವರನ್ನು ಕವಿ ನರಸಿಂಹ ಮೇಥಾರ ಕಡೆಗೆ ಕಳಿಸಿದನು ಆ ಕವಿಯು ಧ್ಯಾನಸ್ಥ ಸ್ಥಿತಿಯಲ್ಲಿದ್ದುದನ್ನು ಕಂಡು ಸ್ವಲ್ಪಕಾಲ ತಡೆದು ಆತನಿಗೆ ಹುಂಡಿಯ ಬಗ್ಗೆ ವಿಚಾರಿಸಿದರು. ಶಾಂತಚಿತ್ತದಿಂದ ಆತನು ಅವರಿಂದ ೭೦೦ ರೂಪಾಯಿಗಳನ್ನು ಸ್ವೀಕರಿಸಿ ಇತರ ಭಕ್ತರಿಗೆ ಹಂಚಿ ಶಾಮಲಶಹಾ ಶೇಟ ಎಂಬವರ ಮೇಲೆ ಹುಂಡಿಯನ್ನು ಬರೆದನು. (ಶಾಮಲ ಅಂದರೆ ಶ್ರೀಕೃಷ್ಣ ). ನಂತರ ಮತ್ತೆ ಶ್ರೀಕೃಷ್ಣನನ್ನು ಸ್ಮರಿಸಿ ತನ್ನನ್ನು ಕಾಪಾಡಬೇಕೆಂದು ಪ್ರಾರ್ಥಿಸಿದನು. ಯಾಚಕರು ದ್ವಾರಕಾಪಟ್ಟಣಕ್ಕೆ ಮುಟ್ಟಿದ ನಂತರ ಶಾಮಲಶಹಾ ಶೇಟರ ಬಗ್ಗೆ ಹುಡುಕಾಡಿ ಬೇಸತ್ತರು. ಮರಳಿ ಜುನಾಗಡಕ್ಕೆ ಹೋಗಬೇಕೆಂಬ ವಿಚಾರದಲ್ಲಿದ್ದಾಗ ಶ್ರೀಕೃಷ್ಣನು ಶಾಮಲಶಹಾನ ವೇಷವನ್ನು ಧರಿಸಿ ಹುಂಡಿಯ ಹಣವನ್ನು ಯಾಚಕರಿಗೆ ಮುಟ್ಟಿಸಿದನೆಂದು ಹೇಳುವರು.

ಫೇರಿಸ್ತಾ ಎಂಬ ಮುಸಲ್ಮಾನ ಇತಿಹಾಸಕಾರನು ಬರೆದ ಮೇರೆಗೆ ೧೩೭೭ನೆಯ ಇಸ್ವಿಯಲ್ಲಿ ಗುಲಬುರ್ಗಾದ ರಾಜನು ವಿಜಯನಗರದ ಅರಸರ

ಮೇಲೆ ಒಂದು ದರ್ಶನಿ ಹುಂಡಿಯನ್ನು ಬರೆದ ಉಲ್ಲೇಖವಿರುವದು. ಆ ಹುಂಡಿಯ ಹಣವು ದೊರಕಿದ್ದರೆ ಯುದ್ಧ ಮಾಡುವ ಪ್ರಸಂಗ ಬರುವ ದೆಂಬುದನ್ನಾದರೂ ಕಣ್ಣಿಲ್ಲದ ಗಾಯಕನು ಹೇಳಿದನೆಂದು ಗೊತ್ತಾಗುವದು.

ಇವೆಲ್ಲ ಉಲ್ಲೇಖಗಳಿಂದ ಸುಮಾರು ೬೦೦ ವರ್ಷಗಳ ಪೂರ್ವದಿಂದ ಹುಂಡಿಯು ಪ್ರಚಾರದಲ್ಲಿತ್ತೆಂದು ಆ ಕಾಲದ ಜನರು ನಮ್ಮ ಆಧುನಿಕ ಬ್ಯಾಂಕುಗಳ ಪ್ರಮುಖ ಕಾರ್ಯಭಾಗವನ್ನು ಸಾಗಿಸುತ್ತಿದ್ದರೆಂದೂ ತಿಳಿಯುವದು. ಒಂದು ನೂರು ವರ್ಷಗಳ ಪೂರ್ವದಲ್ಲಿ ಬ್ಯಾಂಕುಗಳು ಅಸ್ತಿತ್ವದಲ್ಲಿ ಬಂದನಂತರ ಸಾವುಕಾರರು ಹೊಲದ ಸಾಗುವಳಿಗಾಗಿ ಮತ್ತು ಅಂತಸ್ಥ ವ್ಯಾಪಾರಕ್ಕಾಗಿ ಹಣವನ್ನು ಪೂರೈಸುತ್ತಿದ್ದರು. ಮಾತ್ರ, ಈಗಿನಂತೆ ಖಾತೇದಾರರಿಗೆ ಚೆಕ್ಕುಗಳನ್ನು ಬರೆಯುವ ಸೌಕರ್ಯವಿದ್ದಿಲ್ಲ.

೧೭೭೦ ನೇ ಇಸ್ವಿಯ ನಂತರ ನಮ್ಮ ಸಂಬಂಧವು ಪಾಶ್ಚಾತ್ಯ ದೇಶ ದವರೊಂದಿಗೆ ಬರುತ್ತ ಹೋಯಿತು. ಅವರ ಸಂಸ್ಕೃತಿ, ಆಚಾರ ವಿಚಾರ ಗಳ ಸಂಪರ್ಕವು ಆಗಹತ್ತಿತು. ಇಂದಿಗೂ ಅದೇ ಪರಿಸ್ಥಿತಿಯು ಇದೆ. ಇನ್ನು ಮುಂದಿನ ವೃತ್ತಾಂತನ್ನು ನಿರೂಪಿಸುವದು ಮುಂದಿನ ಲೇಖಕರ ಕಾರ್ಯವು. ಈಸ್ಟ ಇಂಡಿಯಾ ಕಂಪನಿಯವರು ನಮ್ಮ ಶ್ರೇಷ್ಠಿಗಳಿಗೆ ಬಹು ಮಾನವನ್ನು ಕೊಡುತ್ತಿದ್ದರು. ನಮ್ಮ ದೇಶದ ಲೆಕ್ಕದ ಪದ್ಧತಿಯು ಅವರಿಗೆ ತಿಳಿಯದಂತಾಯಿತು. ೧೬೭೭ ನೆಯ ಇಸ್ವಿಯಲ್ಲಿ ಕಂಪನಿಯ ಡಾಯ- ರೆಕ್ಟರರು ತಮ್ಮ ಪರಿಚಾರಕರಿಗೆ ನಮ್ಮ ದೇಶದ ಭಾಷೆಯನ್ನು ಲೆಕ್ಕವನ್ನು ಕಲಿಯುವ ಬಗ್ಗೆ ೨೦ ಪೌಂಡು ಮೆಚ್ಚುಗಳನ್ನಾದರೂ ಕೊಡುತ್ತಿದ್ದರು. ೧೭೫೫ ನೆಯ ಇಸ್ವಿಯಲ್ಲಿ ಕ್ಲೈವ್ಹನು ಜಗತ್‌ಶೇಟನೆಂಬ ಸಾವುಕಾರನನ್ನು ನಾಲ್ಕು ದಿನಗಳ ವರೆಗೆ ಸನ್ಮಾನಿಸಿ ೧೪೦೦೦ ರೂಪಾಯಿಗಳ ಕಾಣಿಕೆಯನ್ನು ಕೊಟ್ಟನೆಂದು ಉಲ್ಲೇಖವಿದೆ. ಈ ರೀತಿಯಿಂದ ಅವರು ಸಾವುಕಾರರನ್ನು ಒಲಿಸಿಕೊಂಡರು. ಅವರ ಮನೆಗಳಲ್ಲಿ ಕಾರಸ್ಥಾನದ ಕೃತ್ಯಗಳು ನಡೆಯ ಹತ್ತಿದವು.

ಕಂಪನಿ ಸರಕಾರದವರ ಜೊತೆಗೆ ವ್ಯಾಪಾರವನ್ನು ಮಾಡುತ್ತಿದ್ದವ ರಿಗೆ ನಮ್ಮ ಸಾವುಕಾರರ ಉಪಯೋಗವು ಆಗದ್ದರಿಂದ ಮತ್ತು ಸಾವುಕಾರರ

ಭಾಷೆಯು, ಕಾರ್ಯಪದ್ಧತಿಯು ಗೊತ್ತಾಗದ್ದರಿಂದ ತಮಗೆ ಅನುಕೂಲ ವಾಗುವಂತೆ ಆಧುನಿಕ ರೀತಿಯ ಬ್ಯಾಂಕರರನ್ನು ಹುಡುಕಲಾರಂಭಿಸಿದರು. ಈ ಬ್ಯಾಂಕರರು ಕೇವಲ ವ್ಯಾಪಾರಕ್ಕಷ್ಟೆಯೇ ಹಣವನ್ನು ಪೂರೈಸುವ ವರಾಗದೆ, ರಾಜಕಾರಣಕ್ಕಾದರೂ ಕೈಗೂಡುವವರಿರಬೇಕೆಂಬ ಉದ್ದೇಶ ವಾದರೂ ಅವರಿಂದ ಸಾಧ್ಯವಾಗಬೇಕೆಂದು ಕಂಪನಿಯವರ ಯೋಜನೆ ಯಿತ್ತು. ಈ ಕಾರಸ್ಥಾನದ ಮೂಲಕ ನಮ್ಮಲ್ಲಿಯ ಸಾವುಕಾರರ ಪ್ರತಿ ಷ್ಠೆಯು ಕಡಿಮೆ ಆಯಿತು. ಒಂದು ಸಮಯಕ್ಕೆ ಅಗ್ರಸ್ಥಾನದಲ್ಲಿದ್ದವರಿಗೆ ಕೆಳಗಿನ ಸ್ಥಾನದಲ್ಲಿರಬೇಕಾಗಿ ಬಂತು.

ಈ ಮೇರೆಗೆ ೧೭೭೦ನೆಯ ಇಸ್ವಿಯಲ್ಲಿ 'ಅಲೆಕ್ಸಾಂಡರ ಅ್ಯಂಡ ಕಂಪನಿ' ಎಂಬ ಸಾಮೂಹಿಕ ಬಂಡವಲದ ಸಂಸ್ಥೆಯು ಅಸ್ತಿತ್ವದಲ್ಲಿ ಬಂದಿತು. ಅವರು 'ಹಿಂದುಸ್ತಾನ ಬ್ಯಾಂಕ' ಎಂಬ ಹೆಸರಿನಿಂದ ವ್ಯವ ಸಾಯವನ್ನು ಮಾಡಹತ್ತಿದರು. ನಮ್ಮ ಸಾವುಕಾರರು ಮಾಡುತ್ತಿದ್ದ ಎಲ್ಲ ವ್ಯವಹಾರಗಳನ್ನು ಮಾಡಿ ಅವರಗೂಡ ಬಳಿಕೆ ಖಾತೆಯನ್ನಾದರೂ ಇಟ್ಟು ಕೊಳ್ಳಹತ್ತಿದರು. ಪಾಶ್ಚಾತ್ಯದೇಶದಲ್ಲಿಯ ಆ ಕಾಲದ ಬ್ಯಾಂಕಿನವರಂತೆ ಚಲನಿ ನೋಟುಗಳನ್ನು ಮುದ್ರಿಸುವ ಉಪಕ್ರಮವನ್ನಾದರೂ ಇವರು ಪ್ರಾರಂಭಿಸಿದರು. ಈ ನೋಟುಗಳು ಸರಕಾರದ ಮಾನ್ಯತೆಪಡೆದಿರದಿದ್ದರೂ ಹತ್ತರದ ಪ್ರದೇಶದಲ್ಲಿ ಪ್ರಸಾರವಾದವು. ಸುಮಾರು ೪೦-೫೦ ಲಕ್ಷ ರೂ. ಗಳ ನೋಟುಗಳನ್ನು ಅವರು ಮುದ್ರಿಸಿದ ಬಗ್ಗೆ ಉಲ್ಲೇಖವುಂಟು.

೧೮೮೯-೧೮೯೯ ಈ ಹತ್ತು ವರ್ಷಗಳಲ್ಲಿ ದೇಶದಲ್ಲಿಯ ಅಸ್ವಸ್ಥತೆಯ ಮೂಲಕ ಜನರು ೨೦-೩೦ ಲಕ್ಷ ರೂಪಾಯಿಗಳ ನೋಟುಗಳನ್ನು ತಿರುಗಿ ಕೊಟ್ಟು ರೋಖು ಹಣವನ್ನು ನಾಣ್ಯಗಳ ರೂಪದಲ್ಲಿ ತೆಗೆದುಕೊಂಡರು. ೧೮೩೨ನೇ ಇಸ್ವಿಯಲ್ಲಿ ಈ ಬ್ಯಾಂಕು ಮುಳುಗಿತು. ಆ ಮೇಲೆ ಕಲಕತ್ತೆ ಯಲ್ಲಿ ಧನಿಕಜನರ ಸಹಾಯದಿಂದ 'ಯೂನಿಯನ್ ಬ್ಯಾಂಕ' ಎಂಬ ದೊಂದು ಹೊಸ ಶಾಖೆ ಹೊರಟಿತು. ಮತ್ತು ಅದಾದರೂ ೧೮೪೮ರಲ್ಲಿ ಮುಳುಗಿತು.

ಇದೇ ಸಮಯಕ್ಕೆ ಕಂಪನಿಸರಕಾರದ ಸನದನ್ನು ಪಡೆದ 'ಬ್ಯಾಂಕ್ ಆಫ್ ಬೆಂಗಾಲ' ಎಂಬ ಸಂಸ್ಥೆಯು ಸ್ಥಾಪನವಾಯಿತು. ಅದೇ ಮೇರೆಗೆ

೧೮೪೦ನೇ ಇಸ್ವಿಯಲ್ಲಿ '**ಬ್ಯಾಂಕ ಆಫ್ ಬಾಂಬೆ**' ಮತ್ತು ೧೮೪೩ರಲ್ಲಿ '**ಬ್ಯಾಂಕ ಆಫ್ ಮದ್ರಾಸ**' ಎಂಬ ಎರಡು ಬ್ಯಾಂಕುಗಳು ಹೊರಟವು. ೧೮೬೮ನೇ ಇಸ್ವಿಯಲ್ಲಿ 'ಬ್ಯಾಂಕ ಆಫ್ ಬಾಂಬೆ' ಕಂಪನಿಯು ನಿಂತು ಹೋಗಿ ಎರಡನೆಯ ಬ್ಯಾಂಕು ಅದೇ ಹೆಸರಿನಿಂದ ಹೊರಟಿತು. ಮೂರೂ ಬ್ಯಾಂಕುಗಳಲ್ಲಿ ಕಂಪನಿ ಸರಕಾರದ ಬಂಡವಲವಿದ್ದು ಅವರ ಡಾಯರೆಕ್ಟರ ರಾವರೂ ಈ ಕಂಪನಿಯಲ್ಲಿದ್ದರು. ಮುಂಬಯಿಯಲ್ಲಿಯ ಬ್ಯಾಂಕು ನಿಂತು ಹೋದಮೂಲಕ ಕಂಪನಿಯ ವರಿಗೆ ಹಾನಿ ತಟ್ಟಿದ್ದರಿಂದ ಅವರು ಎಲ್ಲ ಬ್ಯಾಂಕುಗಳಿಂದ ತಮ್ಮ ಬಂಡವಲವನ್ನು ಮಾರಿಬಿಟ್ಟರು. ೧೮೬೨ ನೇ ಇಸ್ವಿಯಲ್ಲಿ ಸರಕಾರದವರು ಈ ಬ್ಯಾಂಕುಗಳ ನೋಟು ಮುದ್ರಣದ ಅಧಿಕಾರವನ್ನು ರದ್ದುಪಡಿಸಿದರು. ಮತ್ತು ಸರಕಾರದ ಉತ್ಪನ್ನದಲ್ಲಿಯ ಕೆಲ ಭಾಗವನ್ನು ಈ ಬ್ಯಾಂಕುಗಳಲ್ಲಿ ಇಡಹತ್ತಿದರು. ನಂತರ, ೧೯೨೧ನೆಯ ಇಸ್ವಿಯಲ್ಲಿ ಈ ಮೂರೂ ಬ್ಯಾಂಕುಗಳನ್ನು ಒಟ್ಟುಗೂಡಿಸಿ '**ಇಂಪೀರಿಯಲ್ ಬ್ಯಾಂಕ ಆಫ್ ಇಂಡಿಯಾ**' ಎಂಬ ಹೆಸರಿನ ಸಂಯುಕ್ತ ಬ್ಯಾಂಕಿನ ಸಂಸ್ಥೆಯು ಸಾಮೂಹಿಕ ಬಂಡವಲಿನ ಸರಕಾರದ ಮಾನ್ಯತೆಪಡೆದ ಮತ್ತು ಕಾಯದೆಯಿಂದ ಬದ್ಧವಾದ ಸಂಸ್ಥೆಯು ಸ್ಥಾಪಿತವಾಯಿತು.

ಹಿಂದೀ ಸಾಮೂಹಿಕ ಬಂಡವಲದ ಅನೇಕ ಬ್ಯಾಂಕುಗಳು ೧೮೬೦ ನೆಯ ಇಸ್ವಿಯ ನಂತರ ಹೊರಟವು. ಬ್ಯಾಂಕುಗಳ ವ್ಯವಸ್ಥಾಪಕರು ಪರದೇಶದವರಿದ್ದರು. ಇದೂ ವರೆಗೆ ಅವುಗಳಲ್ಲಿಯ **ಅಲಾಹಾಬಾದ ಬ್ಯಾಂಕ** (ಸ್ಥಾ. ೧೮೬೫) ಮತ್ತು **ಪಂಜಾಬ ನ್ಯಾಶನಲ್ ಬ್ಯಾಂಕ** (ಸ್ಥಾ. ೧೮೯೪) ಈ ಬ್ಯಾಂಕುಗಳು ಈಗಲೂ ಊರ್ಜಿತಸ್ಥಿತಿಯಲ್ಲಿರುವವು. ೧೮೯೪–೧೯೦೪ ಈ ಅವಧಿಯಲ್ಲಿ ದೊಡ್ಡ ಬ್ಯಾಂಕುಗಳು ಹೊರಡಲಿಲ್ಲ. ೧೯೦೪ ನೆಯ ಇಸ್ವಿಯ ನಂತರ ಮತ್ತೊಮ್ಮೆ ಹೊಸ ಬ್ಯಾಂಕುಗಳಿಗೆ ಉದಯಕಾಲವು ಪ್ರಾಪ್ತವಾಯಿತು. ೧೯೦೬ ರಲ್ಲಿ '**ಬ್ಯಾಂಕ ಆಫ್ ಇಂಡಿಯಾ**' ಹೊರಟಿತು. ೧೯೧೧ ರಲ್ಲಿ '**ಸೆಂಟ್ರಲ್ ಬ್ಯಾಂಕ ಆಫ್ ಇಂಡಿಯಾ**' ಹೊರಟು ಅದರಲ್ಲಿ ೧೯೨೩ರಲ್ಲಿ '**ಟಾಟಾ ಇಂಡಸ್ಟ್ರಿಯಲ್ ಬ್ಯಾಂಕ**' ಎಂಬ ಸಂಸ್ಥೆಯು ಸಮಾವಿಷ್ಟವಾಯಿತು. ಇವೆರಡೂ ಮೇಲ್ತರಗತಿಯ ಬ್ಯಾಂಕುಗಳಿದ್ದು ಊರ್ಜಿತ

ಸ್ಥಿತಿಯಲ್ಲಿರುವವು. ಈಗ 'ಬ್ಯಾಂಕ ಆಫ್ ಇಂಡಿಯಾ' ಈ ಸಂಸ್ಥೆಯ ವಸೂಲಾದ ಬಂಡವಲವು ಎರಡು ಕೋಟಿ ರೂಪಾಯಿಗಳಿದ್ದು ಅದರ ರಿಝರ್ವ ಫಂಡು ೨ತ್ತಿ ಕೋಟಿ ರೂಪಾಯಿ ಇರುವದು. 'ಸೆಂಟ್ರಲ್ ಬ್ಯಾಂಕ ಆಫ್ ಇಂಡಿಯಾ' ಕಂಪನಿಯ ವಸೂಲಾದ ಬಂಡವಲವು ೩ ಕೋಟಿ ೧೫ ಲಕ್ಷ ರೂಪಾಯಿಗಳಿದ್ದು ಆದರ ರಿಝರ್ವಫಂಡು ೩ ಕೋಟಿ ೧೬ ಲಕ್ಷ ರೂಪಾಯಿ ಇರುವದು. ಕಳೆದ ೧೯೩೯–೧೯೪೬ ನೆಯ ಯುದ್ಧಕಾಲದಲ್ಲಿ ಇನ್ನೂ ಅನೇಕ ದೊಡ್ಡ ಬಂಡವಲದ ಬ್ಯಾಂಕುಗಳು ಹೊರಟ ಬಗ್ಗೆ ಮುಂದೆ ವಿವರಿಸುವೆವು.

೧೯೨೧ ರಲ್ಲಿ ಸ್ಥಾಪಿತವಾದ ಸರಕಾರದ ಮಾನ್ಯತೆ ಪಡೆದ 'ಇಂಪೀರಿಯಲ್ ಬ್ಯಾಂಕ ಆಫ ಇಂಡಿಯಾ'ದ ವಸೂಲಾದ ಬಂಡವಲವು ೫ ಕೋಟಿ ೬೨ ಲಕ್ಷ ರೂಪಾಯಿಗಳಿದ್ದು ಅದರ ರಿಝರ್ವ ಫಂಡಾದರೂ ೬ ಕೋಟಿ ೨೭ ಲಕ್ಷ ರೂಪಾಯಿ ಇರುವದು. ಸರಕಾರದ ಯೋಜನೆ ಮೇರೆಗೆ ಈ ಬ್ಯಾಂಕು ಮಧ್ಯವರ್ತಿ ಬ್ಯಾಂಕಿನ (Reserve Bank Of India) ಎಜಂಟರಾಗಿ ಕೆಲಸವನ್ನು ಮಾಡುವದು. ಇದರ ಹೊರತಾಗಿ ಇತರ ಬ್ಯಾಂಕುಗಳು ಮಾಡತಕ್ಕ ಎಲ್ಲ ವ್ಯವಹಾರವನ್ನು ತಮ್ಮ ಮುಂಬಯಿ, ಮದ್ರಾಸ, ಕಲಕತ್ತಾ ಈ ಮೂರು ಮುಖ್ಯ ಕಚೇರಿಗಳ ಮತ್ತು ದೇಶದಲ್ಲಿಯ ಸುಮಾರು ೩೫೦ ಶಾಖೆಗಳ ಮುಖಾಂತರವಾಗಿ ಮಾಡುವದು.

## 'ಎಕ್ಸಚೇಂಜ' ಬ್ಯಾಂಕುಗಳು

ಈ ಬ್ಯಾಂಕುಗಳು ಪರರಾಷ್ಟ್ರಗಳಲ್ಲಿ ಸ್ಥಾಪಿತವಾದವುಗಳು. ಮೊದಲು ಬ್ರಿಟಿಶ ಸರಕಾರದವರು ಅವುಗಳ ಉಪಯೋಗವನ್ನು ಸೈನ್ಯಾಧಿಕಾರಿಗಳ ಸಹಾಯಕ್ಕಾಗಿ ಮತ್ತು ನಿರ್ಯಾತ ವ್ಯಾಪಾರಕ್ಕೆ ಅನುಕೂಲವಾಗುವಂತೆ ಮಾಡುತ್ತಿದ್ದರು. ಈಚೆಗೆ ಅವು ಅಂತರ್ಗತ ವ್ಯವಹಾರದಲ್ಲಿಯಾದರೂ ಪ್ರಾಮುಖ್ಯದಿಂದ ವ್ಯವಹಾರವನ್ನು ಮಾಡುತ್ತಿರುವವು. ಈಗ ದೇಶದಲ್ಲಿ ಈ ಪ್ರಕಾರ ೧೫ ಬ್ಯಾಂಕುಗಳಿದ್ದು ಅವುಗಳ ೬೦ ಕಚೇರಿಗಳು ಅತ್ತಿತ್ತ ಇವೆ.

ನಮ್ಮಲ್ಲಿಯ 'ಇಂಪೀರಿಯಲ್ ಬ್ಯಾಂಕ ಆಫ್ ಇಂಡಿಯಾ' 'ಸೆಂಟ್ರಲ್ ಬ್ಯಾಂಕ ಆಫ್ ಇಂಡಿಯಾ' ಮುಂತಾದ ಬ್ಯಾಂಕುಗಳಾದರೂ ಕೆಲಮಟ್ಟಿಗೆ ಪರರಾಷ್ಟ್ರದ ವ್ಯವಹಾರವನ್ನಾದರೂ 'ಎಕ್ಸಚೇಂಜ' ಬ್ಯಾಂಕುಗಳಂತೆ ಮಾಡುವವು.

## ಸಹಕಾರೀ ( ಕೋ-ಆಪರೇಟಿವ್ಹ ) ಬ್ಯಾಂಕುಗಳು

ಸಮಾಜದಲ್ಲಿಯ ವ್ಯಾಪಾರ ಉದ್ಯೋಗದ ವರ್ಗದವರಿಗೆ ವ್ಯಾಪಾರೀ ಬ್ಯಾಂಕುಗಳು ಅನುಕೂಲವಿರುವವು. ಒಕ್ಕಲತನದ ವ್ಯವಸಾಯಕ್ಕೆ ಹಣದ ಪೂರೈಕೆಯು ಈ ಬ್ಯಾಂಕುಗಳಿಂದ ಆಗದ್ದರಿಂದ ಮತ್ತು ಆ ವ್ಯವಸಾಯವಾದರೂ ವಿಶಿಷ್ಟಪ್ರಕಾರದ್ದಿದ್ದದರಿಂದ ಅದಕ್ಕೆ ತಕ್ಕ ಹಣದ ಪೂರೈಕೆಗೋಸುಗ ಸಹಕಾರಿ ತತ್ವಕ್ಕನುಸರಿಸಿ ಈ ಬ್ಯಾಂಕುಗಳು ಹೊರಟವು. ಬ್ಯಾಂಕಿಂಗ ಕಮೀಟಿಯ ವಿಚಾರಣೆ ಮೇರೆಗೆ ಒಕ್ಕಲತನದ ವ್ಯವಸಾಯಗಾರರ ಒಟ್ಟು ಸಾಲದ ರಕಮು ಸುಮಾರು ೯೦೦ ಕೋಟಿ ರೂಪಾಯಿಗಳವರೆಗೆ ಇರಬಹುದು. ಅದರಲ್ಲಿ ೫೦೦ ಕೋಟಿ ರೂಪಾಯಿಗಳು ದೀರ್ಘಾವಧಿ ಸಾಲವಿದ್ದು ೪೦೦ ಕೋಟಿ ರೂಪಾಯಿಗಳು ಅಲ್ಪಾವಧಿ ಸಾಲವಿರುವದು. ಅದರ ನಿವಾರಣಕ್ಕಾಗಿ ಕೇವಲ ೪೦ ಕೋಟಿ ರೂಪಾಯಿಗಳು ಸಹಕಾರಿ ಸೊಸಾಯಿಟಿಗಳ ಮುಖಾಂತರ ಕೂಡಿಸಿದ್ದು ೧.೨ ಕೋಟಿ ರೂಪಾಯಿಗಳನ್ನಷ್ಟೇ ಸರಕಾರದಿಂದ ಹಾಕಿದ್ದಿರುವದು. ಸಹಕಾರಿ ಸೊಸಾಯಿಟಿಗಳು ನಿಕೃಷ್ಟಾವಸ್ಥೆಯಲ್ಲಿರುವದರಿಂದ ಅವರ ಹತ್ತರದ ಧನಸಂಚಯವು ತೀರ ಕಡಿಮೆಯಿರುವದು. ಅದಕ್ಕೆ ಸಹಾಯವಾಗುವಂತೆ ಜಿಲ್ಹಾ ಸ್ಥಳಗಳಲ್ಲಿ ಡಿಸ್ಟ್ರಿಕ್ಟ ಸೆಂಟ್ರಲ್ ಕೋಆಪರೇಟಿವ್ಹ ಬ್ಯಾಂಕುಗಳು ಸ್ಥಾಪಿತವಾದವು. ಸ್ಥಾನಿಕ ಸೊಸಾಯಿಟಿಗಳಿಗೆ ಹಣದ ಪೂರೈಕೆಯು ಜಿಲ್ಲಾ ಬ್ಯಾಂಕುಗಳಿಂದಾಗಿ ಜಿಲ್ಹಾ ಬ್ಯಾಂಕುಗಳ ಮಧ್ಯವರ್ತಿ ಬ್ಯಾಂಕು ಇಲಾಖೆಯ ಶಹರದಲ್ಲಿರುವದು.

ಈ ಘಟನೆಯ ಪ್ರಕಾರ ನಮ್ಮ ದೇಶದಲ್ಲಿ ಸುಮಾರು ೧ ಲಕ್ಷ ಸಹಕಾರಿ ಸೊಸಾಯಿಟಿಗಳು ಮತ್ತು ಸುಮಾರು ೨೦ ಸಾವಿರ ಇತರ ಮಿಕ್ಕ ವ್ಯವಸಾಯಗಾರ ಸೊಸಾಯಿಟಿಗಳಿರುವವು. ಇವೆಲ್ಲ ಸಂಸ್ಥೆಗಳ ಹಣದ

ಪೂರೈಕೆಯು ಸುಮಾರು ೭೦೦ ಸಹಕಾರಿ ಬ್ಯಾಂಕುಗಳಿಂದ ಮತ್ತು ೧೫|೨೦ ಮಧ್ಯವರ್ತಿ ಸಹಕಾರಿಬ್ಯಾಂಕುಗಳಿಂದ ಆಗುವದು.

## ಲ್ಯಾಂಡ ಮಾರ್ಗೇಜ (ಹೊಲ ಒತ್ತಿ) ಬ್ಯಾಂಕುಗಳು

ಒಕ್ಕಲತನದ ವ್ಯವಸಾಯದ ಆರ್ಥಿಕ ಪ್ರಶ್ನೆಯು ಮೂರು ಪ್ರಕಾರದ್ದಿರುವದು. (೧) ಬಳಿಕೆ ವ್ಯವಹಾರಕ್ಕೆ ಬೇಕಾಗುವ ಹಣದ ಸಹಾಯವು (೨) ಉತ್ಪಾದನವನ್ನು ಹೆಚ್ಚಿಸುವಗೋಸುಗ ಬೇಕಾಗುವ ಹಣವು. (೩) ಸಾಲನಿವಾರಣೆಗಾಗಿ ಬೇಕಾಗುವ ಹಣದ ಸಹಾಯವು.

ಅಲ್ಪಾವಧಿ ಠೇವುಗಳ ಮೇಲೆ ಉಪಜೀವಿಸುವ ವ್ಯಾಪಾರಿ ಬ್ಯಾಂಕುಗಳಿಗೆ ಈ ತರದ ಸಾಲದ ವ್ಯವಹಾರವು ಅಯೋಗ್ಯವಿದ್ದ ಕಾರಣ ಸಹಕಾರಿ ಬ್ಯಾಂಕುಗಳು ಹೊರಟವು. ಸಹಕಾರಿ ಸೊಸಾಯಿಟಿಗಳು ಮತ್ತು ಬ್ಯಾಂಕುಗಳು ಮೊದಲನೆಯ ಎರಡು ಕೊರತೆಗಳನ್ನು ಅಲ್ಪಮಟ್ಟಿಗೆಯಾದರೂ ಕಡಿಮೆ ಮಾಡಬಲ್ಲವು. ಸಾಲದ ನಿವಾರಣೆಯ ಪ್ರಶ್ನೆಯು ಕಠಿಣವಿದ್ದುದರಿಂದ ಅದರ ಸಲುವಾಗಿ ಬೇರೆ ತರದ ಹಣದ ನಿರ್ಮಿತಿಯಾಗುವದು ಅವಶ್ಯವಿದ್ದದ್ದು ಕಂಡು ಹೊಲಗಳ ತಾರಣದ ಮೇಲೆ, ಶೀರ ದೀರ್ಘಾವಧಿಯ ಸಾಲದ ಯೋಜನೆಯನ್ನು 'ಲ್ಯಾಂಡ ಮಾರ್ಗೇಜ'ದ ಬ್ಯಾಂಕುಗಳ ಮುಖಾಂತರ ಮಾಡಲಾಯಿತು. ಇಲ್ಲಿ ವಿಶ್ವಾಸಪತ್ರಗಳ ಆಧಾರದ ಮೇಲೆಯೂ ಹಣ ಕೊಡುವರು. ಆದರೆ ಅವು ಸರಕಾರೀ ವಿಶ್ವಾಸಪತ್ರಗಳೂ ಮತ್ತು ಸರಕಾರದಿಂದ ಮಾನ್ಯತೆ ಪಡೆದಂಥವೂ ಮಾತ್ರ ಇರಬೇಕು. ಈ ಬಗೆಯ ಸಹಾಯದಿಂದ ಋಣಮುಕ್ತರಾಗಬಹುದೆಂದು ಆಶಿಸಲಾಗಿದೆ.

ಈ ಪ್ರಕಾರದ 'ಲ್ಯಾಂಡ ಮಾರ್ಗೇಜ ಬ್ಯಾಂಕು'ಗಳು ಜರ್ಮನಿಯಲ್ಲಿ ಪ್ರಥಮ ಸ್ಥಾಪಿಸಲ್ಪಟ್ಟವು. ನಮ್ಮ ದೇಶದಲ್ಲಿ ಮೊದಲನೆಯ ಬ್ಯಾಂಕು ೧೯೨೦ನೇ ಇಸ್ವಿಯಲ್ಲಿ ಪಂಜಾಬದಲ್ಲಿ ಹೊರಟಿತು. ಮಧ್ಯಪ್ರಾಂತದಲ್ಲಿ ಸುಮಾರು ೧೪ ಸಣ್ಣ ಸಣ್ಣ ಪ್ರಾಥಮಿಕ ಬ್ಯಾಂಕುಗಳಿರುವವು. ಮದ್ರಾಸ ಪ್ರಾಂತದಲ್ಲಿ ೧೯೨೯ನೇ ಇಸ್ವಿಯಲ್ಲಿ ಮಧ್ಯವರ್ತಿ ಬ್ಯಾಂಕು ಹೊರಟು ಅದರ ಕಾರ್ಯಕ್ಷೇತ್ರದಲ್ಲಿ ೧೦೪ ಮಿಕ್ಕ ಬ್ಯಾಂಕುಗಳಿರುವವು. ೧೯೨೦ ರಲ್ಲಿ ಮುಂಬಯಿ ಪ್ರಾಂತಿಕ ಬ್ಯಾಂಕು ಸ್ಥಾಪಿಸಲ್ಪಟ್ಟಿತು.

# ದೇಶದಲ್ಲಿಯ ಬ್ಯಾಂಕಿಂಗದ ಸದ್ಯಸ್ಥಿತಿಯು

| ೧ | ಬ್ಯಾಂಕುಗಳು | ಸಂಖ್ಯೆಯು | ಬ್ಯಾಂಕುಗಳ ಶಾಖೆಗಳ ಸಂಖ್ಯೆಯು |
|---|---|---|---|
| (ಅ) | ಎಕ್ಸಚೇಂಜ ಬ್ಯಾಂಕುಗಳು | ೧೫ | ೬೩ |
| (ಬ) | ವ್ಯಾಪಾರಿ "ಶೆಡ್ಯೂಲ್ಡ್" | ೮೬ | |
| | "ಇಂಪೀರಿಯಲ್ ಬ್ಯಾಂಕ್" | .... | ೩೬೬ |
| | ಪ್ರಮುಖ ೫ ದೊಡ್ಡ ಬ್ಯಾಂಕುಗಳು | .... | ೬೭೬ |
| | ಇತರ ಶೆಡ್ಯೂಲ್ಡ್ ಬ್ಯಾಂಕುಗಳು | .... | ೧೮೯೨ |
| | | ೧೦೧ | ೩೦೦೮ |
| (ಕ) | ಇತರ ವ್ಯಾಪಾರಿ ಬ್ಯಾಂಕುಗಳು | ೬೦೦ | ೨೦೦೦ |
| | | ೭೦೧ | ೫೦೦೮ |
| (ಡ) | ಸಹಕಾರಿ ಬ್ಯಾಂಕುಗಳು | ೩೬೩ | — |
| | | ೧೦೬೪ | ೫೦೦೮ |

| ೨ | | ವಸೂಲಾದ ಬಂಡವಲು ಮತ್ತು ರಿಝರ್ವ್ ಫಂಡು ಕೋಟಿ ರೂ. ಗಳಲ್ಲಿ | ಠೇವಿನ ಹಣ ಕೋಟಿ ರೂ. ಗಳಲ್ಲಿ |
|---|---|---|---|
| (ಅ) | ಎಕ್ಸಚೇಂಜ ಬ್ಯಾಂಕ | (ನಮ್ಮ ದೇಶಕ್ಕೆ ಸಂಬಂಧವಿಲ್ಲ) | ೧೬೬ |
| (ಬ) | ಇಂಪೀರಿಯಲ್ ಬ್ಯಾಂಕ | ೧೨ | ೨೧೮ |
| | ಇತರ ಶೆಡ್ಯೂಲ್ಡ ಬ್ಯಾಂಕುಗಳು | ೬೦ | ೬೦೦ |
| (ಕ) | ಇತರ ವ್ಯಾಪಾರಿ ಬ್ಯಾಂಕುಗಳು | ೪ | ೫೦೦ |
| | | ೭೬ | ೧೪೮೪ |
| (ಡ) | ಸಹಕಾರಿ ಬ್ಯಾಂಕುಗಳು | ೧೪ | ೫೮ |
| | | ೯೦ | ೧೫೪೨ |

## ೩ ಬ್ಯಾಂಕುಗಳಲ್ಲಿಯ ಹಣದ ವಿನಿಯೋಗವು

ಮೇಲಿನ ವರ್ಗೀಕರಣದ ಮೇರೆಗೆ, ಬ್ಯಾಂಕುಗಳು ತಮ್ಮ ಕೈಯಲ್ಲಿದ್ದ ಹಣದ ವಿನಿಯೋಗವನ್ನು ಠೇವುಗಳ ಪ್ರಮಾಣದಿಂದ ಯಾವ ಮೇರೆಗೆ ಮಾಡಿರುವರೆಂಬದನ್ನು ನೋಡುವಾ

| | ಕೈಯಲ್ಲಿಯ ಶಿಲಕು, ಮತ್ತು ಬ್ಯಾಂಕು ಖಾತೆಯಲ್ಲಿದ್ದದ್ದು. | ವಿಶ್ವಾಸ ಪತ್ರಗಳಲ್ಲಿ ತೊಡಕಿದ್ದು | ಸ್ಥಾವರ ಆಸ್ತಿಯಲ್ಲಿ ಹಾಕಿದ್ದು. | ಸಾಲವಾಗಿ ಕೊಟ್ಟಿದ್ದು |
|---|---|---|---|---|
| (ಅ) ಎಕ್ಸ್‌ಚೇಂಜ | × | × | × | × |
| (ಬ) ಇಂಪೀರಿಯಲ್ | ೧೬% | ೫೯% | ೦·೫೭% | ೨೮% |
| "ಇತರ ಶೆಡ್ಯೂಲ್ಡ" | ೧೯·೫% | ೫೧·೫% | ೦·೭೦% | ೪೦·೮% |
| (ಕ) ಇತರ ವ್ಯಾಪಾರಿ | ೩೩·೬% | ೩೦% | ೧·೬೧% | ೪೭·೫% |
| (ಡ) ಸಹಕಾರಿ | ೧೧% | × | × | ೫೮·೧% |

---

# “ಬ್ಯಾಂಕಿಂಗ ಕಂಪನೀಜ ಆ್ಯಕ್ಟ (೧೯೪೯)”

## ೧. ‘ಆ್ಯಕ್ಟ ೧೦–೧೯೪೯’

ನಮ್ಮ ದೇಶದಲ್ಲಿ ೧೯೩೬ನೆಯ ಇಸ್ವಿಯ ವರೆಗೆ ಬ್ಯಾಂಕಿಂಗ ಕಂಪನಿಗಳ ವಿಷಯವಾಗಿ ಕಾಯದೆಯು ಇದ್ದಿಲ್ಲ. ಮಧ್ಯವರ್ತಿ ಬ್ಯಾಂಕಿಂಗ ಇನ್‌ಕ್ವಾಯರಿ ಕಮೀಟಿಯ ಶಿಫಾರಸುಗಳಿಗನುಸಾರವಾಗಿ ಕಂಪನಿ ಆ್ಯಕ್ಟ ಕೊನೆಗೆ ಪರಿಶಿಷ್ಟ ೧೦ (ಅ) ಎಂಬುದನ್ನು ಸರಕಾರದವರು ಜೋಡಿಸಿದರು. ೧೯೩೯ನೆಯ ಇಸ್ವಿಯಲ್ಲಿ ರಿಝರ್ವ ಬ್ಯಾಂಕಿನವರು ಬ್ಯಾಂಕಿಂಗದ ವ್ಯವಸಾಯಕ್ಕನುಸರಿಸಿ ಸ್ವತಂತ್ರ ಕಾಯದೆಯನ್ನು ಮಾಡಬೇಕೆಂದು ಸೂಚಿಸಿದರೂ ಯುದ್ಧಪರಿಸ್ಥಿತಿಯ ಮೂಲಕ ಅದರ ಬಗ್ಗೆ ಸರಕಾರದವರು ಆ ಕಾಲಕ್ಕೆ ವಿಚಾರಿಸಲಿಲ್ಲ. ೧೯೪೨ ಮತ್ತು ೧೯೪೪ನೆಯ ಇಸ್ವಿಯಲ್ಲಿ ಕಂಪನಿ ಆ್ಯಕ್ಟ ಪರಿಶಿಷ್ಟ ಅ ಇದನ್ನೇ ವಿಸ್ತಾರಮಾಡಿ ತಿದ್ದುಪಡಿ ಮಾಡಿದರು. ಆದರೂ ಠೇವುದಾರರ ಸುರಕ್ಷಿತತೆಗಾಗಿ ಸ್ವತಂತ್ರ ಕಾಯದೆ ಅವಶ್ಯವಿದ್ದದ್ದು ಕಂಡುಬಂತು. ಅಲ್ಲಲ್ಲಿ ಹೊಸ ಬ್ಯಾಂಕುಗಳು ಮತ್ತು ಅದರ ಶಾಖೆಗಳು ಹೊರಡಹತ್ತಿದ್ದರಿಂದ ಕಾಯದೆಯ ಅವಶ್ಯಕತೆಯು ಹೆಚ್ಚಾಯಿತು. ೧೯೪೪ನೆಯ ನವಂಬರ ತಿಂಗಳಲ್ಲಿ ಇದರ ಬಗ್ಗೆ ಒಂದು ಕಾಯದೆಯನ್ನು ಸರಕಾರದವರು ಕಾಯದೆ ಮಂಡಳದಲ್ಲಿ ಮಂಡಿಸಿದರು. ನಂತರ ಆ ಬಿಲ್ಲು ಅವಧಿ ಮೀರಿಹೋಗಿ ರದ್ದಾಯಿತು. ಅದನ್ನೇ ಪ್ರಸಂಗಕ್ಕನುಸರಿಸಿ ಕೆಲವು ತಿದ್ದುಪಡಿಗಳನ್ನು ಮಾಡಿ ೧೯೪೬ನೆಯ ಮಾರ್ಚ ತಿಂಗಳಲ್ಲಿ ಮತ್ತೆ ಸರಕಾರದವರು ಕಾಯದೆ ಮಂಡಳಕ್ಕೆ ಸಾದರಪಡಿಸಿದರು. ಇದೇ ಕಾಲಕ್ಕೆ ಅವಶ್ಯವಿದ್ದ ಕೆಳಗಿನ ಕಾನೂನುಗಳು ಪ್ರಚಾರದಲ್ಲಿ ಬಂದವು:—

(೧) ಬ್ಯಾಂಕಿಂಗ ಕಂಪನಿಗಳ ತಪಾಸಣಿ ಆರ್ಡಿನನ್ಸ ೧೯೪೬
(೨) ಬ್ಯಾಂಕಿಂಗ ಕಂಪನಿಗಳ ಶಾಖೆಗಳ ನಿಯಂತ್ರಣ ಆ್ಯಕ್ಟ ೧೯೪೬
(೩) ರಿಝರ್ವ ಬ್ಯಾಂಕ ಆಫ್ ಇಂಡಿಯಾ (ತಾತ್ಪೂರ್ತಿಕ ದುರಸ್ತಿ) ಆ್ಯಕ್ಟ ೧೯೪೭

ಈ ಪ್ರಕಾರ ಬದಲಾವಣೆಗಳು ೧೯೪೬ನೆಯ ಸಾಲಿನ ಕಾಯದೆಯಲ್ಲಿ ಆದ್ದರಿಂದ ಮತ್ತು ೧೯೪೭ರಲ್ಲಿ ಹಿಂದೀ ಸ್ವಾತಂತ್ರ್ಯ ಕಾಯದೆಯು ಪಾಸಾದ್ದರಿಂದ ೧೯೪೮ರಲ್ಲಿ ಒಂದು ವಿಸ್ತಾರವಾದ ಕಾಯದೆಯನ್ನು ಸರಕಾರವು ಮಂಡಿಸಿತು. ಸಿಲೆಕ್ಟ ಕಮೀಟಿಯವರು ಮತ್ತೊಮ್ಮೆ ಅದನ್ನು ಸಂಪೂರ್ಣವಾಗಿ ವಿಚಾರಿಸಿದ ನಂತರ ಈ ಕಾಯದೆಯು ೧೭ನೆಯ ಫೆಬ್ರುವರಿ ೧೯೪೯ರಲ್ಲಿ ಪಾಸಾಗಿ ೧೬ನೆಯ ಮಾರ್ಚ ೧೯೪೯ರಲ್ಲಿ ಪ್ರಚಾರದಲ್ಲಿ ಬಂದಿತು.

## ೨. ಕಾಯದೆಯ ಉದ್ದೇಶವು

ಬ್ಯಾಂಕಿಂಗ ಕಂಪನಿಗಳಿಗೆ ಸಂಬಂಧಿಸಿದ ಕಾಯದೆಯನ್ನು ಸುಧಾರಿಸಿ ಸುಸಂಬದ್ಧವಾಗಿ ಮಾಡುವದೇ ಈ ಕಾಯದೆಯ ಉದ್ದೇಶವಿರುವದು.

## ೩. ಕಾಯದೆಯ ವಿಸ್ತಾರ; 'ಬ್ಯಾಂಕಿಂಗ ಕಂಪನಿಯ ಅರ್ಥವು'

'ಬ್ಯಾಂಕಿಂಗ' 'ಬ್ಯಾಂಕಿಂಗ ಕಂಪನಿ' ಮತ್ತು 'ಕಂಪನಿ' ಈ ಶಬ್ದಗಳನ್ನು ನಿಶ್ಚಯಿಸಿದ ನಂತರ 'ಬ್ಯಾಂಕಿಂಗ ಕಂಪನಿ'ಯ ನಿಜವಾದ ಅರ್ಥವು ಗೊತ್ತಾಗುವದು.

**'ಬ್ಯಾಂಕಿಂಗ'**:— ಜನರ ಹಣವನ್ನು ಠೇವುಗಳ ರೂಪದಲ್ಲಿ ಸ್ವೀಕರಿಸುವದು, ಕೊಡತಕ್ಕ ಹಣವನ್ನು 'ಚೆಕ್ಕು' 'ಡ್ರಾಫ್ಟ'ಗಳ ಮುಖಾಂತರ ಅವರು ಬೇಡಿದಂತೆ ತಿರುಗಿ ಕೊಡುವದು, ಈ ಮೇರೆಗೆ ದೊರಕಿದ ಹಣವನ್ನು ಸಾಲದಲ್ಲಿಯಾಗಲಿ, ವಿಶ್ವಾಸಪತ್ರಗಳಲ್ಲಿಯಾಗಲಿ ತೊಡಕಿಸುವದು ಬ್ಯಾಂಕಿಂಗದ ವ್ಯಾಪ್ತಿಯು.

**'ಬ್ಯಾಂಕಿಂಗ ಕಂಪನಿ'**:— ಬ್ಯಾಂಕಿಂಗದ ವ್ಯವಸಾಯವನ್ನು ಹಿಂದುಸ್ತಾನದ ಯಾವದೇ ಪ್ರಾಂತದಲ್ಲಿ ಮಾಡತಕ್ಕ ಕಂಪನಿಯು.

**'ಕಂಪನಿ'**:— ಇಂಡಿಯನ್ ಕಂಪನಿ ಅಕ್ಟ್ (೧೯೧೩) ದ ಮೇರೆಗೆ ಕಾರ್ಯವನ್ನು ಮಾಡಬಹುದಾದ ಕಂಪನಿಯು.

ಕಂಪನಿ ಕಾಯದೆಯ ಕಲಮು ೨೭೦ನೆಯ ಪ್ರಕಾರ ರಜಿಸ್ಟರಾಗದ ಕಂಪನಿಗಳು ಈ ಕಾಯದೆಯಲ್ಲಿ ಬರುವವು.

## ೪. ಭಾಗೀದಾರಿ ವ್ಯವಸಾಯಗಳಿಗೆ, ಮತ್ತು ಪರದೇಶದ ಕಂಪನಿಯವರಿಗೆ, ಈ ಕಾಯದೆಯ ಸಂಬಂಧವು

ಏಳು ಜನರಿಗಿಂತ ಹೆಚ್ಚಿದ್ದ ಭಾಗೀದಾರಿಯಾಗಲಿ, ಸಂಘವಾಗಲಿ, ಕಂಪನಿ ಕಾಯದೆಯ ಮೇರೆಗೆ ರಜಿಸ್ಟರಾಗದ ಕಂಪನಿಗಳೆಂದು ರದ್ದುಬಾತ ಆಗುವದರಿಂದ ಅವುಗಳಿಗೆ 'ಬ್ಯಾಂಕಿಂಗ ಕಂಪನಿ'ಗಳೆಂದೆನ್ನಬಹುದು. ಆದರೆ ನಿಜವಾದ ಬ್ಯಾಂಕಿಂಗ ಕಂಪನಿಯಂತೆ ವ್ಯವಸಾಯವನ್ನು ನಡೆಸತಕ್ಕ ಸಂಸ್ಥೆಗಳಿಗಷ್ಟೆ 'ಬ್ಯಾಂಕಿಂಗ ಕಂಪನಿ' ಯೆಂದು ಸಂಬೋಧಿಸಬಹುದು.

## ೫. ಕಾಯದೆಯ ವ್ಯಾಪ್ತಿ

ಈ ಕಾಯದೆಯು ಹಿಂದುಸ್ತಾನದ ಎಲ್ಲ ಪ್ರಾಂತಗಳಿಗೆ ಮತ್ತು ವಿಲೀನವಾದ ಎಲ್ಲ ಸಂಸ್ಥಾನಗಳಿಗೆ ಅನ್ವಯಿಸಲ್ಪಡುವದು.

## ೬. ಕಾಯದೆಯ ಪ್ರಾರಂಭವು

ಈ ಕಾಯದೆಯು ೧೯೪೯ನೆಯ ಮಾರ್ಚ ೧೬ನೆಯ ತಾರೀಖಿನಿಂದ ಪ್ರಚಾರದಲ್ಲಿ ಬಂದಿತೆಂದು ತಿಳಿಯಲಾಗಿದೆ. ಆದರೂ, ಈ ಕಾಯದೆಯ ಕ್ಷೆಯ ೫೪ನೆಯ ಕಲಮಿನಿಂದ ರಿಝರ್ವ ಬ್ಯಾಂಕ ಆಫ್ ಇಂಡಿಯಾದ ೧೮ನೆಯ ಕಲಮಿನ ತಿದ್ದುಪಡಿಯು ಮಾತ್ರ ೨೦ನೆಯ ಸಪ್ಟಂಬರ ೧೯೪೬ ರಲ್ಲಿಯೇ ಪ್ರಸಿದ್ಧ ಮಾಡಲ್ಪಟ್ಟಿದೆ ಎಂದು ತಿಳಿಯುತ್ತದೆ.

## ೭. ಕಾಯದೆಯನ್ನು ತಡೆಹಿಡಿಯುವದು

ರಿಝರ್ವ ಬ್ಯಾಂಕಿನ ಸೂಚನೆಯ ಮೇರೆಗೆ ಮಧ್ಯವರ್ತಿ ಸರಕಾರದವರಿಗೆ ಯೋಗ್ಯವೆಂದು ಕಂಡುಬಂದರೆ ಕಾಯದೆಯ ಎಲ್ಲ ಇಲ್ಲವೆ ಕೆಲವು ಕಲಮುಗಳನ್ನು ೬೦ ದಿವಸಗಳ ವರೆಗೆ ತಡೆಹಿಡಿಯಬಹುದು. ತೀರ ಅವಶ್ಯಕತೆಯಿದ್ದಾಗ, ರಿಝರ್ವ ಬ್ಯಾಂಕಿನ ಗವ್ಹರ್ನರರು ಈ ತರದ ತಡೆಹಿಡಿಯುವಿಕೆಯನ್ನು ೩೦ ದಿವಸಗಳ ವರೆಗೆ ಮಾಡಬಹುದು.

## ೮. ಬ್ಯಾಂಕಿಂಗ ಕಂಪನಿಗಳನ್ನು ವಿಮುಕ್ತಮಾಡುವ ಅಧಿಕಾರವು

ಯಾವದೊಂದು ಬ್ಯಾಂಕಿಂಗ ಕಂಪನಿಯನ್ನು ಇಲ್ಲವೆ ಕಂಪನಿಗಳನ್ನು ಯೋಗ್ಯ ಪರಿಸ್ಥಿತಿಯಲ್ಲಿ ಈ ಕಾಯದೆಯಿಂದ ಮುಕ್ತಮಾಡುವ ಅಧಿಕಾರವು ಮಧ್ಯವರ್ತಿ ಸರಕಾರಕ್ಕೆ ಇರುವದು.

## ೯. ಕಾಯದೆಯ ಮುಖ್ಯ ಕಲಮುಗಳು

(೧) ಸಾಲದ ವ್ಯವಹಾರದಲ್ಲಿಯಾಗಲಿ, ವಿಶ್ವಾಸಪತ್ರಗಳ ವ್ಯವಹಾರದಲ್ಲಿಯಾಗಲೀ ಹಣವನ್ನು ತೊಡಗಿಸುವಗೋಸುಗ ಜನರಿಂದ ಠೇವುಗಳನ್ನು ಸ್ವೀಕರಿಸಿ ತಿರುಗಿ ಕೊಡತಕ್ಕ ಎಲ್ಲ ಕಂಪನಿಗಳೂ ಈ ಕಾಯದೆಗೆ ಒಳಗಾಗುವವು.

(೨) ಬ್ಯಾಂಕಿಂಗ ಕಂಪನಿಗಳು ಮಾಡಬಲ್ಲ ವ್ಯವಹಾರದ ವರ್ಣನೆಯು.

(೩) ಇತರ ವ್ಯವಹಾರದಲ್ಲಿಯ ಹಾನಿಯು ತಟ್ಟಬಾರದೆಂದು ಬ್ಯಾಂಕಿಂಗ ಕಂಪನಿಗಳು ಬ್ಯಾಂಕಿಂಗದ ಹೊರತು ಮ್ಯಾನೇಜಿಂಗ ಎಜೆನ್ಸಿ ಪ್ರಕಾರ ಉದ್ಯೋಗದಲ್ಲಿ ತೊಡಗಲಾರವು.

(೪) ಮ್ಯಾನೇಜಿಂಗ ಏಜಂಟರ ತರಹದ ವ್ಯವಸ್ಥಾಪಕರಿರಲಾರರು.

(೫) ವಸೂಲಾದ ಬಂಡವಲಿನ ಮತ್ತು ರಿಝರ್ವ ಫಂಡಿನ ಕನಿಷ್ಟ ಮರ್ಯಾದೆಯು.

(೬) ಸ್ವಲ್ಪ ಜನರ ಅಧಿಕಾರದ ಮೂಲಕ ಅನೇಕ ಭಾಗೀದಾರರಿಗೆ ಹಾನಿ ತಟ್ಟದಂತೆ ಯೋಜನೆಯು.

(೭) ಬ್ಯಾಂಕಿಂಗ ಕಂಪನಿಗೆ ಶೇಅರುಗಳನ್ನು ದೊರಕಿಸುವ ಕೆಲಸಕ್ಕೆ ನೂರಕ್ಕೆ ೨ತ್ತರೂಪಾಯಿಗಿಂತ ಹೆಚ್ಚು ಕಮೀಶನ್ನು ಕೊಡಲಾಗದು.

(೮) ವಸೂಲಾಗತಕ್ಕ ಬಂಡವಲದ ತಾರಣದ ಮೇಲೆ ಸಾಲವನ್ನು ತೆಗೆಯಲಾಗದು.

(೯) ಕಂಪನಿಯ ಪ್ರಾರಂಭಿಕ ಖರ್ಚಿನ ಹಣವು ವಸೂಲಾಗುವ ವರೆಗೆ ಒಡ್ಡಿಯನ್ನು ಹಂಚತಕ್ಕದ್ದಲ್ಲ.

(೧೦) ಕನಿಷ್ಠ ರೋಖು ಶಿಲಕು ಮತ್ತು ರಿಝರ್ವ ಫಂಡು ಇಡಬೇಕಾಗುವ ಯೋಜನೆಯು.

(೧೧) ಅದೇ ಜನರು ಎರಡು ಬ್ಯಾಂಕಿಂಗ ಕಂಪನಿಗಳ ಡಾಯರೆಕ್ಟರರು ಇರಲಾರರು.

(೧೨) ಬ್ಯಾಂಕಿಂಗ ಕಂಪನಿಗಳು ಇತರ ಕಂಪನಿಗಳ ಶೇಅರುಗಳನ್ನು ಕೊಳ್ಳುವ ಮರ್ಯಾದಿತವಾದ ಹಕ್ಕು.

(೧೩) ತಮ್ಮ ಕಂಪನಿಯ ಶೇಅರುಗಳ ತಾರಣದ ಮೇಲೆ ತಮ್ಮ ಡಾಯರೆಕ್ಟರರಿಗೆ, ಅವರ ಸಂಬಂಧವಿದ್ದ ಕಂಪನಿಗಳಿಗೆ ಸಾಲವನ್ನು ಕೊಡಲಾಗದು.

(೧೪) ಸಾಲದ ವ್ಯವಹಾರದಲ್ಲಿ ರಿಝರ್ವ ಬ್ಯಾಂಕಿನವರ ನಿಯಂತ್ರಣ.

(೧೫) ಬ್ಯಾಂಕುಗಳಿಗೆ ಮತ್ತು ಶಾಖೆಗಳಿಗೆ ಲಾಯಸೆನ್ಸ ಕೊಡುವ ಪದ್ಧತಿ

(೧೬) ಹೊಸ ಶಾಖೆಗಳನ್ನು ಹೊರಡಿಸುವ ಬಗ್ಗೆ ಮತ್ತು ಇದ್ದ ಶಾಖೆಗಳನ್ನು ಬದಲಿಸುವ ಅಧಿಕಾರವು ಮರ್ಯಾದಿತವಾದದ್ದು.

(೧೭) ಸಾಕಷ್ಟು ವಿಶ್ವಾಸಪತ್ರಗಳ ಪ್ರಮಾಣದ ಆಸ್ತಿಯು ಕೈಯಲ್ಲಿ ಇರಲೇಬೇಕು. ಹಿಂದುಸ್ತಾನದಲ್ಲಿಯ ಹೊಣೆಗಾರಿಕೆಯನ್ನು ನೀಗಿಸುವದಕ್ಕೆ ಹಿಂದುಸ್ತಾನದಲ್ಲಿಯೇ ಸಾಕಷ್ಟು ಆಸ್ತಿಯಿರಬೇಕು.

(೧೮) ಒಂದು ವಿಶಿಷ್ಟ ಪ್ರಕಾರದ ತಾಳೆ ಬಂದು ಹಾಕಲಾಗಿದೆ. ಅದರ ಪರಿಶೀಲನೆ ಮತ್ತು ಮುದ್ರಣದ ಬಗ್ಗೆ ವಿಶಿಷ್ಟ ನಿಯಮಗಳ ಯೋಜನೆಯು.

(೧೯) ಮಾಹಿತಿ ಪತ್ರಗಳನ್ನು ನಿಯಮಿತ ಕಾಲಕ್ಕೆ ಬೇಡುವ, ಕಂಪನಿಗಳ ಪುಸ್ತಕಗಳನ್ನು ಮತ್ತು ಲೆಕ್ಕವನ್ನು ಪರೀಕ್ಷಿಸುವ ಅಧಿಕಾರವನ್ನು ರಿಝರ್ವ ಬ್ಯಾಂಕಿಗೆ ಕೊಟ್ಟಿದೆ. ಮತ್ತು ಠೇವುದಾರರಿಗೆ ಅಸುರಕ್ಷಿತವಿದ್ದ ಬ್ಯಾಂಕುಗಳ ಮೇಲೆ ಕ್ರಮ ನಡಿಸುವ ಅಧಿಕಾರವು ಮಧ್ಯವರ್ತಿ ಸರಕಾರಕ್ಕಿದೆ.

(೨೦) ದಿವಾಳಿಯ ಪ್ರಕರಣಗಳನ್ನು ತೀವ್ರವಾಗಿ ಮುಗಿಸಲಾಗುವದು.

(೨೧) 'ಇಂಪೀರಿಯಲ್ ಬ್ಯಾಂಕು' ಈ ಕಾಯಿದೆಯ ಕೆಲವು ಕಾನೂನುಗಳಿಗೆ ಒಳಪಟ್ಟಿದೆ.

(೨೨) ಬ್ಯಾಂಕಿಂಗ ವ್ಯವಹಾರದಲ್ಲಿರುವ ಖಾಸಗಿ ಕಂಪನಿಗಳ ಅಧಿಕಾರಪ್ರ ಮರ್ಯಾದಿತವಾದದ್ದು.

(೨೩) ಕಾಯದೆಯನ್ನು ಅವಮಾನಿಸಿದರೆ ಶಿಕ್ಷೆಯ ವಿವರ.

## ೧೦. ಕಂಪನಿಯ ಹೆಸರು

ಬ್ಯಾಂಕಿಂಗ ಉದ್ಯೋಗವನ್ನು ಮಾಡತಕ್ಕ ಎಲ್ಲ ಕಂಪನಿಗಳು 'ಬ್ಯಾಂಕ' 'ಬ್ಯಾಂಕರ್' ಇಲ್ಲವೆ 'ಬ್ಯಾಂಕಿಂಗ' ಎಂಬ ಹೆಸರನ್ನು ಪಡೆಯಲೇಬೇಕು.

## ೧೧. ಕಂಪನಿಯ ಘಟನೆಯು

(ಅ) ವಸೂಲಿಗೆ ತೆಗೆದ ಬಂಡವಲದ ಹಣವು ಅಧಿಕೃತ ಬಂಡವಲದ ಅರ್ಧಪ್ರಮಾಣ.

(ಬ) ವಸೂಲಾದ ಬಂಡವಲಿನ ಹಣವು ವಸೂಲಿಗೆ ತೆಗೆದ ಬಂಡವಲದ ಅರ್ಧ ಪ್ರಮಾಣ.

(ಕ) ಎಲ್ಲ ಶೇಅರುಗಳು ಸಾಮಾನ್ಯ ತರಗತಿಯ ಪ್ರಕಾರದ್ದು.

(ಡ) ಒಂದು ಶೇಅರಿಗೆ ಒಂದು ಮತದ ಪ್ರಮಾಣ. ಒಟ್ಟು ಮತಗಳ ೫ ಪ್ರಮಾಣಕ್ಕಿಂತ ಹೆಚ್ಚು ಮತಕೊಡುವ ಹಕ್ಕು ಒಬ್ಬನೇ ಶೇಅರುದಾರನಿಗೆ ಇರಕೂಡದು.

## ೧೨. ಕನಿಷ್ಠ (Minimum) ವಸೂಲಾದ ಬಂಡವಲು ಮತ್ತು ಒಟ್ಟು ರಿಝರ್ವ ಫಂಡು

ಈ ಕಾಯದೆಯು ಪ್ರಚಾರದಲ್ಲಿ ಬಂದ ನಂತರ ಹೊರಡುವ ಬ್ಯಾಂಕುಗಳಿಗೆ ಸಂಬಂಧಿಸಿದ ವಸೂಲಾದ ಬಂಡವಲು ಮತ್ತು ರಿಝರ್ವ ಫಂಡು ಇವುಗಳ ಕನಿಷ್ಠ ಮರ್ಯಾದೆಯು ನಿಶ್ಚಿತ ಮಾಡಲಾಗಿದೆ. ಈ ಮರ್ಯಾದೆಯು (ಅ) ಬ್ಯಾಂಕಿಂಗ ಕಂಪನಿಯು ಪ್ರಾಂತದಲ್ಲಿ ಇಲ್ಲವೆ ಇತರ ಕಡೆಗೆ ರಜಿಸ್ಟರಾದದ್ದು (ಬ) ಕಲಕತ್ತಾ ಇಲ್ಲವೆ ಮುಂಬಯಿ ಪಟ್ಟಣಗಳಲ್ಲಿ ಕಚೇರಿಗಳಿದ್ದದ್ದು (ಕ) ಬ್ಯಾಂಕಿನ ಕಚೇರಿಗಳು ಒಂದೇ ಪ್ರಾಂತದಲ್ಲಿ ಅಥವಾ ಒಂದಕ್ಕಿಂತ ಹೆಚ್ಚು ಪ್ರಾಂತಗಳಲ್ಲಿದ್ದದ್ದು—ಇವುಗಳ ಪ್ರಮಾಣಕ್ಕನುಸರಿಸಿ ಹಾಕಲಾಗಿದೆ—

ಇದರ ಸ್ಪಷ್ಟೀಕರಣವನ್ನು ಮುಂದೆ ಮಾಡಲಾಗುತ್ತದೆ:—

ಟಿಪ್ಪಣಿ:— ಕಂಪನಿ ಆ್ಯಕ್ಟದ ಕಲಮು (೨೭೭ I) (i) ಪ್ರಕಾರ ೫೦ ಸಾವಿರ ರೂಪಾಯಿಗಳ ಬಂಡವಲು ಇಲ್ಲದ ಹೊರತು ಬ್ಯಾಂಕಿಂಗ ಕಂಪನಿಗೆ ವ್ಯವಸಾಯವನ್ನು ಆರಂಭಿಸಲು ಬರುವಂತಿದ್ದಿಲ್ಲ. ಪ್ರಸ್ತುತ ಕಾಯದೆಯು ಈ ಕನಿಷ್ಠ ಮರ್ಯಾದೆಯನ್ನೇರಿಸಿತು ಮತ್ತು ಬ್ಯಾಂಕಿಂಗ ಕಂಪನಿಗಳ ಬಂಡವಲದ ಯೋಜನೆಯನ್ನು ಮೇಲೆ ವಿವರಿಸಿದ ಪ್ರಕಾರ ತೀರ ಸೂಕ್ಷ್ಮವಾಗಿ ಹಾಕಲಾಗಿದೆ. ಈ ಯೋಜನೆಯಿಂದ ಬ್ಯಾಂಕಿಂಗ ಕಂಪನಿಯ ಮುಖ್ಯ ಕಚೇರಿಯು ಒಂದುಸ್ಥಾನದಲ್ಲಿ ಅಥವಾ ಒಂದು ಸ್ಥಾನದ ಹೊರಗೆ ಇದ್ದುದು, ಮುಂಬಯಿ, ಕಲಕತ್ತಾ ನಗರಗಳಲ್ಲಿ ಅದರ ಕಚೇರಿಗಳಿದ್ದದ್ದು, ಅದರ ಕಚೇರಿಗಳು ಒಂದೇ ಪ್ರಾಂತದಲ್ಲಿ ಇಲ್ಲವೆ ಇತರ ಪ್ರಾಂತದಲ್ಲಿ ಯಾವದರೂ ಇದ್ದದ್ದು ತಿಳಿಯಬರುವದು. ಕಂಪನಿಯ ಮುಖ್ಯ ಕಚೇರಿಯು ಒಂದು ಸ್ಥಾನದ ಹೊರಗಿನ ಪ್ರದೇಶದಲ್ಲಿದ್ದರೆ, ಅದರ ವಸೂಲಾದ ಬಂಡವಲು ಮತ್ತು ರಿಝರ್ವ ಫಂಡು ಕೂಡಿ ೧೫ ಲಕ್ಷ ರೂಪಾಯಿಗಳಿಗಿಂತ ಕಡಿಮೆ ಇರಲಾರದು. ಒಂದಕ್ಕಿಂತ ಹೆಚ್ಚಿನ ಪ್ರಾಂತಗಳಲ್ಲಿ ಕಂಪನಿಯ ಕಚೇರಿಗಳಿದ್ದರೆ, ಅದರ ಮರ್ಯಾದೆಯು ೫ ಲಕ್ಷಕ್ಕಿಂತ ಕಡಿಮೆ ಇರಲಾರದು. ಇದರ ಹೊರತಾಗಿ ಅದರ ಕಚೇರಿಗಳು ಮುಂಬಯಿ, ಕಲಕತ್ತಾ ನಗರಗಳಲ್ಲಿದ್ದರೆ ಇನ್ನೂ ಹೆಚ್ಚಿನ ೫ ಲಕ್ಷರೂಪಾಯಿಗಳು ಇರಬೇಕಾಗುವದು. ಎಲ್ಲ ಕಚೇರಿಗಳು ಒಂದೇ ಪ್ರಾಂತದಲ್ಲಿದ್ದರೆ ಮುಖ್ಯ ಕಚೇರಿಯಗೋಸುಗ ೧ ಲಕ್ಷ ರೂಪಾಯಿಗಳು ಇರಬೇಕು. ಹೆಚ್ಚಿನ ಪ್ರತಿಯೊಂದು ಕಚೇರಿಗಾಗಿ ೨೫ ಸಾವಿರ ರೂಪಾಯಿಗಳಿರಬೇಕು.

## ೧೩. ಬ್ಯಾಂಕಿಂಗ್ ಕಂಪನಿಯ ವ್ಯವಹಾರವು

೩ನೆಯ ಕಲಮಿನಲ್ಲಿ ವಿವರಿಸಿದ 'ಬ್ಯಾಂಕಿಂಗ್'ದ ವ್ಯವಹಾರವನ್ನೇ ಕಂಪನಿಯು ಮಾಡಬಹುದು. ಇದರ ಹೊರತಾಗಿ 'ಬ್ಯಾಂಕಿಂಗ್' ವ್ಯವಸಾಯಕ್ಕೆ ಸಂಬಂಧಿಸಿದ ಇತರ ವ್ಯವಹಾರಗಳನ್ನಾದರೂ ಕಂಪನಿಯು ಮಾಡಬಹುದು. ಇಂಥ ವ್ಯವಹಾರದ ಸ್ವರೂಪವು ಎಲ್ಲರಿಗೂ ಗೊತ್ತಿರುವದು ಮತ್ತು ಬ್ಯಾಂಕುಗಳು ಈಗ ಸಾಗಿಸುವ ಉಪಕ್ರಮಕ್ಕೆ ಅವು ಒಳಗಾಗಿರುವವು.

## ೧೪. ಬ್ಯಾಂಕಿಂಗ್ ಕಂಪನಿಯ ವ್ಯವಸ್ಥಾಪಕರು ಮತ್ತು ವ್ಯವಸ್ಥೆಯು

(ಅ) ಕಂಪನಿಯ ವ್ಯವಸ್ಥಾಪಕರಲ್ಲಿ 'ಮ್ಯಾನೇಜಿಂಗ ಏಜೆಂಟರು' ಇರತಕ್ಕದ್ದಲ್ಲ

(ಬ) (i) ದಿವಾಳಿ ತೆಗೆದವನನ್ನು ಇಲ್ಲವೆ ನೀತಿಹೀನನಾದವನನ್ನು ವ್ಯವಸ್ಥಾಪಕರು ಕೆಲಸದಲ್ಲಿ ಇಡಲಾಗದು.

(ii) ಯಾವ ಕೆಲಸಗಾರನಿಗೂ ಕಮೀಶನ್ನಿನಂತೆ ಸಂಬಳವು ಅಥವಾ ಕಂಪನಿಗೆ ನೀಗಲಾರದ ಸಂಬಳವು ದೊರಕಲಾರದು.

(ಕ) ಕಂಪನಿಯ ಮ್ಯಾನೇಜರರು ಎರಡನೆಯ ಯಾವ ಕಂಪನಿಯ ಡಾಯರೆಕ್ಟರರು ಇರತಕ್ಕದ್ದಲ್ಲ. ಬೇರೆ ಇನ್ನಾವ ವ್ಯವಸಾಯದಲ್ಲಿ ಯಾದರೂ ಇರಕೂಡದು. ಮ್ಯಾನೇಜರ ಕರಾರಪತ್ರವು ೫ ವರ್ಷದ ಅವಧಿಯದೇ ಇರತಕ್ಕದ್ದು.

(ಡ) ಕಂಪನಿಯ ಡಾಯರೆಕ್ಟರರು ಇತರ ಬ್ಯಾಂಕಿಂಗ ಕಂಪನಿಯ ಡಾಯರೆಕ್ಟರರಿರತಕ್ಕದ್ದಲ್ಲ.

(ಇ) ಕಂಪನಿಯ ಶೇಅರುಗಳ ಮಾರಾಟದ ಬಗ್ಗೆ ವಸೂಲಾದ ಹಣದ ಬಗೆಗೆ ಯಾರಿಗೂ ೧೦೦ಕ್ಕೆ ೨½ ರೂಪಾಯಿಗಿಂತ ಹೆಚ್ಚಿನ ಕಮಿಶನ್ ಸಿಗಲಾರದು.

(ಫ) ಕಂಪನಿಯು ವಸೂಲಾಗತಕ್ಕ ಬಂಡವಲದ ತಾರಣದ ಮೇಲೆ ಸಾಲವನ್ನು ದೊರಕಿಸಕೂಡದು.

(ಜ) ಕಂಪನಿಯು ಪ್ರಾರಂಭವಾಗುವ ಕಾಲಕ್ಕೆ ಹತ್ತಿದ ಖರ್ಚಿನ ಹಣವು ಪೂರ್ಣವಾಗಿ ವಸೂಲಾಗದ ಹೊರತು ಶೇಅರುಗಳ ಮೇಲಿನ ಬಡ್ಡಿಯನ್ನು ಹಂಚಲಾಗದು.

## ೧೫. ರಿಝರ್ವ ಫಂಡು ಮತ್ತು ಕೈಯಲ್ಲಿಯ ರೋಖು ಹಣ

(ಅ) ಬ್ಯಾಂಕಿಂಗ್ ಕಂಪನಿಗಳು ರಿಝರ್ವ ಫಂಡನ್ನು ಇಡಲೇಬೇಕು. ವರ್ಷದ ಲಾಭದ ೧/೫ ಹಣವನ್ನು ಈ ಫಂಡಿಗೆ ಜಮಾ ಮಾಡತಕ್ಕದ್ದು.

(ಬ) ಅವಧಿಯ ಠೇವುಗಳ ಬಗ್ಗೆ ನೂರಕ್ಕೆ ೨ರಂತೆ ಮತ್ತು ಬಳಿಕೆ ಠೇವುಗಳ ಬಗ್ಗೆ ೫ ರಂತೆ ಯಾವಾಗಲೂ ರೋಖು ಕೈಯಲ್ಲಿಯಾಗಲಿ, ರಿಝರ್ವ ಬ್ಯಾಂಕಿನ ಖಾತೆಯಲ್ಲಾಗಲಿ ಇರತಕ್ಕದ್ದು.

## ೧೬. ಬ್ಯಾಂಕಿಂಗ್ ಕಂಪನಿಗಳ ಸಾಲದ ವ್ಯವಹಾರವು

ಕೆಳಗೆ ತೋರಿಸಿದ ತಾರಣದ ಮೇಲೆ ಕಂಪನಿಗಳು ಸಾಲವನ್ನು ಕೊಡಕೂಡದು.

(ಅ) ಅದೇ ಕಂಪನಿಯ ಶೇರುಗಳು; ತಾರಣವಿಲ್ಲದ ಸಾಲವನ್ನು ಡಾಯರೆಕ್ಟರರಿಗೆ, ಡಾಯರೆಕ್ಟರರ ಸಂಬಂಧವಿದ್ದ ಕಂಪನಿಗಳಿಗೆ, ಡಾಯರೆಕ್ಟರರು ಜಾಮೀನರಾದ ವ್ಯಕ್ತಿಗಳಿಗೆ—

(ಬ) ಡಾಯರೆಕ್ಟರರ ಸಂಬಂಧವಿದ್ದ ಕಂಪನಿಗಳಿಗೆ ತಾರಣವಿಲ್ಲದೆ ಸಾಲವನ್ನು ಕೊಟ್ಟಿದ್ದರೆ, ಅದರ ವಿವರವನ್ನು ಪ್ರತಿ ತಿಂಗಳ ರಿಝರ್ವ ಬ್ಯಾಂಕಿಗೆ ಕೊಡಬೇಕು.

(ಕ) ಕಂಪನಿಯು ವಿವರಣೆಯಲ್ಲಿ ಅಯೋಗ್ಯವಾದ ಸಾಲವನ್ನು ಕೊಟ್ಟದ್ದು ಕಾಡು ಬಂದರೆ ರಿಝರ್ವ ಬ್ಯಾಂಕಿನವರು ಸಾಲದ ವ್ಯವಹಾರವನ್ನು ನಿಲ್ಲಿಸಬಲ್ಲರು ಇಲ್ಲವೆ ಅದನ್ನು ಮರ್ಯಾದಿಸಬಲ್ಲರು.

(ಡ) ಬ್ಯಾಂಕಿಂಗ್ ಕಂಪನಿಗಳ ಸಾಲದ ಧೋರಣವನ್ನು ನಿಶ್ಚಯಿಸುವ ಅಧಿಕಾರವು ರಿಝರ್ವ ಬ್ಯಾಂಕಿಗೆ ಇರುವದು. ಎಲ್ಲ ಕಂಪನಿಗಳು ಅದರ ಅನುಕರಣವನ್ನು ಮಾಡಲೇಬೇಕು. ಯಾವ ತಾರಣದ ಮೇಲೆ ಎಷ್ಟು ಪ್ರಮಾಣದಿಂದ ಸಾಲವನ್ನು ಬ್ಯಾಂಕಿಂಗ್ ಕಂಪನಿಗಳು ಕೊಡಬೇಕೆಂಬುದರ ಬಗ್ಗೆಯಾದರೂ ಮತ್ತು ಬಡ್ಡಿಯ ದರವನ್ನಾದರೂ ರಿಝರ್ವ ಬ್ಯಾಂಕಿನವರು ಗೊತ್ತುಮಾಡಬಲ್ಲರು.

## ೧೭. ಬ್ಯಾಂಕಿಂಗ್ ಕಂಪನಿಗಳು ಎರಡನೆಯ ಕಂಪನಿಗಳ ಹಣವನ್ನು ತೊಡಗಿಸುವ ಬಗೆ

(ಅ) (i) ಟ್ರಸ್ಟ ವ್ಯವಹಾರವನ್ನು ಮಾಡುವದಕ್ಕೆ (ii) ಆಸ್ತಿಯ ವ್ಯವಸ್ಥಾಪಕರ ಕೆಲಸವನ್ನು ಮಾಡುವದಕ್ಕೆ (iii) 'ಸೇಫ್ ಡಿಪಾಜಿಟ್' ಕೋಣೆಗಳನ್ನು ಮಾಡುವದಕ್ಕೆ (iv) ಇತರ ಬ್ಯಾಂಕಿನ ವ್ಯವಹಾರಕ್ಕೆ ಹೊಂದಿದ ವ್ಯವಸಾಯವನ್ನು ಸಾಗಿಸುವದಕ್ಕೆ ಬ್ಯಾಂಕಿಂಗ್ ಕಂಪನಿಯವರು ತಮ್ಮ ಉಪಕಂಪನಿಗಳನ್ನು ಸ್ಥಾಪಿಸಬಹುದು.

(ಬ) ಕಂಪನಿಯು ಮ್ಯಾನೇಜರ, ಮ್ಯಾನೇಜಿಂಗ ಡಾಯರೆಕ್ಟರರ ಸಂಬಂಧವಿದ್ದ ಇತರ ಕಂಪನಿಗಳ ಶೇರುಗಳಲ್ಲಿ ಹಣವನ್ನು ಹಾಕತಕ್ಕದ್ದಲ್ಲ.

(ಕ) ಮೇಲಿನ ಹೊರತಾಗಿ ಇತರ ಯಾವ ಕಂಪನಿಯ ಶೇರುಗಳಲ್ಲಿ ಯಾವದೂ ಆ ಕಂಪನಿಯ ವಸೂಲಾದ ಬಂಡವಲದ ಮತ್ತು ರಿಝರ್ವ ಫಂಡದ ⅓ ಭಾಗಕ್ಕಿಂತ ಹೆಚ್ಚು ಹಣ ಇರಕೂಡದು.

ಈ ಕಲಮನ್ನು ದುರ್ಲಕ್ಷಿಸಿದರೆ, ಬ್ಯಾಂಕಿಂಗ್ ಕಂಪನಿಯು ಶಾಸನಕ್ಕೆ ಪಾತ್ರವಾಗುವದು.

## ೧೮. ಲಾಯಸೆನ್ಸದ ಯೋಜನೆಯು

(ಅ) ರಿಝರ್ವ ಬ್ಯಾಂಕಿನಿಂದ 'ಲಾಯಸೆನ್ಸ' ಪಡೆದ ಹೊರತು ಯಾವ ಕಂಪನಿಯೂ ಬ್ಯಾಂಕಿಂಗದ ವ್ಯವಹಾರವನ್ನು ಮಾಡಲಾರದು.

(ಬ) **'ಲಾಯಸೆನ್ಸ'ದ ಕರಾರುಗಳು**:–(i) ಕಂಪನಿಯು ಠೇವುದಾರರು ಹಕ್ಕಿನಿಂದ ಬೇಡಿದ ಪ್ರಕಾರ ಹಣವನ್ನು ತಿರುಗಿ ಕೊಡುವ ಪರಿಸ್ಥಿತಿಯಲ್ಲಿರಬೇಕು. (ii) ಕಂಪನಿಯ ವ್ಯವಹಾರವು ಠೇವುದಾರರ ಹಿತಕ್ಕೆ ಘಾತುಕವಾದದ್ದಿರಕೂಡದು.

(ಕ) ಈ ನಿರ್ಬಂಧಗಳನ್ನು ಬ್ಯಾಂಕಿಂಗ ಕಂಪನಿಗಳು ಪಾಲಿಸದಿದ್ದರೆ ರಿಝರ್ವ ಬ್ಯಾಂಕಿನವರು 'ಲಾಯಸೆನ್ಸ'ನ್ನು ರದ್ದು ಮಾಡುವರು.

## ೧೯. ಬ್ಯಾಂಕಿಂಗ ಕಂಪನಿಯ ಶಾಖಾ ಕಚೇರಿಗಳ ಸ್ಥಾಪನೆ ಮತ್ತು ಸ್ಥಳಾಂತರ

(i) ಹೊಸ ಕಚೇರಿಯ ಸ್ಥಾಪನೆ:— ರಿಝರ್ವ ಬ್ಯಾಂಕಿನ ಲೇಖಿ ಅಪ್ಪಣೆಯ ಹೊರತು ಯಾವ ಕಂಪನಿಯು ಹೊಸ ಶಾಖಾ ಕಚೇರಿಯನ್ನು ಸ್ಥಾಪಿಸಲಾರದು. ಈ ತರದ ಅಪ್ಪಣೆಯನ್ನು ಕೊಡುವ ಪೂರ್ವದಲ್ಲಿ ಅವರು ಕಂಪನಿಯ ಪುಸ್ತಕಗಳನ್ನು ಮತ್ತು ಲೆಕ್ಕವನ್ನು ಪರೀಕ್ಷಿಸುವರು. ಅದರಿಂದ ಕಂಪನಿಯ ಆರ್ಥಿಕ ಪರಿಸ್ಥಿತಿಯನ್ನೂ, ಪೂರ್ವೇತಿಹಾಸವನ್ನೂ ಪ್ರಚಲಿತ ಆಡಳಿತೆಯನ್ನೂ ಅದರ ಬಂಡವಲದ ವಸ್ತುಸ್ಥಿತಿಯನ್ನೂ ಮತ್ತು ಗಳಿಕೆಯ

ಬಲವನ್ನೂ ಅವರು ತಿಳಿದುಕೊಳ್ಳುವರು. ಮತ್ತು ಹೊಸ ಕಚೇರಿಯನ್ನು ಸ್ಥಾಪಿಸಿದರೆ ಜನರ ಹಿತವು ಸಾಧ್ಯವಾಗುವ ಬಗ್ಗೆ ಗೊತ್ತುಮಾಡಿಕೊಳ್ಳುವರು. (ii) ಇದ್ದ ಕಚೇರಿಯನ್ನು ಅದೇ ಪಟ್ಟಣದ ಹೊರತು ಬೇರೆ ಪಟ್ಟಣಕ್ಕೆ ಸ್ಥಳಾಂತರಿಸಬೇಕಾದರೂ ಮೇಲಿನ ನಿರ್ಬಂಧಗಳು ಅವಶ್ಯವು.

## ೨೦. ಅಸ್ತಿಯ ವಿವರ

(i) **ರೋಖು ಹಣ ಮತ್ತು ಕೂಡಲೆ ಹಣ ದೊರಕುವಂಥ ಅಸ್ತಿಯು:—** ಪ್ರತಿಯೊಂದು ಬ್ಯಾಂಕಿಂಗ ಕಂಪನಿಯು ಪ್ರತಿ ದಿವಸದ ತಮ್ಮ ಮುದ್ದತಿ ಮತ್ತು ಚಾಲತಿ ಠೇವುಗಳ ಹಣದ $\frac{1}{5}$ ಭಾಗವನ್ನು ರೋಖ ಹಣದ ರೂಪದಲ್ಲಿ, ಬಂಗಾರದಲ್ಲಿ ಇಲ್ಲವೆ ಇತರ ಮಾನ್ಯವಾದ ವಿಶ್ವಾಸಪತ್ರಗಳಲ್ಲಿ ಇಡಬೇಕು.

(ii) ಪ್ರತಿಯೊಂದು ಬ್ಯಾಂಕಿಂಗ ಕಂಪನಿಯ ಹಿಂದುಸ್ಥಾನದೊಳಗಿದ್ದ ಆಸ್ತಿಯು ಪ್ರತಿ ಮೂರು ತಿಂಗಳ ಕೊನೆಗೆ ಒಟ್ಟು ಠೇವಿನ $\frac{3}{4}$ ಪ್ರಮಾಣದಲ್ಲಿ ಯಾದರೂ ಇರಲೇಬೇಕು. ಇದರ ವಿವರವನ್ನು ಮೂರು ತಿಂಗಳಿಗೊಮ್ಮೆ ರಿಝರ್ವ ಬ್ಯಾಂಕಿಗೆ ಕಳಿಸಬೇಕು.

(iii) ಪ್ರತಿಯೊಂದು ಬ್ಯಾಂಕಿಂಗ ಕಂಪನಿಯವರು ಪ್ರತಿ ತಿಂಗಳದ ಕೊನೆಯ ಶುಕ್ರವಾರದ ದಿವಸ ಒಟ್ಟು ಹಿಂದುಸ್ಥಾನದಲ್ಲಿದ್ದ ತಮ್ಮ ಆಸ್ತಿಯ ವಿವರವನ್ನು ರಿಝರ್ವ ಬ್ಯಾಂಕಿನವರು ನಿಶ್ಚಯಿಸಿದ ಮೇರೆಗೆ ತಿಂಗಳ ಪತ್ರಿಕೆಯ ಪ್ರಕಾರ ಸಿದ್ಧಪಡಿಸಿ ಕಳಿಸಬೇಕು.

IV ಪ್ರತಿ ಆರು ತಿಂಗಳಿಗೊಮ್ಮೆ ಬ್ಯಾಂಕಿಂಗ ಕಂಪನಿಯು ಸಾಲಗಳ ವರ್ಗೀಕರಣವನ್ನು ರಿಝರ್ವ ಬ್ಯಾಂಕಿನವರು ಬೇಡಿದ ಮೇರೆಗೆ ಕೊಡಬೇಕಾಗುವದು.

(V) ವರ್ಷದ ಕೊನೆಗೆ ಆ ನಂತರದ ಒಂದು ತಿಂಗಳಲ್ಲಿ ರಿಝರ್ವ ಬ್ಯಾಂಕಿನವರು ಗೊತ್ತುಪಡಿಸಿದ ಪ್ರಕಾರ ಪ್ರತಿಯೊಂದು ಬ್ಯಾಂಕಿಂಗ ಕಂಪನಿಯವರು ಕಳೆದ ಹತ್ತು ವರ್ಷಗಳ ವರೆಗೆ ಖಾತೇದಾರರು ತಿರುಗಿ ಬೇಡದೆ ಉಳಿದಿರುವ ಠೇವುಗಳ ಪತ್ರಿಕೆಯನ್ನು ಸಿದ್ಧಮಾಡಿ ಕಳಿಸಬೇಕು.

## ೨೧. ಲೆಕ್ಕಗಳು ಮತ್ತು ತಾಳೇಬಂದು

(i) ಪ್ರತಿವರ್ಷದ ಕೊನೆಗೆ ಪ್ರತಿಯೊಂದು ಬ್ಯಾಂಕಿಂಗ ಕಂಪನಿಯು ತಾಳೇಬಂದು ಮತ್ತು ಲಾಭಹಾನಿ ಪತ್ರಿಕೆಯನ್ನು ಸಿದ್ಧಪಡಿಸಬೇಕು. ದೇಶದ ಪ್ರಾಂತದಲ್ಲಿ ಸ್ಥಾಪಿಸಿದ ಕಂಪನಿಯ ತಾಳೇಬಂದು ಮತ್ತು ಲಾಭಹಾನಿಯ ಪತ್ರಿಕೆಯಲ್ಲಿ ವರ್ಷದ ಕೊನೆಯದಿನ ಬ್ಯಾಂಕಿನಲ್ಲಿ ಆದ ಎಲ್ಲ ವ್ಯವಹಾರದ ವಿವರ ಇರಬೇಕು.

(ii) ಈ ಕಾಯಿದೆಯ ಕೊನೆಗೆ ಜೋಡಿಸಿದ ಪದ್ಧತಿಯ ಮೇರೆಗೆ ತಾಳೇ ಬಂದ ಮತ್ತು ಲಾಭಹಾನಿ ಪತ್ರಿಕೆಯನ್ನು ಸಿದ್ಧಪಡಿಸಬೇಕು.

(iii) ಈ ಮೇಲಿನ ಕಲಮಿನನ್ವಯ ಪತ್ರಿಕೆಗಳಿದ್ದರೂ ಸಹಿತ ಕಂಪನಿ ಆ್ಯಕ್ಟದಲ್ಲಿ ಉಲ್ಲೇಖಿಸಿದ ಪ್ರಕಾರ ತಾಳೇಬಂದ ಮತ್ತು ಲಾಭ ಹಾನಿ ಪತ್ರಿಕೆ ಇರಬೇಕು. ಮಾತ್ರ ಎರಡೂ ಒಂದಕ್ಕೊಂದು ವಿರುದ್ಧವಾಗಿರಕೂಡದು.

(i ) ತಾಳೇಬಂದು, ಲಾಭಹಾನಿಯ ಪತ್ರಿಕೆಯನ್ನು ಕಂಪನಿಯ ಮುಖ್ಯ ಅಧಿಕಾರಿಯೂ ಮೂರು ಜನರಿಗಿಂತ ಹೆಚ್ಚು ಡಾಯರೆಕ್ಟರರಿದ್ದರೆ ಮೂರು ಡಾಯರೆಕ್ಟರರು, ಮೂರು ಜನರಿಗಿಂತ ಕಡಿಮೆ ಡಾಯ ರೆಕ್ಟರರಿದ್ದರೆ ಎಲ್ಲ ಡಾಯರೆಕ್ಟರರೂ ಸಹಿಮಾಡಿ ಕಳಿಸಬೇಕು.

(\ ) ತಾಳೇಬಂದು, ಲಾಭಹಾನಿ ಪತ್ರಿಕೆಯು (ಆಡಿಟರರ ವರದಿ ಸಹಿತ) ಕಾಯಿದೆಯಲ್ಲಿ ಸೂಚಿಸಿದ ಮೇರೆಗೆ ಮುದ್ರಿಸಲ್ಪಡಬೇಕು. ಮತ್ತು ತಾಳೇಬಂದದ ತಾರೀಖಿನ ಮೂರು ತಿಂಗಳಲ್ಲಿ ರಿಝರ್ವಬ್ಯಾಂಕಿಗೆ ಮತ್ತು ಕಂಪನಿ ರಜಿಸ್ಟ್ರಾರರಿಗೆ ಅವುಗಳ ಮೂರು ಮೂರು ಪ್ರತಿ ಗಳನ್ನು ಕಳಿಸಿಕೊಡಬೇಕು.

(Vi) ಈ ಪತ್ರಿಕೆಯ ಹೊರತಾಗಿ ರಿಝರ್ವಬ್ಯಾಂಕಿನವರು ಹೆಚ್ಚಿನ ಸಂಗತಿ ಯನ್ನು ಕೇಳಬಹುದು. ಅವರಿಗೆ ಕೊಟ್ಟ ಉತ್ತರದ ಒಂದು ಪ್ರತಿ ಯನ್ನು ಕಂಪನಿ ರಜಿಸ್ಟ್ರಾರರಿಗೆ ಕಳಿಸಬೇಕು.

## ೨೦. ಖಾತೆಗಳ ಆಡಿಟ್ (ಲೆಕ್ಕ ಪರೀಕ್ಷಣ)

(i) ತಾಳೇಬಂದು ಮತ್ತು ಲಾಭಹಾನಿ ಪತ್ರಿಕೆಯನ್ನು ಅಧಿಕೃತರಾದ ಆಡಿಟರರು ಪರೀಕ್ಷಿಸಿ ವರದಿ ಬರೆಯಬೇಕು.

(ii) ಬ್ಯಾಂಕಿಂಗ ಕಂಪನಿಯ ಆಡಿಟರರ ಕರ್ತವ್ಯವು ಮತ್ತು ಹೊಣೆಗಾರಿಕೆಯು ಕಂಪನಿಕಾಯದೆಯಲ್ಲಿ ನಿಶ್ಚಯಿಸಿದ ಮೇರೆಗೆ ಇರುವವು.

(iii) ಆಡಿಟ್‌ವರದಿಯ ಮಸೂದೆಯು ಕಂಪನಿಯ ಕಾಯದೆಯಮೇರೆಗೆ ಇದ್ದು ಅದರಲ್ಲಿ ಕೆಳಗಿನ ಹೆಚ್ಚಿನ ವಿವರಣೆಯೂ ಇರಬೇಕು.

(ಅ) ಕಂಪನಿಯಿಂದ ದೊರಕಿದ ವೃತ್ತಾಂತವು ಸಮಾಧಾನಕಾರಕವಿದ್ದ ಬಗ್ಗೆ;

(ಬ) ಕಂಪನಿಯ ವ್ಯವಹಾರವು ಅದರ ಅಧಿಕಾರಕ್ಕೆ ಮರ್ಯಾದಿತವಾಗಿದ್ದ ಬಗ್ಗೆ;

(ಕ) ಕಂಪನಿಯ ಇತರ ಕಚೇರಿಗಳ ವಿವರಣೆಯು ಲೆಕ್ಕ ಪರಿಶೀಲನಕ್ಕೆ ಯೋಗ್ಯವಿದ್ದ ಬಗ್ಗೆ;

(ಡ) ಲಾಭಹಾನಿಯ ಪತ್ರಿಕೆಯು ವಸ್ತುಸ್ಥಿತಿಯು ನಿಜವಿದ್ದಬಗ್ಗೆ;

(ಮ) ಮತ್ತೇನಾದರೂ ಸಂಗತಿಯನ್ನು ಶೇರುದಾರರ ನಿದರ್ಶನಕ್ಕೆ ತರಬಹುದಾದಬಗ್ಗೆ;

(iv) ಲೆಕ್ಕಪರಿಶೀಲನೆಯ ಪತ್ರಿಕೆಯನ್ನು ತಾಳೇಬಂದು ಮತ್ತು ಲಾಭಹಾನಿ ಪತ್ರಿಕೆಯ ಜೊತೆಗೆ ಮುದ್ರಿಸಿ ಅದರ ಮೂರು ಮೂರು ಪ್ರತಿಗಳನ್ನು ರಜಿಸ್ಟ್ರಾರರಿಗೆ ಮತ್ತು ರಿಝರ್ವ ಬ್ಯಾಂಕಿಗೆ ಕಳಸಬೇಕು.

## ೨೧. ಬ್ಯಾಂಕಿಂಗ ಕಂಪನಿಗಳ ಪರೀಕ್ಷಣ

(i) ಕಾಯದೆಯ ಮೇರೆಗೆ ಮಧ್ಯವರ್ತಿ ಸರಕಾರದವರ ಅಪ್ಪಣೆಗನುಸರಿಸಿ ಯಾವದೇ ಬ್ಯಾಂಕಿಂಗ ಕಂಪನಿಯ ಪುಸ್ತಕಗಳನ್ನು ಮತ್ತು ಲೆಕ್ಕವನ್ನು ರಿಝರ್ವಬ್ಯಾಂಕು ತಮ್ಮ ಅಧಿಕಾರಿಗಳ ಮುಖಾಂತರ ಪರೀಕ್ಷಿಸಬಹುದು.

ii ಪರೀಕ್ಷಕ ಅಧಿಕಾರಿಗಳಿಗೆ ಅವಶ್ಯವಿದ್ದ ಎಲ್ಲ ಪುಸ್ತಕಗಳನ್ನು ಬ್ಯಾಂಕಿನವರು ಸ್ವಾಧೀನಪಡಿಸಬೇಕು. ಮತ್ತು ಅವರಿಗೆ ಎಲ್ಲ ವೃತ್ತಾಂತವನ್ನು ತಿಳಿಸಿ ಹೇಳಬೇಕು.

iii ರಿಝರ್ವ ಬ್ಯಾಂಕಿನ ಪರಿಶೀಲನ ಅಧಿಕಾರಿಯು ಬ್ಯಾಂಕಿಂಗ ಕಂಪನಿಯ ಡಾಯರೆಕ್ಟರ ಆಗಲಿ, ಇತರ ಅಧಿಕಾರಿಯಾಗಲಿ ಹೇಳಿದ ವೃತ್ತಾಂತವನ್ನು ಆಣೆ ಮಾಡಿಸಿ ಕೇಳಬಹುದು ಮತ್ತು ಆ ಅಧಿಕಾರಿಯು ಆಣೆಯ ಒಕ್ಕಣಿಕೆಯನ್ನಾದರೂ ಗೊತ್ತುಮಾಡಬಲ್ಲನು.

iv ರಿಝರ್ವ ಬ್ಯಾಂಕಿನವರು ತಮ್ಮ ಪರಿಶೀಲನೆಯ ವರದಿಯನ್ನು ಕಂಪನಿಗೆ ಮತ್ತು ಮಧ್ಯವರ್ತಿ ಸರಕಾರಕ್ಕೆ ಕಳಿಸುವರು.

v ಈ ಪ್ರಕಾರದ ಪರಿಶೀಲನ ವರದಿಯ ಬಗ್ಗೆ ವಿಚಾರಮಾಡುವ ಗೋಸುಗ ಕಂಪನಿಯವರು ಡಾಯರೆಕ್ಟರರ ಸಭೆಯನ್ನು ಕರೆಯಬೇಕೆಂದು ರಿಝರ್ವ ಬ್ಯಾಂಕಿನವರು ಆದೇಶಿಸುವರು. ಮತ್ತು ವರದಿಯಲ್ಲಿಯ ಸೂಚನೆಯ ಮೇರೆಗೆ ಕಂಪನಿಯ ವ್ಯವಸ್ಥೆಯಲ್ಲಿ ಬದಲು ಮಾಡಬೇಕೆಂದು ಸೂಚಿಸುವರು.

vi ವರದಿಯಲ್ಲಿಯ ಸೂಚನೆಗನುಸರಿಸಿ ಯೋಗ್ಯ ಕಂಡರೆ ಮಧ್ಯವರ್ತಿ ಸರಕಾರದವರು ಬ್ಯಾಂಕಿಂಗ ಕಂಪನಿಯು ಹೊಸ ಠೇವುಗಳನ್ನು ಸ್ವೀಕರಿಸುವ ಅಧಿಕಾರವನ್ನೂ ಕಸಿದುಕೊಳ್ಳುವರು. ಮತ್ತು ಕಂಪನಿಯ ಮೇಲಾದರೂ ದಿವಾಳಿ ತೆಗೆದ ಬಗ್ಗೆ ಯೋಗ್ಯ ಕ್ರಮ ತೆಗೆದುಕೊಳ್ಳುವರು.

vii ಈ ವರದಿಯನ್ನು ಅಥವಾ ಅದರ ಯೋಗ್ಯ ಭಾಗವನ್ನು ಸರಕಾರದವರು ಕಂಪನಿಗೆ ನೋಟೀಸು ಕೊಟ್ಟು ತಿಳಿಸಬಹುದು.

## ೨೪. ಬ್ಯಾಂಕಿಂಗ ಕಂಪನಿಗಳ ದಿವಾಳಿಯು

i ಕಂಪನಿಯು ತಾತ್ಕಾಲಿಕ ತೊಂದರೆಯಲ್ಲಿದ್ದರೆ ಕೋರ್ಟಿನ ಅಪ್ಪಣೆಯಿಂದ ಕೆಲವು ಅವಧಿಯವರೆಗೆ ಕೆಲಸ ನಿಲ್ಲಿಸಬಹುದು. ಸಾಕಷ್ಟು ಅವಧಿ ಸಿಕ್ಕರೆ ಕಂಪನಿಯು ತನ್ನ ಸಾಲ ತೀರಿಸಲು ಶಕ್ತವಾಗ

ಬಹುದೆಂದು ರಿಝರ್ವ್ ಬ್ಯಾಂಕಿನವರಿಗೆ ಅನಿಸಿದರೆ ಕೋರ್ಟಿನವರು ಈ ತರಹದ ಅಪ್ಪಣೆಯನ್ನು ಕೊಡಬಹುದು.

ii ಕಂಪನಿಯ ಕಾಯದೆಯ ಪ್ರಕಾರ ಕೋರ್ಟಿನವರು ಒಂದು ಕಂಪನಿಯನ್ನು ರದ್ದುಮಾಡಬಲ್ಲರು. ಬ್ಯಾಂಕಿಂಗ ಕಂಪನಿಗೆ ತನ್ನ ಸಾಲದ ಹಣವನ್ನು ತಿರುಗಿ ಕೊಡಲು ಅಶಕ್ಯವಿದ್ದದ್ದು ರಿಝರ್ವ್ ಬ್ಯಾಂಕಿಗೆ ಕಂಡುಬಂದರೆ ಅವರು ಆ ಕಂಪನಿಯನ್ನು ರದ್ದು ಮಾಡಬೇಕೆಂದು ಕೋರ್ಟಿನವರಿಗೆ ತಿಳಿಸುವರು.

iii ಕೋರ್ಟಿನಿಂದ ರದ್ದುಮಾಡಲಾದ ಬ್ಯಾಂಕಿಂಗ ಕಂಪನಿಯ ವ್ಯವಹಾರವನ್ನು ಮುಗಿಸುವಗೋಸುಗ ಕೋರ್ಟಿನವರು ರಿಝರ್ವ್ ಬ್ಯಾಂಕನ್ನು ಅಧಿಕೃತ ಲಿಕ್ವಿಡೇಟರರೆಂದು ನೇಮಿಸಬಹುದು.

iv ಅಧಿಕೃತ ಲಿಕ್ವಿಡೇಟರರು ಎರಡು ತಿಂಗಳದಲ್ಲಿ ಪ್ರಾಸ್ತಾವಿಕ ವರದಿಯನ್ನು ಕೋರ್ಟಿಗೆ ಹಾಜರ ಮಾಡಬೇಕಾಗುವದು. ಅದಕ್ಕನುಸರಿಸಿ ಕಂಪನಿಯ ಹತ್ತರ ಸಾಕಷ್ಟು ಆಸ್ತಿಯಿದ್ದರೆ ಪ್ರಾಸ್ತಾವಿಕ ಕಂಶನ್ನು ಹಂಚುವ ಬಗ್ಗೆ ಕೋರ್ಟಿನವರು ಆದೇಶಿಸುವರು.

v ಬ್ಯಾಂಕಿಂಗ ಕಂಪನಿ ಆ್ಯಕ್ಟದ ೩೯ನೆಯ ಕಲಮಿನ ಪ್ರಕಾರ ಬ್ಯಾಂಕಿಂಗ ಕಂಪನಿಯ ಪ್ರಕರಣವನ್ನು ನಿಲ್ಲಿಸುವ ಅಧಿಕಾರವು ಕೋರ್ಟಿನವರಿಗೆ ಇರುವದಿಲ್ಲ.

vi **ಪುನರ್ರಚನೆ ಮತ್ತು ಸಂಘಟನೆ**:— ರಿಝರ್ವ್ ಬ್ಯಾಂಕಿನ ಅಪ್ಪಣೆ ಇಲ್ಲದ ಹೊರತು ಕೋರ್ಟಿನವರು ಯಾವ ತರದ ಪುನರ್ರಚನೆಯ ಪ್ರಕರಣವನ್ನು ವಿಚಾರಿಸಲಾರರು. ಹಾಗೂ, ಬ್ಯಾಂಕಿಂಗ ಕಂಪನಿಗಳು ಒಂದನ್ನೊಂದು ಕೂಡಬೇಕಾದರೂ ಸಹಿತ ರಿಝರ್ವ್ ಬ್ಯಾಂಕಿನ ಅಪ್ಪಣೆಯನ್ನು ದೊರಕಿಸಬೇಕಾಗುವದು.

## ೨೫. ದುರ್ವರ್ತನವೂ ಮತ್ತು ಶಾಸನವೂ

i ವಿವರಣೆಗಳಲ್ಲಿ, ತಾಳೇಬಂದಿನಲ್ಲಿ, ಕಾಗದ ಪತ್ರಗಳಲ್ಲಿ, ಬೇಕೆಂತಲೇ ಸುಳ್ಳು ಸಂಗತಿಗಳನ್ನು ಬರೆದರೆ ಅಥವಾ ಮಹತ್ವದ

ಸಂಗತಿಯನ್ನು ಬುದ್ಧಿಪೂರ್ವಕವಾಗಿ ಬರೆಯದಿದ್ದರೆ ಸಂಬಂಧಿಸಿದವರು ಮೂರು ವರ್ಷದ ಕಾರಾವಾಸಕ್ಕೆ ಗುರಿಯಾಗುವನು.

ii ತಪಾಸಣೆಯ ಕಾಲಕ್ಕೆ ಯಾರಾದರೂ ಅವಶ್ಯವಿದ್ದ ಪುಸ್ತಕಗಳನ್ನು ಮತ್ತು ಕಾಗದಪತ್ರಗಳನ್ನು ಸಾದರಪಡಿಸದಿದ್ದರೆ. ಮತ್ತು ಅಧಿಕಾರಿಗಳು ಕೇಳಿದ ಪ್ರಶ್ನೆಗೆ ಉತ್ತರ ಕೊಡದಿದ್ದರೆ ಪ್ರತಿಯೊಂದು ದುರ್ವರ್ತನಕ್ಕೆ ೫೦೦ ರೂಪಾಯಿಗಳ ದಂಡಕ್ಕೆ ಗುರಿಯಾಗುವರು.

iii ಮಧ್ಯವರ್ತಿ ಸರಕಾರದ ಆದೇಶವನ್ನು ದುರ್ಲಕ್ಷಿಸಿ ಬ್ಯಾಂಕಿಂಗ ಕಂಪನಿಯು ಹೊಸ ಠೇವನ್ನು ಸ್ವೀಕರಿಸಿದರೆ ಕಂಪನಿಯ ಎಲ್ಲ ಡಾಯರೆಕ್ಟರರಿಗೆ ಠೇವಿನ ಎರಡರಷ್ಟು ಹಣದ ದಂಡವನ್ನು ಮಾಡಬಹುದು.

iv ಕಾಯದೆಯಲ್ಲಿ ನಿಯಮಿಸಿದಂತೆ ಒಟ್ಟು ಠೇವಿನ ಪ್ರಮಾಣಕ್ಕನುಸರಿಸಿ ೭೫ ಭಾಗವು ಕೈಯಲ್ಲಿರತಕ್ಕ ಬಗ್ಗೆ ಮತ್ತು ಪ್ರತಿ ಮೂರು ತಿಂಗಳಿಗೊಮ್ಮೆ ೭೫ ಭಾಗವನ್ನು ಈ ದೇಶದಲ್ಲಿಡತಕ್ಕ ನಿರ್ಬಂಧವನ್ನು ಉಲ್ಲಂಘಿಸಿದರೆ ರಿಝರ್ವ್ ಬ್ಯಾಂಕಿನ ಹೇಳಿಕೆಯ ಮೇರೆಗೆ ಕಂಪನಿಯನ್ನು ಕೋರ್ಟಿನಿಂದ ರದ್ದುಪಡಿಸಲಾಗುವದು. ಇದರ ಹೊರತಾಗಿ ಎಲ್ಲ ಡಾಯರೆಕ್ಟರರಿಗೆ ೫೦೦ ರೂಪಾಯಿಯ ದಂಡವಾಗಬಹುದು.

ಈ ಕಾಯದೆಯಿಂದ ರಿಝರ್ವ್ ಬ್ಯಾಂಕಿನ ಅಧಿಕಾರದ ಮತ್ತು ಹೊಣೆಗಾರಿಕೆಯ ವ್ಯಾಪ್ತಿ ತೀರ ಹೆಚ್ಚಿಸಲಾಗಿದೆ. ನಮ್ಮ ದೇಶದಲ್ಲಿಯ ರಿಝರ್ವ್ ಬ್ಯಾಂಕು ೧೫ ವರ್ಷದಿಂದ ಕೆಲಸವನ್ನು ಮಾಡಹತ್ತಿರುವದು. ಈ ಅವಧಿಯಲ್ಲಿ ಬ್ಯಾಂಕಿನ ಅಧಿಕಾರಿಗಳು ಸಾಕಷ್ಟು ಅನುಭವಿಕರಿರುವದು ಅಸಂಭವವಾದದ್ದು. ಅನುಭವವಿದ್ದ ಜನರ ಅಭಾವದ ಮೂಲಕ ಕಾಯದೆಯಲ್ಲಿಯ ಎಲ್ಲ ಕಾರ್ಯಭಾರವು ಸಮಾಧಾನಕಾರಕವಾಗಿ ನೀಗಬಹುದೆಂದು ಅಪೇಕ್ಷಿಸುವದೂ ಅತಿಶಯೋಕ್ತಿಯಾಗುವದು. ಅಧಿಕಾರಿಗಳ ತಪ್ಪಿನಿಂದ ದೇಶದಲ್ಲಿಯ ಸಮಗ್ರ ಬ್ಯಾಂಕಿಂಗ ಘಟನೆಗೆ ಹಾನಿತಟ್ಟಬಹುದು. ಬ್ಯಾಂಕಿನ ಅಧಿಕಾರಿಗಳಿಗೆ ತಕ್ಕ ಅನುಭವ ಬರುವವರೆಗೆ ಬೇರೆ ಅನುಭವಿಕ ಬ್ಯಾಂಕರರ

ಉಪದೇಶವನ್ನು ದೊರಕಿಸಿದರೆ ಒಳಿತಾಗುವದು. ಇದರ ಬಗ್ಗೆ ಕಾಯದೆ ಯಲ್ಲಿ ವ್ಯವಸ್ಥೆ ಇಲ್ಲದಿದ್ದರೂ ಅವರು ಈ ತರದಿಂದ ಇತರ ಬ್ಯಾಂಕರರ ಉಪ ಯೋಗವನ್ನು ಮಾಡುವರೆಂದು ನಂಬುವೆವು. ಪಾಕಿಸ್ತಾನದಲ್ಲಿಯ ಸ್ಟೇಟ ಬ್ಯಾಂಕಿನವರು ಈ ಪ್ರಕಾರದ ಯೋಜನೆಯನ್ನು ಕಾಯಿದೆಯಿಂದಲೇ ಮಾಡಿರುವರು.

ಕೆಲವು ಸಣ್ಣ ಬ್ಯಾಂಕುಗಳ ಮತ್ತು ಹೊಸ ಬ್ಯಾಂಕುಗಳ ಹೊರತು ಇತರ ಸಂಸ್ಥೆಗಳ ವ್ಯವಸ್ಥೆಯು ಯೋಗ್ಯವಿದ್ದುದರಿಂದ ದೇಶದ ಬ್ಯಾಂಕಿಂಗ ಪರಿಸ್ಥಿತಿಯೇ ಕೆಟ್ಟಿದೆಯೆಂದು ನಾವು ಗಣಿಸಲಾರೆವು. ಆದ್ದರಿಂದ ಕಾಯ ದೆಯು ರಿಝರ್ವ ಬ್ಯಾಂಕಿನವರಿಗೆ ಅರ್ಪಿಸಿದ ಅಧಿಕಾರವನ್ನು ಅವರು ತೀರ ಆವಶ್ಯವಿದ್ದಾಗ ಮತ್ತು ಅತಿ ದಕ್ಷತೆಯಿಂದ ಉಪಯೋಗಿಸುವರೆಂದು ನಂಬುವೆವು. ದಿನದ ವ್ಯವಹಾರದಲ್ಲಿ ಅವರು ಕಂಡ ಕಂಡಂತೆ ಕೈಹಾಕುವ ಹವ್ಯಾಸವು ಮತ್ತು ಎಲ್ಲ ಬ್ಯಾಂಕುಗಳ ರಾಷ್ಟ್ರೀಕರಣದ ಹಂಬಲವು ಸಾಧಾ ರಣ ಒಂದೇ ತರದ್ದಿರುವವು. ಸರಕಾರದ ಅಂತಿಮ ಧ್ಯೇಯವು ಬ್ಯಾಂಕುಗಳ ರಾಷ್ಟ್ರೀಕರಣವಿದ್ದರೆ ಅವರು ಹಾಗೆ ನೇರವಾಗಿ ಹೇಳಬಲ್ಲರು. ಸಾಮಾನ್ಯ ಜನರ ಕೈಯಲ್ಲಿ ಬ್ಯಾಂಕುಗಳನ್ನು ಬಿಟ್ಟುಕೊಡುವ ಉಪಕ್ರಮವು ಮತ್ತು ಅವುಗಳ ವ್ಯವಹಾರವನ್ನು ಅನಿಯಂತ್ರಿತ ರೀತಿಯಿಂದ ನಿಯಂತ್ರಿಸುವ ಉಪಕ್ರಮವು ಒಂದಕ್ಕೊಂದು ವಿಸಂಗತವಾದವುಗಳಿರುವವು. ಅಲ್ಲಲ್ಲಿ ದೋಷಗಳು ಇದ್ದದ್ದು ಕಂಡಕೂಡಲೆ ಬಾಲ್ಯಾವಸ್ಥೆಯಲ್ಲಿದ್ದ ನಮ್ಮ ಬ್ಯಾಂಕಿನ ವ್ಯವಹಾರವನ್ನು ಈ ಪರಿಯಿಂದ ನಿರ್ಬಂಧಿಸಿ ಅವರ ಕಾರ್ಯ ಭಾಗವನ್ನು ಸಂಕುಚಿತವಾಗಿ ಮಾಡಿದರೆ ಈ ವ್ಯವಸಾಯವು ಶೀಘ್ರಗತಿ ಯಿಂದ ಬೆಳೆಯುವದೆಂದು ನಮಗೆ ಅನಿಸುವದಿಲ್ಲ.

ಠೇವುದಾರರ ಹಿತದ ಸಂರಕ್ಷಣೆಯು ಈ ಕಾಯದೆಯ ಮೊದಲನೆಯ ಉದ್ದೇಶವಿದ್ದು, ದೇಶದ ಆರ್ಥಿಕ ಪರಿಸ್ಥಿತಿಯು ಸಮಾಧಾನಕರವಾಗಿ ಬೆಳೆ ಯುವದಕ್ಕೆ ಉಚ್ಚ ತರದ ಬ್ಯಾಂಕಿಂಗದ ಘಟನೆಯು ಅವಶ್ಯವಾದ ಸಾಧನ ವಿದ್ದುದರಿಂದ ಅದು ಚೆನ್ನಾಗಿ ಬೆಳೆಯಬೇಕೆಂಬುದು ಎರಡನೆಯ ಉದ್ದೇಶ ವಿರುವದು. ಎರಡನೆಯ ಉದ್ದೇಶವು ಸಾಧ್ಯವಾಗುವದಕ್ಕೆ ದೇಶದಲ್ಲಿಯ

ಅಂತಸ್ತು ಸಾವುಕಾರರ ಬಗ್ಗೆಯಾದರೂ ಯೋಜನೆಯನ್ನು ಸಮಾವೇಶ ಮಾಡಬೇಕಾಗಿತ್ತು. ಅವರನ್ನು ಕೇವಲ ಪ್ರಾಂತಿಕ ಸರಕಾರದವರ ಕಡೆಗೆ ಒಪ್ಪಿಸಿದರೆ ಸಾಕಾಗಬೆಂದು ತೋರುವದು. ಈ ಸಾವುಕಾರಿಕೆ ವ್ಯವಸಾಯ ವನ್ನು ಬ್ಯಾಂಕುಗಳ ಘಟನೆಗೆ ಹೊಂದಿಸಿದ್ದರೆ ಬ್ಯಾಂಕಿಂಗದ ಘಟನೆಗೆ ಕೆಳಗಿನಿಂದ ಮೇಲ್ತನಕ ಭದ್ರ ಕಟ್ಟಡವಾಗಬಹುದಾಗಿತ್ತು. ತಳಹದಿಯಾಗಿ ರುವ ಈ ಜನರ ಮೂಲಕವೇ ಜನರಲ್ಲಿ ಬ್ಯಾಂಕಿಂಗದ ಚಟವು ಬೆಳೆಯ ಬಹುದಾಗಿತ್ತು. ಆದ್ದರಿಂದ ಈ ತರದ ಮಹತ್ವವಾದ ಕಾರ್ಯಭಾಗವು ಈಗ ಸಾಮಾನ್ಯ ಬ್ಯಾಂಕಿಂಗ್ ಕಂಪನಿಗಳ ಕೈಯಲ್ಲಿ ಉಳಿದಿದೆಯೆಂದೂ ತಿಳಿಯಬಹುದು.

## ಸಾರಾಂಶ

ಬ್ಯಾಂಕಿಂಗ ಸಂಸ್ಥೆಯು ಠೇವುದಾರರ ಯಶಸ್ವಿತೆಯು ಮತ್ತು ಸಾಲ ಗಾರರ ಉದ್ಯೋಗಶಕ್ತಿಯು ಆಧಾರಸ್ತಂಭವಿರುವದು. ಠೇವುದಾರರ ವಿಶ್ವಾಸ ದಲ್ಲಿ ಮತ್ತು ಸಾಲಗಾರರ ಪಾತ್ರತೆಯಲ್ಲಿ ಈ ಸ್ತಂಭದ ಬಲವು ನೆಲೆಗೊಂಡಿ ರುವದು. ಕುರುಡನಿಗೆ ಕೈಯಲ್ಲಿದ್ದ ಕೋಲಿನ ಆಧಾರದಂತೆ ಉದ್ಯೋಗಕ್ಕೆ ಹಣದ ಆಧಾರವು ಬೇಕಾಗುವದು. ಸಮಾಜದ ಆರ್ಥಿಕ ಉನ್ನತಿಯು ಬ್ಯಾಂಕಿನವರು ತಮ್ಮ ಕಠಿಣವಾದ ಕಾರ್ಯಭಾರವನ್ನು ಸಾಗಿಸುವದರ ಮೇಲೆಯೇ ಅವಲಂಬಿಸಿರುವದು.



# ಈ ಪುಸ್ತಕದಲ್ಲಿ ಬಳಸಿದ ಕೆಲವು ಶಬ್ದಗಳ ವಿವರಣೆ



Creditor = ಧನಕೋ

Debtor = ಋಣಕೋ

Paid up Capital = ಭಾಗೀದಾರರಿಂದ ವಸೂಲಾದ ಹಣ

Reserve and Contingency Funds = ಕಾದಿಟ್ಟ ಹಣ

Gilt edged Investments = ಸರಕಾರಿ ವಿಶ್ವಾಸಪತ್ರಗಳಲ್ಲಿ ತೊಡಗಿಸಿದ ಹಣ

Advances = ಸಾಲ ಕೊಟ್ಟ ಹಣ

Preference Shares = ಮೇಲ್ತರದ ಭಾಗಗಳು (ಶೇಅರುಗಳು)

Ordinary Shares = ಸಾಮಾನ್ಯ ಭಾಗಗಳು

Deferred Shares = ಹಿಂಕ್ಕ ಭಾಗಗಳು

Fixed Deposits = ಅವಧಿಯ ಇಡಗಂಟು, ಮುದ್ದತಿ ಠೇವು

Savings Bank Deposit = ಉಳಿಕೆಯ ಇಡಗಂಟು

Current Deposits = ಬಳಿಕೆಯ ಇಡಗಂಟು, ಚಾಲತಿ ಠೇವು

Initial Deposits = ಪ್ರಾರಂಭದ ಇಡಗಂಟು

Joint Accounts = ಜೋಡು ಖಾತೆ

Partnership Accounts = ಭಾಗೀದಾರರ ಖಾತೆ

ಕಾರಣ = ಅಡವು, ಒತ್ತಿ

